ಾ ಗ್ರಂಥ ಮಾಲಾ

# ಸಂಕಲನ





"ಸರಸ್ವತಿ" ಯಿಂದ ಆರಿಸಿದುದು

ಪ್ರಕಾಶಕರು
ಶಾರದಾ ಗ್ರಂಥಮಾಲಾ,
ಚಾಮರಾಜಪೇಟೆ, ಬೆಂಗಳೂರು ಸಿಟಿ.




ಬೆಲೆ ಆಣೆ ೦—೮—೦

# ಶಾರದಾ ಗ್ರಂಥಮಾಲಾ

| | |
|---|---|
| ಪ್ರಿಯಂವದೆ (ಸಾಮಾಜಿಕ ನಾಟಕ) | ೦- |
| ಇಂದಿರೆ (ಕಾದಂಬರಿ) | ೦-೧ |
| ಹಿಂದೂ ಭಾಗ್ಯೋದರ (ಮಕ್ಕಳ ನಾಟಕ) | ೦- |
| ಸ್ನೇಹಲತೆ (ಸಾಮಾಜಿಕ ನಾಟಕ) | ೦-೧ |
| ನಿರ್ಮಲೆ (ಕಾದಂಬರಿ) | ೦- |
| ಸತಿ ಪದ್ಮಿನಿ (ಐತಿಹಾಸಿಕ ನಾಟಕ) | ೧- |
| ಷಾಜಹಾನ್ ,, | ೦-೧ |
| ಬ್ಯಾರಿಷ್ಟರ್ ರಾಮಚಂದ್ರನ್ (ಸಾಮಾಜಿಕ ಪ್ರಹಸನ) | ೦- |
| ಸಂಕಲನ | ೦- |
| ರಣಕೇಸರಿ (ಅಚ್ಚಿನಲ್ಲಿದೆ) | |

ಓಂ

# ಸರಸ್ವತಿ

ಂಪುಟ ೫ } ಕ್ರೋಧನ ವರ್ಷ—ವೈಶಾಖ ಮಾಸ { ಸಂಚಿಕೆ ೧

## ಸ್ವವಿಷಯ

ತನಗೊದಗಿದ್ದ ನಾನಾವಿಧವಾದ ತೊಡರುಗಳನ್ನು ಬಿಡಿಸಿಕೊಂಡು ುದಾರಚಿತ್ತವುಳ್ಳ ಸೋದರಸೋದರಿಯರ ಪೋಷಕತ್ವದ ಪರಮಾಶ್ರಯ ಂದ "ಸರಸ್ವತಿ"ಯು ತನ್ನ ಸೋದರವೃಂದದ ಸೇವೆಗೈಯಲು ಕ್ರೋಧನ ರ್ಷದಿಂದ ಸೋದರಸೋದರಿಯರಿಗೆ ನೂತನ ವರ್ಷಾಶೀರ್ವಾದವನ್ನು ೀರುತ್ತ ಮತ್ತೆ ಹೊರಟಿರುವಳು. ದೇಶಬಾಂಧವರೂ ಕರ್ನಾಟಕಾಭಿ ಮಾನಿಗಳೂ ದೇಶಭಾಷಾಧುರಂದರರೂ ತನಗೆ ಬಜೆಬೆಣ್ಣೆಯನ್ನಿತ್ತು ರಕ್ಷಿಸಬೇಕೆಂದು ಪುತ್ರನಿರ್ವಿಶೇಷವಾತ್ಸಲ್ಯದಿಂದ ಪ್ರಾರ್ಥಿಸುವಳು.

ಈ ಕ್ರೋಧನವರ್ಷವು ಸಮಸ್ತ ಪ್ರಜಾಕೋಟಿಗೂ ಸರಸ್ವತಿಯ
ಪೋಷಕರಿಗೂ ಲೇಖಕರಿಗೂ ಚಂದಾದಾರರಿಗೂ
ಸಕಲ ಸಸ್ಮಂಗಳವನ್ನುಂಟುಮಾಡಲಿ.
ಓಂ ಶಾಂತಿಶ್ಯಾಂತಿಶ್ಯಾಂತಿಃ.

# ಹೊಸ ವರುಷ.

ದಿವಸಗಳಮೇಲೆ ದಿವಸಗಳೂ, ವಾರಗಳಮೇಲೆ ವಾರಗಳೂ, ಮಾಸಗಳಮೇಲೆ ಮಾಸಗಳೂ, ಉರುಳಿ ಹೋಗುತ್ತಲಿವೆ. ಹೀಗೆ ಎಷ್ಟೋ ದಿನಗಳು ಹೋಗಿರುತ್ತವೆ. ಮುಂದೆ ಎಷ್ಟೋ ಅಸಂಖ್ಯಾತವಾದ ದಿನಗಳು ಹೋಗಲು ಸಿದ್ಧವಿರುತ್ತವೆ. ಹೋದವೇಳೆಯು ಬೇರೆ ಹಿಂತಿರುಗಿ ಬರುವಂತಿಲ್ಲ; ಅಥವಾ ಮುಂದೆಬರುವ ವೇಳೆಯನ್ನು ತಡೆದು ನಿಲ್ಲಿಸುವಂತಿಲ್ಲ. ಭಗವಂತನ ಅಗಾಧವಾದ ಲೀಲೆಯ ಪ್ರಭಾವವಿದು ! ಇರಲಿ.

ಈ ಚಿಕ್ಕಲೇಖನದ ಉದ್ದೇಶವೇನೆಂದರೆ, ನಮ್ಮ ಕನ್ನಡದ ಬಂಧುಗಳೆದುರಿಗೆ, ಹೊಸವರುಷದ ಮಹತ್ವವನ್ನು ಸಂಕ್ಷೇಪವಾಗಿ ಇರಿಸಿ ಹೊಸ ವರುಷದ ಅಭಿನಂದನಗಳನ್ನರ್ಪಿಸುವದಾಗಿರುತ್ತದೆ. "ಹೊಸ ವರುಷದ ಮಹತ್ವವೆಂದರೇನು ?" ಎಂಬ ಪ್ರಶ್ನೆಯು ನಮ್ಮ ವಾಚಕವೃಂದದಿಂದ ಹೊರಡಬಹುದು. ಇದರ ಅರ್ಥವನ್ನು ವಾಚಕರೇ ಊಹಿಸಲಿ.

ನಮ್ಮ ಪ್ರಾಚೀನ ಕನ್ನಡಿಗರು ಕೂಡ ಎಷ್ಟೋ ಹೊಸ ವರುಷಗಳನ್ನು ನಮ್ಮಂತೆ ಬರಮಾಡಿಕೊಂಡರು. ಈಗ ನಾವುಗಳು ಕೂಡ ಬರಮಾಡಿಕೊಳ್ಳುತ್ತಲಿರುವೆವು. ಆದರೆ, ನಮಗೂ ಅವರಿಗೂ ಇಷ್ಟೇ ವ್ಯತ್ಯಾಸವಿರುವದು.

ಅವರು ಹೊಸವರುಷಗಳನ್ನು ಬರಮಾಡಿಕೊಂಡಂತೆ, ಹೊಸ ಉತ್ಸಾಹದಿಂದಲೂ, ಹೊಸ ಹುರುಪಿನಿಂದಲೂ, ಹೊಸ ಹೊಸ ಮಹಾಕಾರ್ಯಗಳನ್ನು ಪ್ರಾರಂಭಿಸಿ ಪ್ರಪಂಚದಲ್ಲಿ ಕರ್ನಾಟಕವೆಂಬದೊಂದು ಪ್ರದೇಶವು ಇರುವದೆಂಬುದನ್ನು ಇಡೀಜನಾಂಗಕ್ಕೆಲ್ಲ ಪ್ರಕಟಿಸಿದರು. ಇದಕ್ಕೆ ಸಾಕ್ಷಿಯಾಗಿ, ಕರ್ನಾಟಕದಲ್ಲಿಯು ವಿಲಕ್ಷಣವಾದ ಕಟ್ಟಡಗಳೂ, ಅಸಮಾನವಾದ ಗ್ರಂಥಗಳೂ ನಿಂತಿರುತ್ತವೆ. ನಮ್ಮ ಪ್ರಾಚೀನ ಕನ್ನಡಿಗರು, ಪ್ರಗತಿಯಮಾರ್ಗದಲ್ಲಿ ಹೇಗೆ ಕ್ಷಣೇ ಕ್ಷಣೇ ಪ್ರವರ್ಧಮಾನರಾದರೆಂಬುದನ್ನು ಸ್ವಲ್ಪ ವಿಚಾರದಲ್ಲಿ ತಂದರೆ, ಈಗಿನ ಕನ್ನಡಿಗರು ತಲೆ

ಯನ್ನು ತಗ್ಗಿಸಿ, ಮುಖವನ್ನು ಮುಚ್ಚಿಕೊಳ್ಳದೆ ಇರಲಾರನು. ಒಂದು ವೇಳೆ, ಹೇಗೋ ಒಂದುಬಗೆಯಿಂದ ಕೆಲವು ಪ್ರಾಚೀನಕನ್ನಡಿಗರು ಬಂದು, ಈಗಿನ ಈ ಕನ್ನಡನಾಡನ್ನು ನೋಡಿದರೆ ಅವರು ಇದು ಕೆಲವು ಕಾಲದಕೆಳಗೆ ತಾವು ನಿವಸಿಸಿ ನಿರ್ಮಿಸಿದ ಕರ್ನಾಟಕವೆಂದು ಎಂದಿಗೂ ಗುರ್ತಿಸಲಾರರೆಂದು ಉಲ್ಲೇಖಿಸಿದರೆ ಅತಿಶಯೋಕ್ತಿಯಾಗಲಾರದು. ಅವರು "ಅಯ್ಯಾ! ನಮ್ಮ ಕರ್ನಾಟಕವೆಲ್ಲಿ"? ಎಂದು ಪ್ರಶ್ನಿಸಿದರೆ, ಆಗ ನಾವು ಏನೆಂದು ಉತ್ತರವನ್ನು ಕೊಡಬೇಕು? ಆಗಿನ ಧನವೆಲ್ಲಿ! ಆಗಿನ ಧೈರ್ಯವೆಲ್ಲಿ! ಆಗಿನ ಸಾಹಸವೆಲ್ಲಿ! ಆಗಿನ ಸಹಿಷ್ಣುತೆಯೆಲ್ಲಿ! ಆಗಿನ ಆ ಸ್ವಾಭಿಮಾನ, ಕರ್ತವ್ಯದಕ್ಷತೆಗಳೆಲ್ಲಿ! ಇವುಗಳೆಲ್ಲವನ್ನೂ ನಾವು ತೋರಿಸದಿದ್ದರೆ ಅವರು ಇದು ತಮ್ಮ ಕರ್ನಾಟಕವೆಂದು ಹೇಗೆ ನಂಬು ವರು? ನಾವು ತಮ್ಮ ಸಹೋದರರೆಂದು ಹೇಗೆ ಒಪ್ಪುವರು?

ಆಗಿನವರ ಆ ಹೊಸವರುಷಗಳಿಗೂ, ಈಗಿರುವವರಾದ ನಮ್ಮ ಈ ಹೊಸವರುಷಗಳಿಗೂ ಇದೇ ವ್ಯತ್ಯಾಸ. ಅವರು ನವೀನ ವರ್ಷಗಳು ಬಂದಂತೆಲ್ಲ ಪ್ರವರ್ಧಮಾನರಾದರು. ನಾವು ನಮ್ಮ ಹೊಸವರುಷಗಳು ಬಂದಂತೆಲ್ಲ, ಹೊಸ ಹೊಸ ನಾಗರೀಕತೆಗೆ ಮರುಳಾಗಿ, ಹೊಸ ಹೊಸ ಬಗೆಯಿಂದ ಕ್ಷೀಣರಾಗಹತ್ತಿದೆವು. ಇದರಿಂದ ಸತ್ಯಹಾನಿ, ಕೊನೆಗೆ ಮಾನಹಾನಿಯೂಕೂಡ ಉಂಟಾದೀತು. ಇನ್ನಾದರೂ ನಮ್ಮ ಕನ್ನಡಿಗರು ಕಣ್ದೆರೆದು, ತಮ್ಮ ಆದ್ಯಂತಕರ್ತವ್ಯಗಳನ್ನರಿತು, ಹೊಸವರುಷವನ್ನು ಯೋಗ್ಯರೀತಿಯಿಂದ ಬರಮಾಡಿಕೊಳ್ಳವರೇನು? ಯುಗಾದಿಯ ಹಬ್ಬದ ಮೂಲತತ್ವವಾದರೂ ಇದೇ ಇರುವುದು.

ಇದರಿಂದ ಆಧುನಿಕ ಕನ್ನಡಿಗರಲ್ಲಿ ಪ್ರಾಚೀನ ಕನ್ನಡಿಗರಲ್ಲಿ ನೆಲೆ ಸಿದ್ದ ಸುಗುಣಗಳೆಲ್ಲವೇ ಇಲ್ಲವೆಂದು ನಾವು ಅಭಿಪ್ರಾಯಪಟ್ಟಂತಾಗುವು ದಿಲ್ಲ; ಆದರೆ, ಅಂಥವರು ಅತಿವಿರಳ. ಅಲ್ಪಸ್ವಲ್ಪವಿದ್ದವರೂಕೂಡ ಕೈ ಮುಚ್ಚಿಕೊಂಡು ಎಲ್ಲೋ ಮೂಲೆಯಲ್ಲಿ ಕುಳಿತಿರುವರೆಂದರೆ ತಪ್ಪಾಗ ಲಿಕ್ಕಿಲ್ಲ. ಅವರೆಲ್ಲರೂ ಮನಸ್ಸುಮಾಡಿದರೆ ಕರ್ನಾಟಕದ ಗತವೈಭವವು ಪುನರುದ್ಧಾರವಾಗುವದೆಂದು ಧಾರಾಳವಾಗಿ ಹೇಳಬಹುದು. ಈ ಸಂದರ್ಭದಲ್ಲಿ ಥಾಮಸ್ ಗ್ರೇ ಎಂಬ ಪಾಶ್ಚಾತ್ಯಕವಿಯ ಉದ್ಗಾರ



"Full many a gem, of purest ray serene,
The dark unfathomed caves of ocean bear:
Full many a flower is born to blush unseen,
And waste its sweetness on the desert air."

ಇವೆಲ್ಲಕ್ಕನೂ ನಾವು ಮೊದಲು ಲೇಖಾರಂಭದಲ್ಲಿ ಹೊಸ ವರುಷದ ಮಹತ್ವವೆಂದು ಹೇಳಿದೆವು. ಈ ವಿಷಯಗಳೆಲ್ಲವನ್ನೂ ಗಮನಿಸಿ, ಚೆನ್ನಾಗಿ ಮನನಮಾಡಿಕೊಂಡು, ಈಗ ಬಂದಿರುವ ಹೊಸ ವರುಷವನ್ನು ಬರಮಾಡಿಕೊಂಡರೆ ಹೊಸ ವರುಷದ ಮಹತ್ವವನ್ನು ಅರಿತಂತಾಗುವುದು.

ಇದೇಸಂದರ್ಭದಲ್ಲಿ ಈ ಪತ್ರಿಕಾಕರ್ತರಾದ ಶ್ರೀಮತಿ ಕಲ್ಯಾಣಮ್ಮನವರನ್ನು ಮನಃಪೂರ್ವಕವಾಗಿ ಅಭಿನಂದಿಸದೆ ನಾವೆಂದಿಗೂ ಇರಲಾರೆವು. ಯಾಕಂದರೆ ಅವರು ಈಗ ನಾಲ್ಕಾರು ವರುಷಗಳ ಹಿಂದೆಯೇ ಹೊಸ ವರುಷದ ಮಹತ್ವವನ್ನರಿತು, ತಮ್ಮ ಆದ್ಯಂತ ಕರ್ತವ್ಯವನ್ನು ಲಕ್ಷ್ಯಕ್ಕೆತಂದು, ಭಗಿನೀಮಂಡಲದ ಸೇವೆಗಾಗಿಯೇ ಈ ಉತ್ತಮ ಮನೋಹರ ಮತ್ತು ನೀತಿದಾಯಕವಾದ "ಸರಸ್ವತಿ" ಮಾಸಿಕವನ್ನು ಹೊರಡಿಸಿ ಅತಿಕಷ್ಟದಿಂದ ಇದನ್ನು ನಡಿಸುತ್ತಲಿರುವರು. ಆದುದರಿಂದ ಕರ್ನಾಟಕದ ಬಂಧು ಭಗಿನಿಯರೆಲ್ಲರೂ ಇವರಿಗೆ ಕೃತಜ್ಞರಾಗಿರಬೇಕಲ್ಲದೆ, ಇವರ ಈ ಕಾರ್ಯಕ್ಕೆ ಶಕ್ತಿಮೀರಿ ಸಹಾಯಮಾಡತಕ್ಕುದೆಂದು ನಮ್ಮ ಅನುಗ್ರಹಪೂರ್ವಕವಾದ ವಿನಂತಿ ಇರುವುದು. ಇನ್ನು ಈ ಸರಸ್ವತಿಯ ಸರ್ವ ವಾಚಕ ಮತ್ತು ಲೇಖಕವೃಂದಕ್ಕೂ ಪೋಷಕ ಮತ್ತು ಸಹಾಯಕ ವೃಂದಕ್ಕೂ ಹೊಸವರುಷದ ಅಭಿನಂದನಗಳನ್ನರ್ಪಿಸಿ ಈ ಪುಟ್ಟ ಲೇಖನವನ್ನು ಮುಗಿಸುವೆವು. ಪತ್ರಿಕೆಗೂ, ಪತ್ರಿಕಾಕರ್ತರಿಗೂ ಆಯುರಾರೋಗ್ಯವನ್ನಿತ್ತು ಪರಮಾತ್ಮನು ಕಾಪಾಡಲಿ !

ಕನ್ನಡದ ನಾಡಿನಲಿ । ಕನ್ನಡಿಯು ಪೊಲ್ವವೀ ।
ಮುನ್ನಾದಸರಸ್ವತಿಯಪತ್ರಿಕೆಯನು ॥
ಸನ್ನುತಾಂಗನೆನೀನು । ಮನ್ನಿಸುತಲನವರತ ।
ಉನ್ನತಿಯಪೊಂದಲೊರವಿತ್ತುಕಾಯ್ಯೆ ॥



# ಭಕ್ತ ಸುಮಾಂಜಲಿ.

## Offerings of a Bhaktha.

---

### ಭಾಗ—೧.

### ॥ ಅ ॥

ಹೇ ! ಮನಸೇ ! ನೀನು ಕೊಂಚಕಾಲದವಾದರೂ ದೇವ ಧ್ಯಾನದಲ್ಲಿ ಅನುರಕ್ತನಾಗು. ನಮಗೆ ಇಷ್ಟವಾಗುವ, ಅದು ಉಂಟಾದ ಹಾಗೆಲ್ಲಾ ಇಲ್ಲದ ಸಲ್ಲದ ವಿಷಯಗಳನ್ನು ಆಲೋಚಿಸಿ, ಅವಕ್ಕೆ ಗಮನಕೊಟ್ಟು, ಅವುಗಳು ಅಂಕೆಯಿಲ್ಲದೆ ನಡೆಯುವಂತೆ ಮಾಡುತ್ತಿರುವೆ. ಇದರ ದೆಸೆಯಿಂದ ದಿನದ ಜಾವಗಳೆಲ್ಲಾ ವ್ಯರ್ಥವಾಗಿ ಕಳೆದು ಹೋಗುತ್ತಲಿದೆ. ಆ ಸರ್ವಲೋಕರಕ್ಷಕನೂ, ಸರ್ವಾಂತರ್ಯಾಮಿಯೂ, ಸರ್ವತ್ರಾಣಿಯೂ, ಪಾಪದಿಂದ ವಿಮುಕ್ತಮಾಡುವ ಸಾಯುಜ್ಯವನ್ನೀಯುವನೂ, ಸರ್ವೇಶ್ವರನೂ ಆದ ಭಗವಂತನನ್ನು ಕೊಂಚಕಾಲವಾದರೂ, ದಿವಸಕ್ಕೆ ಒಂದು ಸಾರಿಯಾದರೂ ನೆನೆಸು.

ಹೇ, ಮಾಯೇ ! ಆಧುನಿಕರಲ್ಲಿ ನೀನು ಸೇರಿಕೊಂಡು ವಿವಿಧ ಕೃತ್ಯಗಳನ್ನು ಅನುಸರಿಸುವಂತೆ ಮಾಡುವೆ. ನೀನು ಓರ್ವರಲ್ಲಿ ಒಳ್ಳೇತನದಿಂದಿದ್ದು ಇನ್ನೋರ್ವರಲ್ಲಿ ದುರ್ಬುದ್ಧಿಯಿಂದ ಮೋಕ್ಷ ಪಾಪಮಾರ್ಗಗಳನ್ನು ತೋರಿಸುತ್ತೀಯಲ್ಲವೆ? ಸಾಯುವಕಾಲದಲ್ಲಿ ಜೀವವನ್ನು ತೆಗೆದುಕೊಂಡು ಹೋಗುವಾಗ ಆ ಬಂಧನಗಳಿಂದ ಬಿಡಿಸಿಕೊಳ್ಳುವ ಯೋಚನೆಗಳು ನಿನಗೆ ಇವೆಯೇ ? ಈ ಪ್ರಪಂಚದವರಲ್ಲಿ ನೀನೂ ಐಕ್ಯವಾಗಿ ವಿಧವಿಧವಾಗಿ ನೈತಿಕ, ಧಾರ್ಮಿಕ ಸಾಮಾಜಿಕಾದಿ ವಿಷಯಗಳಲ್ಲಿ ತೆರತೆರನಾದ ಅಭಿಪ್ರಾಯಗಳು ನಿನ್ನಿಂದಲೇ ಅಲ್ಲವೆ ಹುಟ್ಟಿಸಲ್ಪಟ್ಟಿರುವುವು ? ನಿನ್ನ ರೂಪುಗಳೆರಡಾದ ಸುಮತಿ, ಕುಮತಿ ವಿಮರ್ಶೆಯುಸುಲಭಸಾಧ್ಯವೆ?

ಸಂಸಾರಸಾಗರದಲ್ಲಿ ಮುಳುಗಿ ಭವಬಂಧನದಿಂದ ಬಿಡಿಸುವ ಪರಮಾತ್ಮನನ್ನಾದರೂ ಕೊಂಚ ಧ್ಯಾನಿಸಲಾರೆಯಾ ? ನಶ್ವರವಾದೀ ಪ್ರಪಂಚ

ದಲ್ಲಿ ಹುಟ್ಟಿ ಅಸ್ಥಿರವಾದ ದೇಹಾಯುರಾರೋಗ್ಯ ಐಶ್ವರ್ಯಾದಿಗಳನ್ನು ಹೊಂದಿರುವಾಗ ಅವೆಲ್ಲವೂ ಈಶ್ವರದತ್ತವಾದುದೆಂದು ತಿಳಿದು ಸುಖ ಸಂತೋಷಗಳನ್ನು ಅನುಭವಿಸುತ್ತಿರುವಾಗ ದೇವರ ಧ್ಯಾನವನ್ನಾದರೂ ಮಾಡು ! ಹೇ ಮನವೇ ! ಪ್ರಪಂಚದ ನಶ್ವರವಾದ ಸೌಖ್ಯಗಳಿಗೆ ನೀನು ಗಮನಕೊಟ್ಟು ಮಾಯೆಗೆ ಒಳಗಾಗಿ ಮೋಸಹೋಗಬೇಡ.

ತತ್ಸತ್.

॥ ೮ ॥

ಪ್ರಪಂಚದ ಸುಖವನ್ನು ಅನುಭವಿಸಿದವರೇ ಬಲ್ಲರು. ಜೇನು ತುಪ್ಪದ ಸವಿಯು ಅದನ್ನು ತಿಂದವರಿಗೇಗೊತ್ತು. ಧ್ಯಾನಮಾಡುವವರಿಗೆ ದೈವಭಕ್ತಿಯ ಮಧುರರಸದ ಸವಿಯು ಗೊತ್ತೇಹೊರತು ಉಳಿದವರಿಗೇನುಗೊತ್ತು ?

ಹೇ, ದೈವಭಕ್ತಿಯೇ! ನಿನ್ನಂಥಾ ಸುಗುಣಮಣಿಯು ಈ ಪ್ರಪಂಚದಲ್ಲಿ ಯಾರು ಇರುವರು ? ಬರೀ ನಾಮಸಂಕೀರ್ತನೆಯಿಂದೆಮಗೆ ಕೈವಲ್ಯವನ್ನೀಯುವೆ. ನಿನ್ನಿಂದ ಪ್ರಹ್ಲಾದ, ವಿದುರ, ರಾಮದಾಸ, ಕನಕದಾಸ, ಪುರಂದರದಾಸ, ಕಬೀರದಾಸ, ತುಕಾರಾಮ, ಏಕನಾಥ ಮೊದಲಾದವರು ಸುಗುಣಿಗಳಾದ ಭಕ್ತಾಗ್ರೇಸರರೆಂದು ಶ್ರೇಯಸ್ಸು ಹೊಂದಿ ಅಜರಾಮರವಾದ ಭಕ್ತಿಯಿಂದ ತಮ್ಮ ಜೀವಗಳನ್ನು ಪಾವನಮಾಡಲಿಲ್ಲವೆ? ನೀನು ಆಧುನಿಕರಲ್ಲಿ ನೆಲೆಗೊಳ್ಳದೆ ಎಲ್ಲಿರುವಿ ? ಏಕೆ ? ಪ್ರಾಚೀನರಿಗೇಕೆ ಪಕ್ಷಪಾತವನ್ನು ತೋರಿಸಿ ನವೀನರನ್ನು ಬಿಟ್ಟಿರುವಿ ?

ವರ್ತಕರು ತಮ್ಮ ವಿಕ್ರಯ ಸಾಮಗ್ರಿಗಳನ್ನು ಸ್ಥಳದಿಂದ ಸ್ಥಳಗಳಿಗೆ ಸಾಗಿಸಲು ಬಹು ಕಷ್ಟಪಡುವಂತೆ ನಿನ್ನನ್ನು ನಮ್ಮ ದೇಹದೊಳಕ್ಕೆ ಸಾಗಿಸಲು ಕಷ್ಟಪಡಬೇಕಾಗಿಲ್ಲ. ಮತ್ತು ನಿನ್ನನ್ನು ಇತರರಿಗೆ ವಿಕ್ರಯಿಸಲೂ ಆಗದು. ಅವರು (ವರ್ತಕರು) ಬುದ್ಧಿವಂತಿಕೆಯಿಂದ ಧಾನ್ಯಾದಿಗಳನ್ನು ಕೊಂಡುಕೊಳ್ಳುವಾಗಲೂ, ಮಾರುವಾಗಲೂ, ಹೆಚ್ಚು ಲಾಭ ಸಂಪಾದಿಸಲು ಒತ್ತೊತ್ತಿ ಅಳೆಯುತ್ತಲೂ ಇಲ್ಲವೇ ಸೇರು ತಳಕೆಳಕಾಗಿ ಅಳೆದು ಮಾರುವಂತೆಯೂ ಮಾಡುವ ಹಾಗೆ ಆಗುವುದೇ ಇಲ್ಲ. ಅವಕ್ಕೆ ಸುಂಕ ! ನಿನಗೆ ಮಾತ್ರ ಬಿಂಕ ! ಬೇಕಾದಷ್ಟು ಬೆಲೆ ಕೊಟ್ಟು ಕೊಳ್ಳ

ಬೇಕಾಗಿಲ್ಲ. ವ್ಯಾಕರಣಸಾಮಗ್ರಿಗಳು ಮುಗ್ಗಿ ಕೆಟ್ಟು ಹುಳುತು ಹೋಗುವಹಾಗೆ ನೀನು ಅಂಥಾ ರೀತಿಯನ್ನು ಹೊಂದುವುದಿಲ್ಲ. ನಿನ್ನನ್ನು ಅತಿಸುಲಭದಿಂದ ಎಲ್ಲರೂ ಹೊಂದಬಲ್ಲರು. ಆದುದರಿಂದ ಸಕಲರಲ್ಲಿಯೂ ಪಕ್ಷಪಾತವನ್ನಿಡದೆ ನೆಲಸು ! ನೆಲಸು !!

ತತ್ಸತ್.

|| ೩ ||

"ಜ್ಞಾನವನ್ನು ಸಂಪಾದಿಸದ ಮನುಜನು ಹೆಚ್ಚುಕಾಲ ಬದುಕಲೇಕೆ ? ಮಾನವನ್ನು ಬಿಟ್ಟು ಜೀವಿಸುವ ಮನುಷ್ಯನು ಇನ್ನೂ ಈ ಲೋಕದಲ್ಲೇಕೆ ಇರಬೇಕು ? ಮಾಡಬಾರದ ಕೆಲಸವನ್ನುಮಾಡಿ ಅಗಬಾರದ ಫಲವನ್ನು ಅನುಭವಿಸುತ್ತಿರುವ ಅನುಭವಿಸುವ ಮನುಷ್ಯನೇಕೆ ? ನೀತಿಮಾರ್ಗವನ್ನು ಬಿಟ್ಟು ಅಧಮಮಾರ್ಗಗಳನ್ನು ಅನುಸರಿಸುವವನು ಏಕೆ ? ಆತನಿಂದೇನುಫಲ ? ತಾನೂ ತಿನ್ನದೆ, ಉಡದೆ, ತೊಡದೆ ಇರುವ ಧನಧಾನ್ಯಗಳಿದ್ದೇನುಫಲ ? ಯಜಮಾನನ ಆಜ್ಞೆಯಂತೆ ನಡೆಯದಿಹ ಭಂಟನಿದ್ದೇನುಫಲ ? ಅಂತರ್ಯವಾದ ಪ್ರೀತಿಯಿಲ್ಲದೆ ಬರೀ ಬಾಹ್ಯಪ್ರೀತಿಯನ್ನು ತೋರಿಸುತ್ತಾ, ಪತಿಯ ಮನಸ್ಸನ್ನು ತಿಳಿದು ಅದರಂತೆ ನಡೆಯದೆ ಬರೀ ಬಾಹ್ಯವಿಧೇಯತೆಯನ್ನು ತೋರಿಸುತ್ತಿಹ ಸತಿಯೇಕೆ ?

ತನ್ನಿನೆಯಳನ್ನು ಪ್ರೀತಿಸದೆ ಆಕೆಗಿಂತಲೂ ಕೀಳಾದವಳಲ್ಲಿ ತನ್ನ ಪ್ರೀತಿಯನ್ನು ತೋರಿಸುತ್ತಿಹ ಗಂಡನಿದ್ದೇನುಫಲ ? ತನ್ನ ಪ್ರಾಣವನ್ನಾದರೂ ಒಪ್ಪಿಸಿ ನ್ಯಾಯಮಾರ್ಗವನ್ನನುಸರಿಸಲು ಪ್ರಯತ್ನಪಡದಿಹನು ಇದ್ದೇನುಫಲ ? ಸ್ವದೇಶಾಭಿಮಾನಿಯೂ, ಸ್ವಭಾಷಾಭಿಮಾನಿಯೂ ಅಲ್ಲದಿಹನಾದೇನು ಈ ಮಾತೃಭೂಮಿಗೆ ಫಲ ? ದೈವಭಕ್ತಿಯಿಂದ ದೇವರನ್ನು ಸಂಕೀರ್ತನೆಮಾಡದೆ ಇರುವವನಿದ್ದೇನುಫಲ ? ದೇವರನ್ನು ಮನಸ್ಸಿನಲ್ಲಿಯೂ ಧ್ಯಾನಿಸದೆ, ದೇವನಾಮಾಮೃತವನ್ನು ಕುಡಿಯದೆ, ಕಾಯಾ ವಾಚಾ ಮಾನಸೇಂದ್ರಿಯಪೂರ್ವಕವಾಗಿ ನಮಸ್ಕರಿಸದಿರುವವನು ಏಕೆ ? ಮೂಢಭಕ್ತಿಯಿಂದ ತಮ್ಮ ದೇವರು ಹೆಚ್ಚು, ತಮ್ಮ ದೇವರು ಹೆಚ್ಚು ಎಂದು ವಿವಿಧವಾಗಿ ನಾಸ್ತಿಕರಂತೆ ತಮಗೆ ತೋರುತ್ತಿರುವ, ತೋರುವ ಅಭಿಪ್ರಾಯಗಳಿಗಾಗಿ ವಾದವಿವಾದಗಳೇಕೆ ?"

ದೃಢಭಕ್ತಿಯಿಂದ ಹೇ ಮನಸ್ಸೇ! ಸಕಲೇಂದ್ರಿಯಗಳೇ! ಧ್ಯಾನಿಸಿ! ಧ್ಯಾನಿಸಿ! ಪರಮಾತ್ಮನನ್ನು ಧ್ಯಾನಿಸಿ ||

ಹೇ! ದೇವಾದಿದೇವ! ಪಾವನಮೂರ್ತಿ! ಸರ್ವೇಶ್ವರಾ! ನಿನ್ನ ಮೇಲೆ ಸಕಲರೂ ಏಕೈಕಭಕ್ತಿಯನ್ನಿಡುವಂತೆ ಎಲ್ಲರಿಗೂ ದಯಪಾಲಿಸು! ಎಲ್ಲರಿಗೂ ಅನುಗ್ರಹಿಸು ಅನುಗ್ರಹಿಸು! ತತ್ಸತ್

# ಪಾತಿವ್ರತ್ಯ

(ಮ|| ಅನವಟ್ಟಿ ರಾಮರಾಯರಿಂದ.)

ಮರೆಯದಿರುಮಾನಿನಿ! ವಿವೇಕವ |
ನೊರೆ(ನ)ಸತ್ಯದಮಾರ್ಗಮುಳಿಯದೆ |
ಮೆರುಪನಿನ್ನಯಹೃದಯದೊಳಿಡೆವಿವೇಕಬೋಧೆಗಳ ||
ಧರದೆನಿನ್ನಂಗಳವುಕಾಂತಿಯ |
ಪರಪಿಸೌಂದರ್ಯವನುಪೆಚ್ಚಿಸಿ |
ಶರಜದಂದದಿಗೈಸಿಮನ್ನಣೆಯಿತ್ತುಮೆರೆಯಿಪುವು || ೧ ||

ಎಲೌ ಸ್ತ್ರೀಯೆ! ಸತ್ಯದ ಮಾರ್ಗವನ್ನು ಬಿಟ್ಟು ನಡೆಯದೆ ಹೇಳುವ ವಿವೇಕಗಳನ್ನು ನಿನ್ನ ಮನಸ್ಸಿಗೆ ತಂದುಕೊಂಡುದಾದರೆ, ಅವು ಕಮಲ ಪುಷ್ಪದಂತೆ ನಿನ್ನ ದೇಹಕ್ಕೆ ಸೌಂದರ್ಯವನ್ನುಂಟುಮಾಡಿ, ಮರ್ಯಾದೆಯನ್ನು ತರುವುವು.

ನಿರುಪಮಾನಂದಕರಮೆನಿಪಾ |
ಸುರಭಿಯೆಂಬಾಯೌವನದೆನೀ |
ಮೆರೆಯುತಿರೆಮಾನವರದಿಟ್ಟಿಗಳರ್ಥಮೇನೆನುತೆ ||
ಧರದೊಳರಿಯೌನಿನ್ನಚಿತ್ತಕೆ |
ಮರುಳಮೂಡಿಸುತಿರುವವೋಹಾ |
ಕರದವಮಾತಿಗೆಹೃದಯವಂನೀಡದಲೆಕಾಯುತಿರು || ೨ ||

ತಾ|| ಆಹ್ಲಾದಕರವಾದ ವಸಂತಋತುವೆಂಬ ನಿನ್ನ ಯೌವನದಲ್ಲಿ ವಿರಾಜಿಸುತ್ತಿದ್ದಾಗ್ಗೆ, ಪುರುಷರ ದೃಷ್ಟಿಗಳು ನಿನ್ನ ಕಡೆಗೆಳಸಿದಾಗ್ಗ

ಅವುಗಳ ಅರ್ಥವೇನೆಂಬುದನ್ನು ತಿಳಿದುಕೊಂಡು, ಮನಸ್ಸಿಗೆ ಮರುಳನ್ನು ಹುಟ್ಟಿಸುವ ಮೋಹಕರವಾದ ಮಾತುಗಳಿಗೆ ಎಡೆಗೊಡದೆ ನಿನ್ನ ಮನಸ್ಸನ್ನು ನಿನ್ನ ಸ್ವಾಧೀನದಲ್ಲಿಟ್ಟುಕೊ.

ಪುರುಷನಿಗೆನಿಜಗೆಳತಿಯಲ್ಲದೆ |
ವಿರಹದಾಸನದಾಸ್ಯಳಲ್ಲವು |
ನಿರುತವಲ್ಲಭಗೊದಗಿದಳಲನುನೀನಿವಾರಿಸುತ ||
ಮರುಕದಿಂಸರಸೋಕ್ತಿಯಾಡುತೆ |
ಹರಿಸಿಯಾತನಕೋಟಲೆಯನಾ |
ಕರದೊಳಿನಿಯಗೆಧರ್ಮಮಾರ್ಗದಬೋಧೆಯೊರೆಯುತಿರು ||೩||

ತಾ|| ಅಬಲೆಯಾದ ನೀನು ಪುರುಷನಿಗೆ ಸಮಾನಳಾದ ಸ್ನೇಹಿತಳೇ ಹೊರತು ವಿರಹಪುರುಷನ ದಾಸ್ಯಳಲ್ಲವೆಂಬ ಮರ್ಮವನ್ನು ತಿಳಿದುಕೊಂಡು ನಿನ್ನ ಪತಿಗೊದಗಿದ ದುಃಖಗಳನ್ನು ಸರಸಮಾತುಗಳಿಂದ ಪರಿಹರಿಸುತ್ತಾ ಕಷ್ಟಗಳನ್ನು ದೂರಮಾಡುತ್ತಾ, ಧರ್ಮದ ತತ್ವವನ್ನು ಮನಸ್ಸಿಗೆ ಬರುವಂತೆ ಸಮಯೋಚಿತವಾಗಿ ಮಾತಾಡುತ್ತಿರು.

ನಿಜಸತಿಯಳಾದವಳುಪತಿಯಂ |
ಭಜಿಸುತವನಂತನ್ನೊಲುಮಿಗೆ ಸ |
ಹಜತನದೊಳೇವಶ್ಯಸ್ಥಿರಿಸಿತನ್ನಹೃದಯದೊಳು ||
ಅಜನುತಾಸರಸಿಜದೊಳಿಹಪರಿ |
ನಿಜಮನಮತೆಯಿಂತೋರ್ಽನಿರ್ಜರ |
ಕಜದವೊಲುಪತಿಯಿಷ್ಟವನೆಲ್ಲಸಲ್ಲಿಸುತ್ತಿಹಳು ||೪||

ತಾ|| ನಿಜಸತಿಯು ಪತಿಯನ್ನು ಭಜಿಸುತ್ತಾ, ಆತನನ್ನು ಕಮಲದಲ್ಲಿ ಬ್ರಹ್ಮನಿರುವಂತೆ, ಪ್ರೀತಿಗೆ ತನ್ನಂತೆ ಮಾಡಿ ಮಾಡಿಕೊಳ್ಳುತ್ತಾ, ಪತಿಯ ಮನೋಗತಗಳನ್ನು ಕಲ್ಪವೃಕ್ಷದಂತೆ ಸಲ್ಲಿಸುತ್ತಿರುವಳು.

ಗಮನದಲಿ ಹಂಸೆಯನು ಪೋಲುತೆ |
ವಿಮಲಮಾನಸಳಾಗಿ ಪದಪಿನೊ |
ಳಿಮೆರೆವನಿಗರ್ವವನುತೋರುತೆ ಗೃಹದಕಾರ್ಯಗಳ ||

ನಡುಯುವರಿತನೆಯುಂತಲಿಕರೆಯುವ |
ರಮನೆಸಂತಾಪೋಗದಲಿಪ್ರ |
ವಿಮಲಸುಗುಣಕಿರೀಟವಾಂತುರೆಸಂತಮೆರೆಯುವಳು ॥ ೫ ॥

ತಾ॥ ಹಂಸಪಕ್ಷಿಯಂತೆ ನಡೆಯುತ್ತಾ, ನಿರ್ಮಲ ಮನಸ್ಸಿನಲ್ಲಿ ಗರ್ವವನ್ನುಳಿದು, ಗೃಹಕೃತ್ಯದ ಕಾರ್ಯಗಳನ್ನು ಸಮಯವನ್ನರಿತು ಮಾಡುತ್ತಾ ಅನ್ಯರ ಮನೆಗೆ ಕರೆಯದೆ ಹೋಗದೆ ಸದ್ಗುಣವೆಂಬ ಕಿರೀಟವನ್ನು ಧರಿಸಿಕೊಂಡು ಮೆರೆಯುತ್ತಿರುವಳು.

ಪತಿಯಸುಗುಣಾವಳಿಯಪರಿಸುತೆ |
ಸತಿಗೆಪತಿಯೇ ದೈವವೆನ್ನುತೆ |
ಹಿತವಚನಸುಧೆಯನು ಪಾನವಗೈದುಸತ್ಯವನು ॥
ಸತತಬಿಡದಂತಿರುತತಿವಿಧೇ |
ಯತೆಯತೋರುತೆಸಾಹ್ಯವೀಯುತೆ |
ಚತುರಕಲೆಗಳನರಿದ ಸಾಧ್ವೀಮಣಿಯುಮಾನ್ಯಳಲೆ ॥೬॥

ತಾ॥ ಸತಿಯು ಪತಿಯ ಸದ್ಗುಣಗಳನ್ನು ಪಠನೆ ಮಾಡುತ್ತಾ, ಆತನನ್ನೇ ದೇವರೆಂದು ತಿಳಿದು ಹಿತವಾದ ಮಾತುಗಳೆಂಬ ಅಮೃತವನ್ನು ಪಾನಮಾಡಿಸಬೇಕು. ಪತಿಯನ್ನುಳಿದಿರದೆ ವಿಧೇಯಳಾಗಿದ್ದುಕೊಂಡು ಆತನಿಗೆ ಸಹಾಯಮಾಡುತ್ತಾ ಸಂಸಾರದ ವಿಷಯಗಳನ್ನು ತಿಳಿದಿರುವಳೇ ಪತಿವ್ರತಾಶಿರೋಮಣಿ!

ಪತಿಯಳಲತಾಮರಸಿಸುತರಿಗೆ |
ಹಿತದಬುದ್ಧಿಯನೊರೆಯುತಂ ಗೃಹ |
ಕೃತ್ಯದಮರ್ಮವಾರೊಳುಸಿರದೆ ತನ್ನಿರುವಿಕೆಯನು ॥
ಸುತರುಕಂಡನುಸರಿಪತೆರದನು |
ಮರೆಸಿನಡೆವಂತೆನಡೆದೊಡೆನಾ |
ನಿತಿಯಿವಳೆಂಬತೆರದೊಳಿಹಳು ಸಾಧ್ವಿಪತಿಸುಖದೆ ॥ ೭ ॥

ತಾ॥ ಒಂದುವೇಳೆ ಪತಿದುಃಖವನ್ನು ಮರೆಯಿಸಿ, ಮಕ್ಕಳಿಗೆ ಹಿತವಾದ ಸದ್ಬೋಧೆಗಳನ್ನು ಹೇಳುತ್ತಾ, ಗೃಹಕೃತ್ಯದ ಮರ್ಮವನ್ನು ಯಾರೊ

ಡನೆಯೂ ಹೇಳಿಕೊಳ್ಳದೆ, ತಾನು ನಡೆವ ರೀತಿಯನ್ನು ಮಕ್ಕಳು ನೋಡಿ ಕಲಿಯುವಂತೆ ನಡೆದುಕೊಳ್ಳುತ್ತಿರುತ್ತಾ, ಮಾನಿನಿಯೆಂದು ಹೆಸರುವಾಸಿ ಪಡೆದಿರುವಳೆ ಮಾನ್ಯಳೆನಿಸಿ ಗಂಡನ ಸುಖದಾಯಕಳೆಂದು ಹೇಳಿಸಿ ಕೊಳ್ಳುವಳು.

ಮಾಡೆಸನ್ನೆಯಚಾರಸನೋಡುವ |
ನೋಡೆಕಾರ್ಯವಜವದೆಮಾಡಲು |
ಮೂಡಿದಾನುಮತೆಯದುಕಾರಣವುಲ್ಲ್ವಮಾನಿನಿಗೆ ||
ನಾಡಿಗಚ್ಚರಿಯಾಗಿಪಾಡುತೆ |
ಬೇಡಿಕೊಂಬಳುಗೈದತಪ್ಪಿಗೆ |
ಮಾಡುತಿರೆಹಾಸ್ಯವನುಶಾಂತದೆನೋಡಿನಗುತಿಹಳು ||೮||

ತಾ|| ಸ್ತ್ರೀಯು ತನ್ನ ಸೇವಕರಿಗೆ ತನ್ನ ಕರ ಸಂಜ್ಞೆಯಿಂದ ಮನೋಗತವನ್ನು ತಿಳಿಯಪಡಿಸಿ, ದೃಷ್ಟಿಯಿಂದ ಕಾರ್ಯಗಳನ್ನು ರಚಿಸು ವಂತೆ ಮಾಡುವುದೇ ಭೃತ್ಯರಲ್ಲಿರುವ ಮಮತೆಯೇ ಕಾರಣವು. ಇಂಪಾಗಿ ಹಾಡುತ್ತಾ, ತಪ್ಪಿಗೆ ಕ್ಷಮಾಪಣೆಯನ್ನು ಬೇಡಿಕೊಳ್ಳುತ್ತಾ ಹಾಸ್ಯಮಾಡಿದರೂ ಶಾಂತತೆಯನ್ನು ತಾಳಿ ನಗುತ್ತಿರುವಳು.

ಜನುಮಸಾರ್ಥಕಗೊಳಿಸೆನೀಸ |
ಜ್ಜನರನುಸೇವಿಸುತವರಸದ್ಬೋ |
ಧನೆಯಹಮಧುವನೀಂಟಿಮನಕೆಶಾಂತಿಯನು ||
ಅನುಗೊಳಿಸುತಲಿ ವೇದಗೋಚರ |
ನೆನಿಸಿಧಕ್ತರಭೀಷ್ಟಸಲ್ಲಿಸು |
ತನುಪಮಪದವನೀವದೇವನ ಕೃಪೆಯನಾರ್ಜಿಸಿರು || ೯ ||

ತಾ|| ಸ್ತ್ರೀಯೆ ! ನಿನ್ನ ಜನ್ಮವನ್ನು ಸಾರ್ಥಕಪಡಿಸಿಕೊಳ್ಳಲು ಸಜ್ಜನ ರನ್ನು ಸೇವೆಮಾಡಿ, ಅವರು ಹೇಳುವ ಸದ್ಬೋಧೆಯೆಂಬ ಅಮೃತವನ್ನು ಪಾನಮಾಡಿ, ಮನಸ್ಸಿಗೆ ಶಾಂತತೆಯನ್ನು ಹೊಂದಿ, ವೇದಗಳಿಗೂ ಅಗೋಚರನಾದ ಭಗವಂತನ ಭಕ್ತರ ಇಷ್ಟವನ್ನು ಪೂರ್ಣ ಮಾಡಿ ದೇವರ ಕೃಪೆಗೆ ಪಾತ್ರಳಾಗು.

ಆವನಿಂತಪ್ಪಸುದತಿಯುತಾ |
ನೋವದಲೆಸಂಸ್ಕೃತಿಯನಾನುತೆ |
ಜೀವಿಸುತ್ತಲೆಭಾವಜಾರಿಯುಪದವಪೂಜಿಸಲು ||
ಭೂವರರಿಗಿಂತಧಿಕಸೌಖ್ಯವ |
ಭಾವದೊಳು ತಾಳುವಗೆಜನನ |
ಸಾವುಗಳಿಲ್ಲದಾಪದದಪರಿಕಾಣ್ಬುದಚ್ಚರಿಯೆ ||೧೦||

ತಾ|| ಯಾವ ಪುರುಷನು ಮೇಲೆ ಹೇಳಿದ ಗುಣವುಳ್ಳ ಸ್ತ್ರೀಯನ್ನು ಹೊಂದಿ, ಆಕೆಯನ್ನು ಕಾಪಾಡುತ್ತಾ ಸಂಸಾರಿಯಾಗಿದ್ದು ದೇವರನ್ನು ಭಜಿಸುತ್ತಿರುವನೋ ಅವನೇ ರಾಜನಿಗಿಂತಲೂ ವಿಶೇಷ ಸಂತೋಷ ವನ್ನು ಹೊಂದಿ ಮೋಕ್ಷವನ್ನು ಹೊಂದುವನು.

---

# ಬಿಡಿನುಡಿಗಳು.



## ಕನ್ನಡ ವಾಙ್ಮಯ.

---

ಈಗ ಕೆಲವು ದಿವಸಗಳಿಂದಲೂ ಕನ್ನಡ ವಾಙ್ಮಯದಲ್ಲಿ ಒಂದು ದೊಡ್ಡ ಗಲಭೆ ಎದ್ದಿದೆ. ಕನ್ನಡಭಾಷಾ ಏಕೀಕರಣದ ಸಲುವಾಗಿ ಬಹಳ ಪ್ರಯತ್ನಗಳು ಅಲ್ಲಲ್ಲಿ ನಡೆದಿವೆ. ಅಂದರೆ, ಕನ್ನಡ ಗ್ರಂಥಗಳಲ್ಲೆಲ್ಲ ಒಂದೇ ತರದ ಭಾಷೆಯನ್ನು ಉಪಯೋಗಿಸಬೇಕೆಂಬ ಚಳವಳ. ಈಗ ಸದ್ಯದಲ್ಲಿ ಕನ್ನಡ ವಾಙ್ಮಯವು ಮೂರು ತರಹೆಯ ಭಾಷೆಗಳಿಂದ ಅಥವಾ ಶೈಲಿಗಳಿಂದ ಕೂಡಿದುದಾಗಿದೆ :

(1) ಮೈಸೂರು ಶೈಲಿ. (2) ಧಾರವಾಡ ಶೈಲಿ. (3) ಮಂಗಳೂರು ಶೈಲಿ.

ಮೈಸೂರಿನವರು ತಮ್ಮ ಶೈಲಿಯೇ ಉತ್ತಮವಾದುದೆಂದೂ, ಸರ್ವರೂ ಅದನ್ನೇ ಉಪಯೋಗಿಸಬೇಕೆಂದೂ ವಾದಿಸುತ್ತಲಿರುವರು. ಧಾರವಾಡದವರು ತಮ್ಮ ಶೈಲಿಯೇ ಶ್ರೇಷ್ಠವೆಂದೂ, ಮೈಸೂರು ಶೈಲಿ ಕೇವಲ ಸಾರರಹಿತವಾದು

ದೆಂದೂ ವಾದಿಸುವರು. ಇನ್ನು ಮಂಗಳೂರವರಾದರೋ ತಮ್ಮ ಶೈಲಿಯೇ ಉತ್ತಮವೆಂದೂ ಅದು ಧಾರವಾಡ ಮತ್ತು ಮೈಸೂರು ಶೈಲಿಗಳ ಮಧ್ಯಮ ಸ್ಥಾನದಲ್ಲಿದ್ದು ಸ್ವಲ್ಪ ಹೆಚ್ಚು ಕಡಿಮೆ ಅವರಿಗೂ ಇವರಿಗೂ ಸಮತೂಕದಲ್ಲಿರುವ ದೆಂದೂ ಹೇಳುತ್ತಾರೆ. ಅಂತು ನಮ್ಮ ಶೈಲಿಯೇ ಯೋಗ್ಯವಾದುದೆಂಬ ಮಹತ್ವಾಕಾಂಕ್ಷೆಯು ಅಲ್ಪಸ್ವಲ್ಪ ಆಯಾ ದೇಶದವರಲ್ಲಿ ತುಂಬಿ ತುಳುಕುತ್ತಲಿದೆ.

ಯಾವದು ಹೇಗೆ ಏಕೆ, ಇರಲೊಲ್ಲದು. ಆದರೆ, ನಾವು ವಾಙ್ಮಯ ಸುಧಾರಕರಿಗೆ ಇಷ್ಟೇ ಪ್ರಾರ್ಥಿಸುವೆವು. ಮುಳ್ಳುಗಳಿಲ್ಲದ ಗುಲಾಬಿ ಪುಷ್ಪವಿಲ್ಲ. (There is no rose without its thorns) ಇದರಂತೆಯೇ ಈ ಮೂರು ತರದ ಶೈಲಿಗಳಲ್ಲಿಯೂ ನ್ಯೂನತೆಗಳು ಇದ್ದೇ ಇರುತ್ತವೆ. ಇದು ಸರ್ವರೂ ಒಪ್ಪತಕ್ಕದ್ದಾಗಿದೆ. ಇನ್ನು ಮುಳ್ಳುಗಳಿವೆಯೆಂದು ಪುಷ್ಪಗಳನ್ನೇ ಬಿಸಾಕಲು ಬರುವುದೆ? ನಮಗೇನೋ ಒಂದೇ ಒಂದು ಉತ್ತಮ ಪುಷ್ಪದ ಆವಶ್ಯವಿರುವುದು. ಅಂದಮೇಲೆ, ನಮ್ಮ ಭಾಷಾಭಿಮಾನಿಗಳು, ಎಲ್ಲ ಪುಷ್ಪಗಳಿಗಿಂತಲೂ ಸ್ವಲ್ಪ ಕಡಿಮೆ ಮುಳ್ಳುಗಳಿದ್ದ ಒಂದು ಮನೋಹರ ಪುಷ್ಪವನ್ನು ಆರಿಸಿಕೊಳ್ಳಕೂಡದೇಕೆ! ಹೀಗೆ ಹುಡುಕುತ್ತ ಕುಳಿತರೆ ಅವರಿಗೆ ಉತ್ತಮ ಪುಷ್ಪವು ಸಿಗುವುದೆಂತು!

---

# ಕನ್ನಡದಲ್ಲಿ ಕಥಾಲೇಖನ.

---

ಚಿತ್ರಲೇಖನವು ಹೇಗೆ ಒಂದು ದೊಡ್ಡ ಕಲೆಯೋ, ಹಾಗೆಯೇ ಕಥಾ ಲೇಖನವೂ ಕೂಡ ಒಂದು ದೊಡ್ಡ ಕಲೆಯಾಗಿರುತ್ತದೆ. ಚಿತ್ರಲೇಖನವು ಹೇಗೆ ಸರ್ವರಿಗೂ ಸಾಮಾನ್ಯವಾಗಿ ಬರುವದಿಲ್ಲವೋ, ಹಾಗೆಯೇ ಕಥಾಲೇಖನವು ಸರ್ವರಿಗೂ ಸಾಮಾನ್ಯವಾಗಿ ಬರುವದಿಲ್ಲ. ಒಂದು ಜನಾಂಗಕ್ಕೆ ಚಿತ್ರಲೇಖನದ ಅವಶ್ಯಕತೆಯು ಎಷ್ಟಿರುವುದೋ ಅದರ ಹತ್ತರಷ್ಟು ಕಥಾಲೇಖನದ ಅವಶ್ಯಕತೆ ಇರುವದು. ಚಿತ್ರಗಾರನಿಗಿಂತಲೂ ಕೆಲವಂಶಗಳಲ್ಲಿ ಕಥೆಗಾರನೇ ಹೆಚು ಪ್ರಾಶಸ್ತ್ಯವನ್ನು ಪಡೆಯುವನು. ಅವನು ಕೆಲವೆಡೆ ತನ್ನ ವಾಚಕರನ್ನು ನಗಿಸುವನು, ಕೆಲವೆಡೆ ಅಳಿಸುವನು, ಒಮ್ಮೆ ಆವೇಶಭರಿತರನ್ನಾಗಿ ಮಾಡುವನು, ಒಮ್ಮೆ ಕೇವಲ ನಿರಾಶರನ್ನಾಗಿ ಮಾಡಿಬಿಡುವನು. ಹೀಗೆ ಚಿತ್ರ ವಿಚಿತ್ರವಾಗಿ ವಾಚಕರ ಮನಸ್ಸನ್ನು ಅದಲು ಬದಲು ಮಾಡುತ್ತ ಕೊನೆಗೊಮ್ಮೆ ತನ್ನ ಉಚ್ಚತರವಾದ ನೀತಿಯನ್ನು ಅವರಲ್ಲಿ ತುಂಬಿಬಿಡುವನು. [illegible]

ಕರ್ನಾಟಕದಲ್ಲಿ ಇದುವರೆವಿಗೂ ಈ ಕಲೆಯು ಇದ್ದೇ ಇಲ್ಲವೆಂದರೆ ತಪ್ಪಾಗಲಿಕ್ಕಿಲ್ಲ. ಯಾಕಂದರೆ, ಕನ್ನಡ ವಾಙ್ಮಯದಲ್ಲಿ ಮೊನ್ನೆ ಮೊನ್ನಿನವರೆವಿಗೂ ದೊಡ್ಡ ದೊಡ್ಡ ಗ್ರಂಥಗಳೂ, ಕಾವ್ಯಗಳೂ ಗೋಚರಿಸುತ್ತಲಿದ್ದವು. ಆದರೆ ಕಥೆಗಳೇ ಇರಲಿಲ್ಲ. ಇನ್ನು ಕಥೆಗಳ ಮೂಲಕ ಹೇಗೆ ಮನಸ್ಸಿನಮೇಲೆ ಪಂಡಿತರಿಗೂ, ಪಾಮರರಿಗೂ ಉತ್ತಮ ಪರಿಣಾಮವಾಗುವಂತೆ ಮಾಡಬಹುದೆಂಬುದನ್ನು ಹೇಳುವುದೇ ಅನಾವಶ್ಯಕ. ಇತ್ತೀಚೆಗೆ ಕನ್ನಡ ವಾಙ್ಮಯದಲ್ಲಿ ಉತ್ತಮ ಚಿಕ್ಕ ಚಿಕ್ಕಕಥೆಗಳು ಸುಳಿದಾಡಹತ್ತಿವೆ ಮತ್ತು ಅವುಗಳಿಗೆ ತಕ್ಕಮಟ್ಟಿಗೆ ಉತ್ತೇಜನವು ಸಿಗಲು ಪ್ರಾರಂಭಿಸಿದೆ. ಇದು ನಮ್ಮ ಸುದೈವವೇ ಸರಿ.

ಪ್ರತಿಯೊಬ್ಬ ಕನ್ನಡಿಗನೂ ಈ ಕಥಾಲೇಖನವನ್ನು ಉತ್ತೇಜಿಸಬೇಕೆಂದು ನಮ್ಮ ವಿನಂತಿ ಇದೆ; ಮತ್ತು ಪ್ರತಿಯೊಬ್ಬ ಕನ್ನಡ ಸಂಪಾದಕನೂ ತನ್ನ ಪತ್ರಿಕೆಯಲ್ಲಿ ಉತ್ತಮ ಚಿಕ್ಕಕಥೆಗಳಿಗೆ ಆದಷ್ಟು ಹೆಚ್ಚು ಸ್ಥಳಕೊಡಬೇಕೆಂದು ನಮ್ಮ ಆಗ್ರಹಪೂರ್ವಕವಾದ ಪ್ರಾರ್ಥನೆ. ಬಂಗಾಲ ಮತ್ತು ಆಂಧ್ರದೇಶಗಳಲ್ಲಿರುವ ಕಥಾಲೇಖನದ ಪ್ರಾಬಲ್ಯವನ್ನು ನೋಡಿದರೆ ನಾವು ತಲೆಯನ್ನು ತಗ್ಗಿಸಬೇಕಾಗುವದು.



# ದುರ್ದೈವ!

ಲೇಖಕ:—ಶ್ರೀಯುತ ಪಂಡಿತ ತಾರಾನಾಥರವರು

ಇದೊಂದು ವಿಚಿತ್ರ ವಾದರೀತಿ ದುರ್ದೈವ. ವೇದ ಶಾಸ್ತ್ರ ಪುರಾಣೇತಿ ಹಾಸಗಳಲ್ಲೆಲ್ಲಿಯೂ ಇಲ್ಲ. ಇದು ಅನಾರೋಗ್ಯದಿಂದಾಗುವದಿಲ್ಲ. ಹೆಡ್ಡತನವು ಅದಲ್ಲ. ದುಡ್ಡು ಕಳಕೊಳ್ಳುವದು ಅದಲ್ಲ. ಶಾಸ್ತ್ರಗಳಿಗೂ ವಿವೇಕಕ್ಕೂ ಹೋವದು ದುರ್ದೈವವೆಂದು ತೋರಿದೆಯೋ ಅದಕ್ಕೂ ಈ ದುರ್ದೈವಕ್ಕೂ ಸಂಬಂಧವೇ ಇಲ್ಲ. ಜ್ಞಾನಶೂನ್ಯನಾಗುವದು ದುರ್ದೈವವಲ್ಲ. ಮಾನಹೀನನಾಗುವದು ದುರ್ದೈವವಲ್ಲ. ಧರ್ಮಭ್ರಷ್ಟನಾಗುವದೂ ಅದಲ್ಲ. ಕರ್ಮರಹಿತನಾದವನಿಗೂ ದುರ್ದೈವದ ಪೀಡೆಯಿಲ್ಲ. ಅದೊಂದು ವಿಚಿತ್ರ ಸ್ಥಾನವನ್ನು ಬಂದು ಸೇರಿಕೊಂಡಿದೆ. ರೂಢಿಭ್ರಮೆಯಿಂದ ಮಂದವಾಗದ ಶುಭ್ರವಾದ ಕಣ್ಣುಳ್ಳವರು ಅದನ್ನು ಹುಡುಕಲಿಕ್ಕೆ ಕಷ್ಟಪಡಬೇಕಾದ್ದೇ ಇಲ್ಲ. ಬುದ್ಧಿವಂತರಿಗೆ ಅದು ಎಲ್ಲೆಲ್ಲಿಯೂ ತೋರಬರುತ್ತದೆ.

ಹಿಂದೂ ಸಮಾಜದಲ್ಲಿ ಹುಡುಗಿ ಹುಟ್ಟಿದ ಮನೆಯಲ್ಲಿರುವ ವಿತಂತುಗಾನವನ್ನು ಸ್ವಲ್ಪ ಕೇಳಬೇಕು—"ಅಯ್ಯೋ! ದುರ್ದೈವವೇ! ಹುಡುಗಿ ಹುಟ್ಟಿದಳೇ' ಎಂಬ ಪಲ್ಲವಿಯು ಅಲ್ಲಿ ಏಳೆಂಟು ವರ್ಷದ ಹುಡುಗಿಯರಿರುವ ಮನೆಗಳಲ್ಲಿಯೂ ಸ್ವಲ್ಪ ನೋಡಬೇಕು—" ಈ ಪಾಪಿ ನಮ್ಮ ದುರ್ದೈವಕ್ಕೆ ಯಾಕೆ ಹುಟ್ಟಿ ... ನಮ್ಮ ಮನೆ ಹಾಳುಮಾಡಲಿಕ್ಕೆ" ಎಂಬ ಅಸ್ತಾಯಿಯನ್ನು ಬಹು ಗಟ್ಟಿಯಾಗಿ ಕೇಳಬಹುದು. "ಸ್ತ್ರೀಜನ್ಮವೇ ದುರ್ದೈವ" ಆದರೆ ಇದು ದೇವರ ಏರ್ಪಾಡೋ ಅಥವಾ ಹಾಗೆನ್ನುವ ಜ್ಞಾನಿಗಳ ರೋದನವೋ? ಪಾಪ, ಆ ಸೃಷ್ಟಿಕರ್ತನಿಗೆ ಬುದ್ಧಿಯಿಲ್ಲದೆ ಹೆಣ್ಣು ಎಂಬ ಒಂದು ನಿರ್ಮಾಣವನ್ನು ಮಾಡಿ ತಪ್ಪಿಹೋದನು. ಅವನಿಗೆ ನಮ್ಮ ರೋದನ ಪ್ರಿಯಜ್ಞಾನಿಗಳಂಥ ಮಂತ್ರಿಗಳಿದ್ದಿಲ್ಲವೋ ಏನೋ. ಮೇಲೆ ಇವರ ಜ್ಞಾನಕ್ಕೆ ವೇದವೇ ಆಧಾರ ಮತ್ತು "ಮಾತೃದೇವೋಭವ" ಎಂಬ ಮೊದಲನೇ ಸ್ಥಾನ ತಾಯಿಗೆ. ಈ 'ದುರ್ದೈವಕ್ಕೆ' ಈ ಪದವಿಯನ್ನಾದರೂ ಕೊಟ್ಟವರು ಋಷಿಗಳೋ ಅಲ್ಲವೋ? ಅಥವಾ ವೇದದ ಕಾಲದಲ್ಲಿ ತಾಯಿ ಗಂಡಸೋ ಏನೋ! ಸ್ಮೃತಿಗಳಲ್ಲಿ ಮನುಧರ್ಮಶಾಸ್ತ್ರ ಮುಖ್ಯ. ಸಂಧ್ಯಾವಂದನೆಯಲ್ಲಿ ಅವನ ನಾಮೋಚ್ಚಾರಣ: "ಯತ್ರನಾರ್ಯಸ್ತುಪೂಜ್ಯಂತೇ ರಮಂತೇ ತತ್ರದೇವತಾಃ" ಎಂಬುದನ್ನು ಉಚ್ಚರಿಸಿ ತಮ್ಮ ಪಾಂಡಿತ್ಯವನ್ನು ಮೆರೆಯಿಸಲಿಕ್ಕೆ ಮಾತ್ರವೆಯೋ ಏನೋ. ಅಥವಾ "ನಾರಿ" ಎಂಬುದರ ಅರ್ಥ ಪುಲ್ಲಿಂಗಕ್ಕೆ ಸಂಬಂಧಪಟ್ಟದ್ದೇನಾದರೂ ಇದೆಯೋ! ಏನ್ನೈಗೆ ನಮ್ಮ ಸಂಸ್ಕೃತಿಯಲ್ಲಿ ಬಹಳ

ಮಹತ್ವ ಮತ್ತು ವಿದ್ಯಾದೇವಿಯು ಹೆಂಗಸು. ಧನದೇವಿಯು ಹೆಂಗಸು. ಶಕ್ತಿ ದೇವಿಯು ಹೆಂಗಸು. ರಾಮ, ಕೃಷ್ಣ ಎಂದು ಹೇಳುವಾಗ ಸೀತಾರಾಮ, ರಾಧಾಕೃಷ್ಣ ಎಂದು ಹೇಳುವದೇ ಕೇಳಬರುತ್ತದೆಯೇ ಹೊರತು ರಾಮಸೀತಾ, ಕೃಷ್ಣರಾಧಾ ಎಂಬುವದು ಎಲ್ಲಿಯೂ ಇಲ್ಲ. ಸದ್ಗ್ರಂಥಗಳ [illegible] ಭ[illegible]ನಾಮೋಚ್ಚರಣದಲ್ಲಿ, ಮಾತುಕಥೆಗಳಲ್ಲಿ ಸ್ತ್ರೀಗೆ ಪ್ರಥಮಸ್ಥಾನ. [illegible]ಸಂಗದಲ್ಲಿ ಮಾತ್ರ (ಪಾಪ) ಸ್ತ್ರೀಯು ಒಂದು ದುರ್ದೈವ. ಪಾಪ[illegible]ವು ಇದಕ್ಕಿಂತ ಹೆಚ್ಚು ಎಲ್ಲಿಯಾದರೂ ಇದ್ದೀತೇ? ಅವಳಿಗೆ ವಿದ್ಯೆ ಬೇಡ, ಸತ್ಸಂಗ ಬೇಡ, ಸುಖ ಬೇಡ, ಸ್ನೇಹಿತರು ಬೇಡ. ಗಂಡನು ಹೇಳಿದಂತೆ ನಲಿದಾಡಿದರೆ ಸಾಕು. ಅವನ ಸನ್ಮಾರ್ಗಗಳಲ್ಲಿ ಮಾತ್ರವಲ್ಲ, ಅವನ ದುರ್ಮಾರ್ಗಗಳಲ್ಲಿಯೂ ಸಹಕಾರಿಯಾಗಿರುವದೇ ಅವಳ ಧರ್ಮ! ಅದೇ ಪಾತಿವ್ರತ್ಯವಂತೆ. ಅವಳು ಹೆಂಡತಿಯಾಗಿ, ಗಂಡನ ವಿಷಯಭೋಗಗಳಿಗನುಕೂಲವಾಗುವಾಗ ಸರಿಸಮಾನಳೇ, ಯೋಗ್ಯಳೇ. ಸಹಧರ್ಮಿಣಿಯಂಥವಳು. ಗಂಡನಿಗೆ ಧರ್ಮವಾಸನೆಯೇ ಇಲ್ಲದಮೇಲೆ ಅವಳು ಹ್ಯಾಗೆ ಸಹಧರ್ಮಿಣಿಯಾಗಬೇಕು? ವಿದ್ಯೆಯಿಂದ ದೂರೀಕರಿಸಲ್ಪಟ್ಟ ಅವಳಿಗೆ ಗಹನವಾದ ಸನಾತನವಾದ ಧರ್ಮವಾದರೂ ಹ್ಯಾಗೆ ತಿಳಿಯಬೇಕು? ಯಾರಾದರೂ ಒಬ್ಬ ಹೆಂಗಸು ಸ್ವತಂತ್ರ ಬುದ್ಧಿಯಿಂದ ನ್ಯಾಯವಾದ ವಿದ್ಯಾರ್ಜನೆಯನ್ನು ಮಾಡಲುದ್ಯುಕ್ತಳಾದರೆ ಅವಳ ಅಪಕೀರ್ತಿಯನ್ನಂತೂ ಇಡಲಿಕ್ಕೇ ಎಡೆಯಿಲ್ಲ. ಅವಳಿಗೆ ತರ್ಜನಿಯನ್ನು ತೋರಿಸುವ ದುರ್ಜನರು ಸಾವಿರಾರು. ಹೆಂಗಸರೂ ಎಷ್ಟೋ ಮಂದಿ ಅವಳನ್ನು ಕಡ್ಡಿಗೆ ಕಟ್ಟುವವರು. ಗಾರ್ಗಿ, ಮೈತ್ರೇಯಿ, ಅಂಬಾಪಾಲಿ, ಸೀತಾ, ದ್ರೌಪದಿಯಂತಹ ದಿವ್ಯ ಲಲನಾಮಣಿಗಳು ಲೀಲೆಯನ್ನಾಡಿದ ಈ ಪುಣ್ಯಭೂಮಿಯ ಹೆಂಗಸರ ಈಗಿನ ಸ್ಥಿತಿಯು ಹ್ಯಾಗಿದೆ! ಆಡುವ ಪುಸ್ತಕದ ಮಾತು ಒಂದಾದರೆ ಮಾಡುವ ಸ್ವಾರ್ಥಕರ್ಮವು ಇನ್ನೊಂದು. ಇದೀಗ ನಮ್ಮ ಜ್ಞಾನಿಗಳ ಸತ್ಕಾರ್ಯ: ಮತ್ತು ಅವರ ಕಾಮನಾಟಕ್ಕೆ ಒಳಪಟ್ಟ ಬಗ್ಗಿಸಲ್ಪಟ್ಟ ತಗ್ಗಿಸಲ್ಪಟ್ಟ ಹೆಂಗಸರ ಹೊಟ್ಟೆಯಲ್ಲಿ ಹುಟ್ಟುವ ಸಂತಾನವಾದರೂ ಎಷ್ಟು ಧರ್ಮಾಭಿಮಾನಭರಿತವಾದ್ದೀತು? ಈಗಲಾದರೂ ಹೆಂಗಸರು ತಮ್ಮ ಪೂರ್ವಕಾಲದ ತಾಯಿಂದಿರಿಗಿದ್ದ ಉನ್ನತಸ್ಥಿತಿಯನ್ನು ವಿದ್ಯಾವತಿಯರಾಗಿ ನಿಂದಾಸ್ತುತಿಗಳನ್ನು ಲೆಕ್ಕಿಸದೆ ಪಡೆಯದಿದ್ದರೆ ಮುಂದೆ ದೇಶಧರ್ಮಗಳೆರಡೂ ಯಾವ ನೀಚಗತಿಯನ್ನೈದುವವು ಎಂದು ಹೇಳಬೇಕಾಗಿಯೇ ಇಲ್ಲ.

---

# ನೂರ್ಜಹಾನ್ ಮಹಾರಾಣಿ

## ೧ನೇ ಅಧ್ಯಾಯ

### ಹುಟ್ಟು ಚಿಕ್ಕತನವೂ.

ಈ ನಮ್ಮ ಭರತಭೂಮಿಯು ಎಷ್ಟೋಮಂದಿ ಪ್ರಸಿದ್ಧರಾದ ಸ್ತ್ರೀಪುರುಷರ ಜನ್ಮಸ್ಥಾನವಾಗಿರುತ್ತದೆಂದು ನಾವೆಲ್ಲರೂ ನಲವಿನಿಂದ ಅಭಿಮಾನಪಡುತ್ತೇವಷ್ಟೆ. ಈ ಹೆಸರುವಾಸಿಯಾದ ಹೆಂಗಸರಲ್ಲಿ ಕೆಲವರು ತಮ್ಮ ವಿದ್ವತ್ತಿನಿಂದಲೂ, ಕೆಲವರು ತಮ್ಮ ಪಾತಿವ್ರತ್ಯಮಹಿಮೆಯಿಂದಲೂ ಮತ್ತೆ ಕೆಲವರು ತಮ್ಮ ಚಾತುರ್ಯ, ಶೌರ್ಯ, ಧೈರ್ಯ, ಸಾಹಸಾದಿ ಗುಣಗಳಿಂದಲೂ ಖ್ಯಾತಿಯನ್ನು ಹೊಂದಿದರು. ಈ ಮೂರನೆಯ ವರ್ಗದ ವನಿತೆಯರಲ್ಲಿ ದಶರಥಮಹಾರಾಜನ ಕಿರಿಹೆಂಡತಿಯಾದ ಕೈಕೆಯು ತನ್ನ ಗಂಡನಿಗೆ ನೆರವಾಗಿ ತನ್ನ ಕೆಚ್ಚೆದೆಯನ್ನು ತೋರಿಸಿದಳೆಂದು ರಾಮಾಯಣದಲ್ಲಿ ಬರೆದಿದೆ. ಆದರೆ ಇದು ಪ್ರಾಚೀನಕಾಲದ ವರ್ಣನೆಯಾಯಿತು. ಅರ್ವಾಚೀನಕಾಲದಲ್ಲಿ ಅಹಮ್ಮದನಗರದ ರಾಣಿಯಾದ ಚಾಂದಬೀಬಿಯೂ, ಝಾನ್ಸಿಯ ಮಹಾರಾಣಿಯಾದ ಲಕ್ಷ್ಮೀಬಾಯಿಯೂ, ತಮ್ಮತಮ್ಮ ಕಲಿತನವನ್ನೂ (ಎದೆಗಾರಿಕೆಯನ್ನು) ಸಾಹಸವನ್ನೂ ತೋರಿಸಿ ಎಷ್ಟೋಮಂದಿ ಮೀಸೆ ಹೊತ್ತ ಗಂಡಸರನ್ನು ನಾಚಿಸಿದ್ದು ನಮ್ಮ ವಾಚಕಮಹಾಶಯರಲ್ಲಿ ಅನೇಕರಿಗೆ ಗೊತ್ತಿರುವ ಸಂಗತಿಯೇ ಸರಿ. ಆದರೆ ಇವರೆಲ್ಲರೂ ಅರಸುಮನೆತನಕ್ಕೆ ಸೇರಿದವರು. ತೀರ ಬಡತನದಲ್ಲಿ ಹುಟ್ಟಿ ತನ್ನ ಗುಣಗಳಿಂದಲೇ ಮುಂದಕ್ಕೆ ಬಂದು ಕೊನೆಗೆ ಡಿಲ್ಲಿಯ ಸಾರ್ವಭೌಮನಾದ ಜಹಂಗೀರ ಬಾದಶಹನ ಪಟ್ಟದ ರಾಣಿಯಾಗಿ ಹೆಸರುವಾಸಿಯಾದವಳೆಂದರೆ ನಮ್ಮ ಚರಿತ್ರನಾಯಕಿಯಾದ ನೂರಜಹಾನ ಮಹಾರಾಣಿಯೇ ಸರಿ.

೧೬ನೆಯ ಶತಮಾನದ ಕೊನೆಯ ಭಾಗದಲ್ಲಿ ಇರಾಣದ ರಾಜ್ಯದಲ್ಲಿ ತಮ್ಮಣಿಯಿದ್ದಿಲ್ಲ. ಹಿಂದೆ ಹುಮಾಯೂನನಿಗೆ ಭರತಖಂಡದ ರಾಜ್ಯವನ್ನು ದೊರಕಿಸಲಿಕ್ಕೆ ನೆರವಾದ ತಹಮಾಸ್ಪ ಬಾದಶಹನು ಅಳಿದು ಹೋಗಿದ್ದನು. ವಿಷಯಲಂಪಟನೂ, ದುಂದುಗಾರನೂ, ಹೇಡಿಯೂ ಆದ ಅವನ ಮೊಮ್ಮಗನು ಗಾದಿಯನ್ನು ಏರಲು ಹಳ್ಳಿಪಳ್ಳಿಗಳಲ್ಲಿ ಗದ್ದಲಗಳೂ, ರಾಜಧಾನಿಯಲ್ಲಿ ಒಳಸಂಚುಗಳೂ ನಡೆಯುತ್ತಿದ್ದವು. ಅಲ್ಲಲ್ಲಿ ಬಂಡುಗಾರರ ಪುಂಡಾಟವು ತಲೆದೋರುತ್ತಿತ್ತು. ಆಸ್ತಿ ಪ್ರಾಣ ಮಾನಗಳ ಸುರಕ್ಷತೆಯು ಕಡಮೆಯಾಗಿತ್ತು. ಆದ್ದರಿಂದ ಶೂರರಾದ ಸಾಹಸಿಕರು ತಮ್ಮ ಜನ್ಮಭೂಮಿಯಾದ ಇರಾಣದೇಶವನ್ನು ಬಿಟ್ಟು ಭರತಖಂಡದ ಹಾದಿಯನ್ನು ಹಿಡಿಯುತ್ತಿದ್ದರು. ಈ ಸಾಹಸಿಕರೊಳಗೆ ನೂರಜಹಾನಳ ತಂದೆಯಾದ ಖ್ವಾಜಾ ಅಯ್ಯಾಸನು ಒಬ್ಬನಾಗಿದ್ದನು. ಅವನು ತನ್ನ ತಾಯಿತಂದೆಗಳು ಒಪ್ಪದ ಹೆಣ್ಣನ್ನು ಮದುವೆಯಾದ್ದರಿಂದ ಅವನ ತಂದೆಯಾದ ಖ್ವಾಜಾ ಮುಹಮ್ಮದ್‌ಷರೀಫನು ಕಡುಮುನಿದು ಅವನನ್ನು ಮನೆಯಿಂದ ಹೊರಗೆಹಾಕಿದನು ಆದಕಾರಣ ಅಯ್ಯಾಸನು ನಿರುಪಾಯನಾಗಿ ತನ್ನ ತುಂಬ ಬಸುರಿದ್ದ ಹೆಂಡತಿಯೊಡನೆ ಈ ದೇಶದ ಹಾದಿಯನ್ನು ಹಿಡಿದನು.

ಎಲ್ಲ ನಾಡುಗಳಲ್ಲಿ ಎಲ್ಲ ಕಾಲದಲ್ಲಿ ಎಲ್ಲ ಜನಾಂಗದವರಲ್ಲಿ ಎಲ್ಲ ಜಾತಿಯವರಲ್ಲಿ ಸರಿಕರೊಡನೆ ಶರೀರ ಸಂಬಂಧವನ್ನು ಮಾಡಬೇಕೆಂಬ ಬಯಕೆಯು ನೆಲೆಗೊಂಡಿರುತ್ತದಷ್ಟೆ. ಈ ಖ್ವಾಜಾ ಅಯ್ಯಾಸನ ತಂದೆಯು ತೆಹರಾನ ನಗರದಲ್ಲಿ ಒಬ್ಬ ಹೆಸರುವಾಸಿಯು ಸರದಾರನಾದ್ದರಿಂದ ಅವನ ಮನಸ್ಸಿನಲ್ಲಿ ತನ್ನ ಮಗನು ಸಮಾನಸ್ಕಂಧರ ಹೆಣ್ಣನ್ನು ಮದುವೆಯಾಗಬೇಕೆಂಬ ಹಿರಿದಾಶೆಯಿತ್ತು. ಆದರೆ ಖ್ವಾಜಾ ಅಯ್ಯಾಸನು ಅಮಾನೆ ಎಂಬೊಬ್ಬ ಕಡಮೆ ದರ್ಜೆಯ ಹೆಣ್ಣಿನ ಚೆದರಿಗೆ ಮೆಚ್ಚಿ ಮನಸೋತು ತನ್ನ ಮುಪ್ಪಿನ ತಂದೆಯನ್ನು ಭಗ್ನಮನೋರಥನನ್ನಾಗಿ ಮಾಡಿದನು. ಆದ್ದರಿಂದ ಕುಲಾಭಿಮಾನಿಯಾದ ಮುದುಕನು ನೆಟ್ಟಗೆದ್ದು ಕೆಂಡದಂತೆ ಕಣ್ಣು ಕೆಂಪಗೆ ಮಾಡಿಕೊಂಡು ಅಯ್ಯಾಸನನ್ನು ಕರೆದು— "ಅಯ್ಯಾಸ, ನೀನು ಬಲು ದುರ್ದೈವಿಯು! ಎಷ್ಟೋ ಮಂದಿ ದೊಡ್ಡ ದೊಡ್ಡ ಸರದಾರರ ಚೆಲುವೆಯರಾದ ಹೆಣ್ಣುಮಕ್ಕಳು ನಿನ್ನನ್ನು ವರಿಸ

ಬಯಕೆಯನ್ನು ಪೂರ್ಣಮಾಡಿರೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ.

ಅಮೀನೆಯು ಹಠಹಿಡಿದುದರಿಂದ ನಿರುಪಾಯನಾಗಿ ಅಯ್ಯಾಸನು ಈಕೆಯನ್ನು ಸಂಗಡ ಕರೆದುಕೊಂಡು ಹೋಗಲಿಕ್ಕೆ ಒಡಂಬಟ್ಟನು. ತಾಯಿಯು ತಂದೆಗೆ ತಿಳಿಯದಂತೆ ಕೆಲವು ಹಣ ಕೊಟ್ಟಳು. ಉಳಿದ ನೆಂಟರು ಕೆಲಮಟ್ಟಿಗೆ ನೆರವಾದರು. ಅಯ್ಯಾಸನು ಒಂದು ಒಂಟೆಯನ್ನು ಕೊಂಡು ಅದರಮೇಲೆ ಅರಿವೆ ತಿಂಡಿಗಳು ತುಂಬಿದ ಒಂದು ಕಂಟಲಿಯನ್ನು ಹೇರಿ ಅದರಮೇಲೆ ತನ್ನ ತುಂಬ ಬಸುರಿನ ಹೆಂಡತಿಯನ್ನು ಕುಳ್ಳರಿಸಿ ತಾನು ಹಿಂದೆ ನಡೆಯುತ್ತ ತೆಹರಾನ ಪಟ್ಟಣವನ್ನು ಬಿಟ್ಟನು

ಈ ದಂಪತಿಗಳು ದಾರಿಯಲ್ಲಿ ಪಟ್ಟ ಶ್ರಮವನ್ನೂ, ಅನುಭವಿಸಿದ ಕಷ್ಟವನ್ನೂ ಹಸಿವೆ ನೀರಡಿಕೆಗಳ ಬಾಧೆಯನ್ನೂ ಬಣ್ಣಿಸಲಳವಲ್ಲ. ಉಸುಬಿನ ಕಾಡಿನಲ್ಲಿ ಬಿಸಿಲಿನ ಉರಿಯಿಂದ ಬಾಯಾರಿ ಬೆಂಡಾಗಿ ತೊಳಲಿ ಬಳಲಿದರು. ದುಷ್ಕಾಲದಲ್ಲಿ ಅಧಿಕಮಾಸವೆಂಬ ಗಾದೆಯಂತೆ ದಾರಿಯಲ್ಲಿ ಅಮೀನೆಯು ನಕ್ಷತ್ರದಂತಹ ಹೆಣ್ಣುಕೂಸನ್ನು ಹೆತ್ತಳು (೧೫೭೭). ಆ ಮುದ್ದುಕೂಸನ್ನು ನೋಡಿ ಹಿಗ್ಗಬೇಕೋ ಅರಣ್ಯದ ತಾಪತ್ರಯಗಳಿಗೆ ಅಳಬೇಕೋ ಎಂಬುದು ಆ ದಂಪತಿಗಳಿಗೆ ತಿಳಿಯದಂತಾಯಿತು. ಅಷ್ಟರಲ್ಲಿ ಅವರು ತಂದ ಅನ್ನಸಾಮಗ್ರಿಗಳು ಮುಗಿಯಿತು. ನಾಲ್ಕೈದು ಹರದಾರಿಹೋದರೂ ಗುಟಕು ನೀರು ದೊರೆಯಲೊಲ್ಲದು. ಗತ್ಯಂತರ ಕಾಣದೆ ಅವರು ತಾವು ತಂದ ಒಂಟೆಯನ್ನು ಕೊಂದು ಅದರ ಮಾಂಸದಿಂದ ಕೆಲವುದಿನ ಹೊಟ್ಟೆಹೊರಕೊಂಡರು. ಹತ್ತುವ ಒಂಟೆ ಹೋದ್ದರಿಂದಲೂ, ಅರಿವೆಯಂಚಡಿ ಹಾಸಿಗೆ ಹೊದಿಕೆಗಳನ್ನುತಾವೇ ಹೊತ್ತುಕೊಂಡು ಹೋಗಬೇಕಾದ್ದರಿಂದಲೂ ದಾರಿಸಾಗದಂತಾಯಿತು. ಹೊಟ್ಟೆಗೆ ಸಾಕಾದಷ್ಟು ಹಾಲು ದೊರೆಯದ್ದರಿಂದ ಕೂಸು ಒಂದೇ ಸರಸೆ ಅಳತೊಡಗಿತು. ಇಂತಹ ಸಂದರ್ಭದಲ್ಲಿ ಎಂತಹ ಕಚ್ಚೆದೆಯವನಾದರೂ ಎದೆಗುಂದಬಹುದು. ಅಯ್ಯಾಸನು ಎಲ್ಲ ಬಗೆಯಿಂದ ಅಳೆದು ಹಾಕಿದನು. ಅವನಿಗೆ ಪಾರಾಗುವ ಹಂಚಿಕೆಯೇ ತೋರಲೊಲ್ಲದು. ಕಟ್ಟಕಡೆಗೆ "ಕ್ಷೀಣಾ ನರಾ ನಿಷ್ಕರುಣಾಭವಂತಿ" ಎಂಬ ನ್ಯಾಯದಂತೆ ಕೂಸನ್ನು ಅಡವಿಯಲ್ಲಿ ಬಿಟ್ಟು ತಾವಿಬ್ಬರೇ ಮುಂದೆಸಾಗಬೇಕೆಂದು ನಿಶ್ಚಯಿಸಿ, ತನ್ನ ಅರ್ಧಾಂಗಿಯಮುಂದೆ ಆಕ್ರೂರವಿಚಾರವನ್ನು ಅಂಜುತ್ತ ಅಂಜುತ್ತ ಮೆಲ್ಲಗೆ

ಉಸುರಿದನು. ಇಂತಹ ದುಷ್ಟವಿಚಾರಕ್ಕೆ ಹೆತ್ತತಾಯಿಯು ಎಂದಾದರೂ ಒಪ್ಪಬಹುದೇ ? ಆಕೆಯು ಸಿಟ್ಟು ಚಿಂ[illegible]ನಾಗಿ ಕಣ್ಣು ಕೆಂಪಗೆ ಮಾಡಿಕೊಂಡು ಹಸಿದ ಹುಲಿಯಂತೆ ಅವನ ಮೇಲೆ ಹರಿದುಬಂದಳು. ಆಕೆಯ ಕೋಪಾಟೋಪವನ್ನು ನೋಡಿ ಅವನು ಹೆದರಿ ತನ್ನ ನಿರ್ಘೃಣವಾದ ಎಣಿಕೆಯನ್ನು ಹಿಂದಕ್ಕೆ ತೆಗೆದುಕೊಂಡನು. ಮುಂದೆ ೪-೫ ದಿವಸ ಹಾಗೇ ಕಳೆದುಹೋದವು. ದಿನದಿನಕ್ಕೆ ತಾಪತ್ರಯಗಳು ಹೆಚ್ಚಾಗ ತೊಡಗಿದವು. ಹೆತ್ತಕರುಳಿಗಿಂತ ಪಡುವ ಕಷ್ಟವು ಮಿಗಿಲಾಯಿತು. ಅಮೀನಿಗೆ ಏನೂ ತಿಳಿಯದಂತಾಯಿತು. ಗಂಡನು ಎಡೆಬಿಡದ ಉಸುರು ಸತಿಗೆ ಮಗಳ ಮೇಲಿನ ಮೋಹವು ತಗ್ಗಿತು. ಮಗಳ ಜೀವವನ್ನು ಉಳಿಸಿಕೊಳ್ಳಲಿಕ್ಕೆ ಹೆಣಗಾಡಿ ಗಂಡನ ಜೀವಕ್ಕೆ ಅಪಾಯ ತರುವುದು ಸರಿಯಲ್ಲವೆಂದು ಆಕೆಗೆ ಹೊಳೆಯಿತು. ಮಗಳ ಜೀವಕ್ಕಿಂತ ಗಂಡನ ಜೀವವು ಹೆಚ್ಚಿನದೆಂದು ಆಕೆಗೆ ಮನವರಿಕೆಯಾಯಿತು. ಆದ್ದರಿಂದ ಆಕೆಯು ಕೂಸನ್ನು ಬಿಟ್ಟುಹೋಗಲಿಕ್ಕೆ ಒಡಂಬಟ್ಟಳು. ಅವರಿಬ್ಬರೂ ಕೂಡಿ ಆ ಕೂಸನ್ನು ಒಂದು ಮರದ ಬುಡಕ್ಕೆ ಎಲೆಗಳನ್ನು ಹಾಸಿ ಮಲಗಿಸಿ, ಎಲೆಗಳನ್ನು ಅದರಮೇಲೆ ಹೊಚ್ಚಿ ಮುಂದಕ್ಕೆ ಸಾಗಿದರು. ನೂರಾರು ಮಾರು ಹೋಗುವಷ್ಟರೊಳಗೆ ತಾಯಿಗೆ ಪಶ್ಚಾತ್ತಾಪ ಹುಟ್ಟಿ ಹೆತ್ತಕರಳಿನ ನೋವು ಉಕ್ಕೇರಿತು. ದುಃಖದಿಂದ ಕುತ್ತಿಗೆಯ ನರಗಳು ಉಬ್ಬಿದವು. ಕಾಲು ಮುಂದಿಡಲಿಕ್ಕೆ ತನುವಿಲ್ಲದಾಯಿತು. ಆಗ ಆಕೆಯು ಗದ್ಗದಸ್ವರದಿಂದ, "ಪ್ರಿಯನೇ ! ಇನ್ನೊಮ್ಮೆ ನನ್ನ ಕಂದನನ್ನು ನೋಡಿಬರುವೆನು, ದಯವಿಟ್ಟು ಅಪ್ಪಣೆಕೊಡಿ" ಎಂದು ಅಂಗಲಾಚಿ ಬೇಡಿಕೊಂಡಳು. ಗಂಡಹೆಂಡರಿಬ್ಬರೂ ತಿರುಗಿಹೋಗಿ ನೋಡುತ್ತಾರೆ, "ಕೂಸು ಗಾಢವಾಗಿ ನಿದ್ದೆಮಾಡುತ್ತದೆ. ಒಂದು ದೊಡ್ಡ ಘಟಸರ್ಪವು ಆ ಕೂಸಿನ ತಲೆಯಮೇಲೆ ತನ್ನ ಹರವಾದ ಹೆಡೆಯನ್ನು ಕೊಡೆಯಾಗಿ ಹಿಡಿದು, ಅದನ್ನು ಅಲ್ಲಾಡಿಸಿ ಕೂಸಿಗೆ ಗಾಳಿಹಾಕುತ್ತದೆ." ಈ ಅತ್ಯದ್ಭುತವಾದ ನೋಟವನ್ನು ನೋಡಿ ತಾಯಿತಂದೆಗಳಿಬ್ಬರೂ ದಿಗಿಲು ಬಡಿದು ಚಿತ್ರದೊಳಗಿನ ಗೊಂಬೆಗಳಂತೆ ಸುಮ್ಮನೆ ಸ್ತಬ್ಧರಾಗಿ ನಿಂತುಕೊಂಡರು. ೮-೧೦ ನಿಮಿಷಗಳಾದ ಬಳಿಕ ಅಯ್ಯಾಸನಿಗೆ ಅರಿವು ಬಂದು ಗಟ್ಟಿಯಾಗಿ ಚಪ್ಪಳೆಯನ್ನು ಬಾರಿಸಿದನು, ಆ ಸಪ್ಪಳವನ್ನು ಕೇಳಿ

[ಸಶೇಷ]

# ಸರಸ್ವತಿ

ಸಂಪುಟ ೫ } ಕ್ರೋಧನ ವರ್ಷ—ಜ್ಯೇಷ್ಠ ಮಾಸ { ಸಂಚಿಕೆ ೨


## ಶ್ರೀವಿದ್ಯಾರಣ್ಯರ ಜಯಂತಿ

ಪಾಶ್ಚಾತ್ಯ ನಾಗರಿಕತೆಯು ಹೆಚ್ಚುತ್ತಬಂದಂತೆಲ್ಲಾ ನಮ್ಮ ಶಾಮ್ರಾಜ್ಯಸ್ಥಾಪಕರೂ, ಪಂಡಿತವರ್ಯರೂ, ಕವಿಚಕ್ರವರ್ತಿಗಳೂ ಆದಂಥವರ ದಿವ್ಯನಾಮವು ನಮ್ಮ ಸ್ಮೃತಿಪಥದಿಂದ ಅಳಿಸಿ ಹೋಗುತ್ತಿರುವುದೇನೂ ಆಶ್ಚರ್ಯವಲ್ಲ. ನಮ್ಮ ಪುಣ್ಯಭೂಮಿಯಾದ ಈ ಆರ್ಯಾವರ್ತದಲ್ಲಿ ಅವತರಿಸಿದಷ್ಟು ಪುಣ್ಯಪುರುಷರೂ, ಮಹಾತ್ಮರೂ ಮತ್ತೆಲ್ಲಿಯೂ ಜನಿಸಲಿಲ್ಲವೆಂದು ಧಾರಾಳವಾಗಿ ಹೇಳಬಹುದಾಗಿದೆ. ಅಂತಹ ಮಹಾನುಭಾವರ ಪವಿತ್ರನಾಮಗಳು ಕೂಡ ನಮ್ಮ ಸ್ಮೃತಿಗೆ ಬಾರದಿರುವುದು ನಮ್ಮಗಳ ದುರ್ದೈವವೇ ಹೊರತು ಮತ್ತೇನೂ ಇಲ್ಲ. ಈ ಕ್ಷಣದಲ್ಲಿ ನಾವು "ನಮ್ಮ ಕರ್ಣಾಟಕ"ವೆಂದು ಯಾವ ಪುಣ್ಯಭೂಮಿಯನ್ನು ಹೆಮ್ಮೆಯಿಂದ ಹೇಳಿಕೊಳ್ಳುತ್ತಿರುವೆವೋ ಆ ಪುಣ್ಯಭೂಮಿಯನ್ನು ಸ್ಥಾಪಿಸಿದ ಮಹಾಪುರುಷನಾರು? ಎನ್ನುವುದನ್ನು ಕೂಡ ಸ್ಮರಿಸಲಾರದಷ್ಟು ಮರೆತು ನಮ್ಮಲ್ಲಿ ನೆಲೆಗೊಂಡಿರುವುದು. ಮಹಾತ್ಮಾ ಗಾಂಧಿಗಳಂಥವರು ಈ ಭಾರತ ಭೂಮಿಯಲ್ಲಿ ಜನ್ಮವೆತ್ತಿ ಭಾರತೀಯರಿಗೆ ಅದರಲ್ಲೂ ಮುಖ್ಯವಾಗಿ ಕರ್ಣಾಟಕರಿಗೆ ಜಾಗ್ರತೆಯನ್ನುಂಟುಮಾಡಿ ಸ್ವದೇಶ, ಸ್ವಜನ, ಸ್ವವಸ್ತು ಇವುಗಳಲ್ಲಿ ಆತ್ಮಾಭಿಮಾನವನ್ನು ಹೆಚ್ಚಿಸಿದನಂತರವಾದರೂ ಸುಮಾರು ಆರು ಶತಮಾನಗಳ ನಂತರವಾದರೂ ಅಂತಹ ಮಹಾಪುರುಷನ ಜನ್ಮದಿನವನ್ನು ಕೊಂಡಾಡುವ ಸುಬುದ್ಧಿಯನ್ನು ಭಗವಂತನು ನಮ್ಮ ಕರ್ಣಾಟಕರಲ್ಲಿ ಉಂಟುಮಾಡಿದುದಕ್ಕಾಗಿ ಪರಮಾತ್ಮನನ್ನು ಎಷ್ಟು ವಂದಿಸಿದರೂ ಸಾಲದಾಗಿದೆ.

ಹದಿನಾಲ್ಕನೆಯ ಶತಮಾನದಲ್ಲಿ ದಕ್ಷಿಣ ಹಿಂದೂಸ್ಥಾನದ ಪೂರ್ವ ಸಮುದ್ರತೀರದ ಸಮೀಪದಲ್ಲಿ ಸ್ಥಾಪಿಸಲ್ಪಟ್ಟು ಈಗ ಬಹುಮಟ್ಟಿಗೆ ನಾಮಾವಶೇಷವಾಗಿರುವ ಪಶ್ಚಿಮ ಸಮುದ್ರತೀರದವರೆಗೆ ವ್ಯಾಪಿಸಿ ಅತ್ಯುನ್ನತ ವೈಭವಶಿಖರವನ್ನೇರಿದ್ದ ಕರ್ಣಾಟಕ ಸಾಮ್ರಾಜ್ಯದ ಸಂಸ್ಥಾಪಕರಾದ ಅಮಾತ್ಯಮಾಧವಾಚಾರ್ಯರೇ ಈ ವಿದ್ಯಾರಣ್ಯರೆನ್ನುವವರು. ಈತನ ಜನ್ಮದಿನವು ಇದೇ ಜೂನ್ ತಿಂಗಳಲ್ಲಿ ನಡೆಯಿತು. ಇಂತಹ ಸುದಿನದಲ್ಲಿ ಆ ಮಹಾಪುರುಷನ ದಿವ್ಯಶಕ್ತಿಯು

ವಿಷಯವಾಗಿ ಸ್ವಲ್ಪಮಟ್ಟಿಗೆ ಇಲ್ಲಿ ವಿವರಿಸುವುದು ಅತ್ಯಾವಶ್ಯಕವಾಗಿರುವುದು. ವಿದ್ಯಾರಣ್ಯರಿಗೆ ಮಾಧವಾಚಾರ್ಯರೆಂದು ಪೂರ್ವಾಶ್ರಮದ ಹೆಸರು. ಈ ಪುಣ್ಯಪುರುಷರ ಬಾಲ್ಯ ವೃತ್ತಾಂತವು ಅತಿ ವಿಚಿತ್ರವಾದುದು. ಈತನು ಬಾಲ್ಯದಲ್ಲಿ ಬಹಳ ದರಿದ್ರಾವಸ್ಥೆಯಲ್ಲಿದ್ದುದರಿಂದ ಬೇಸತ್ತು ವಿರಕ್ತನಾಗಿ ಹಂಪೆಯ ವಿರೂಪಾಕ್ಷನ ಮಂದಿರದಲ್ಲಿ ಎರಡು ಮೂರು ವರ್ಷಗಳು ತಪಸ್ಸುಮಾಡುತ್ತಿರಲು ಅಲ್ಲಿ ಆಕಳು ಮೇಯಿಸುತ್ತಿದ್ದ ಹುಡುಗನೊಬ್ಬನು ಈತನಿಗೆ ಪ್ರತಿದಿನವೂ ದೇವರ ಅಭಿಷೇಕಕ್ಕಾಗಿ ಹಾಲು ತಂದುಕೊಡುತ್ತಿದ್ದನೆಂದೂ, ಈ ಹಾಲಿನಿಂದ ಮಾಧವನು ವಿರೂಪಾಕ್ಷೇಶ್ವರನಿಗೂ ಭುವನೇಶ್ವರಿಗೂ ಅರ್ಚನೆ ಅಭಿಷೇಕಗಳನ್ನು ಮಾಡುತ್ತಿದ್ದನೆಂದೂ, ಈತನ ಭಕ್ತಿಗೆ ಮೆಚ್ಚಿ ಭುವನೇಶ್ವರಿಯು ಪ್ರತ್ಯಕ್ಷಳಾಗಿ ಏನು ವರ ಬೇಕೆಂದು ಕೇಳಿದಹಾಗೆಯೂ, ಆಗ ಮಾಧವನು ಸುವರ್ಣವೃಷ್ಟಿಯನ್ನು ತಾನಪೇಕ್ಷಿಸಿದಾಗ ಸುರಿಸಬೇಕೆಂದು ಕೇಳಿಕೊಂಡಂತೆಯೂ, ಭುವನೇಶ್ವರಿಯು ಹಾಗೆಯೇ ಆಗಲೆಂದು ಹೇಳಿ ಅಂತರ್ಧಾನವಾದಂತೆಯೂ, ಅಂದಿನಿಂದ ಮಾಧವನು 'ವಿದ್ಯಾರಣ್ಯ'ನೆಂಬ ಹೆಸರಿನಿಂದ ಪ್ರಸಿದ್ಧವಾದಹಾಗೆಯೂ ತಿಳಿದುಬರುವುದು. ಮೇಲೆ ಹೇಳಿದ ಬಾಲಕನೂ ಅವನ ಸಹೋದರನೂ ಸೈನ್ಯವನ್ನು ಸಜ್ಜುಗೊಳಿಸಲು ಅವರ ಸಹಾಯದಿಂದ ಆನೆಗೊಂದಿ ಮತ್ತು ಅದರ ಸುತ್ತುಮುತ್ತಲಿನ ರಾಜ್ಯಗಳನ್ನು ಜೈಸಿ, ಹಾಗೆ ತಾವು ಸಂಪಾದಿಸಿದ ರಾಜ್ಯಕ್ಕೆ "ವಿಜಯನಗರ"ವೆಂದು ನಾಮಕರಣ ಮಾಡಿದರು. ಆ ಇಬ್ಬರು ಬಾಲಕರೇ "ಹರಿಹರ ಮತ್ತು ಬುಕ್ಕ"ಎನ್ನುವವರು. ಇವರಲ್ಲಿ ಮೊದಲನೆಯವನಾದ ಹರಿಹರನಿಗೆ ರಾಜ್ಯಾಭಿಷೇಕಮಾಡಿ ವಿದ್ಯಾರಣ್ಯರು ತಾನವರಿಗೆ ಮಂತ್ರಿಯಾಗಿ ನಿಂತು, ಮೊದಲು ಭುವನೇಶ್ವರಿಯು ವಾಗ್ದಾನಮಾಡಿದಂತೆ ಸುವರ್ಣದಮಳೆಯನ್ನು ಸುರಿಸಿ,ಆ ದ್ರವ್ಯ ಸಹಾಯದಿಂದ ವಿಜಯನಗರವನ್ನು ಅತ್ಯುತ್ತಮ ರಾಜ್ಯವನ್ನಾಗಿ ಮಾಡಿ,ಮಂತ್ರಿಪದವಿಯಲ್ಲಿ ಸ್ವಲ್ಪ ಕಾಲಮಾತ್ರವಿದ್ದು ತನ್ನ ತಮ್ಮನಾದ ಸಾಯಣನಿಗೆ ಮಂತ್ರಿಪದವಿಯನ್ನಿತ್ತು ತಾನು ಸನ್ಯಾಸಾಶ್ರಮವನ್ನು ವಹಿಸಿ ಶೃಂಗೇರಿಯ ಮಠದ ಆಧಿಪತ್ಯವನ್ನು ಸ್ವೀಕರಿಸಿದರು. ಈಗ ಕರ್ಣಾಟಕವೆಂದು ಎಂಗಡಿಸಿರುವ ಭಾಗದಲ್ಲಿ ಬಹುಭಾಗವು ವಿದ್ಯಾರಣ್ಯರಿಂದ ಸ್ಥಾಪಿಸಲ್ಪಟ್ಟಿದ್ದ ವಿಜಯನಗರವನ್ನು ಸೇರಿದ್ದಿತು. ಈ ಮೈಸೂರು ಸೀಮೆಯೂ ಕೂಡ ಸೇರಿದ್ದಿತು. ಈ ಕಾರಣದಿಂದಲೇ ಈ ಮಹಾತ್ಮರಿಗೆ "ಕರ್ಣಾಟಕ ಸಿಂಹಾಸನಸ್ಥಾಪನಾಚಾರ್ಯ" ಎಂಬ ಪ್ರಶಸ್ತವಾದ ಬಿರುದು ದೊರೆಯಿತು. ವಿದ್ಯಾರಣ್ಯರು ಅಲ್ಪಕಾಲಮಾತ್ರವೇ ಮಂತ್ರಿಪದವಿಯಲ್ಲಿದ್ದರೂ ಆ ಅಲ್ಪಾವಧಿಯಲ್ಲಿ ಅನೇಕ ಮಹತ್ವವಾದ ರಾಜಕೀಯ ಕಾರ್ಯಗಳನ್ನು ಮಾಡಿರುವರೆಂದು ಅವರ ಚರಿತ್ರೆಯಿಂದ ತಿಳಿದುಬರುತ್ತದೆ. ಈ ಮಹಾತ್ಮರು ವಿರಕ್ತರಾಗಿ ಸನ್ಯಾಸಾಶ್ರಮವನ್ನು ವಹಿಸಿದ್ದಾಗ್ಯೂ, ಮಂತ್ರಿಪೀಠದಿಂದ ಗುರುಪೀಠವನ್ನೇರಿದಾಗ್ಯೂ ವಿಜಯನಗರದ ರಾಜ್ಯವಿಸ್ತಾರ, ಪ್ರಜಾಪಾಲನೆ ಇತ್ಯಾದಿ ರಾಜಕಾರ್ಯಗಳಲ್ಲಿ ತಮ್ಮ

ಅನುಭವವನ್ನು ರಾಜನಿಗೆ ತಿಳಿಸುತಿದ್ದರು. ಮೇಲ್ಕಂಡ ರೀತಿಯಲ್ಲಿ ಸ್ವರಾಜ್ಯವನು ಸ್ಥಾಪಿಸಿ ವಿದ್ಯಾರಣ್ಯ ಸ್ವಾಮಿಗಳು ತಮ್ಮ ಪೂರ್ವಾಶ್ರಮದಲ್ಲಿ ಹೇಗೆ ರಾಜನೀತಿ ವಿಶಾರತ್ವವನ್ನು ಪ್ರಕಟಗೊಳಿಸಿದರೋ ಹಾಗೆಯೇ ಶೃಂಗೇರಿಯ ಗುರುಪೀಠವನ್ನಲಂಕರಿಸಿ ಧರ್ಮ ಸಾಮ್ರಾಜ್ಯದ ವ್ಯವಸ್ಥೆಯನ್ನು ಮಾಡಿದರೆಂದು ಹೇಳಬಹುದಾಗಿದೆ. ಇವರ ಆಧಿಪತ್ಯದಲ್ಲಿ ಮುಖ್ಯವಾಗಿ ನಾಲ್ಕು ಮಠಗಳನ್ನು ನಿರ್ಮಿಸಿ ಇಂತಿಂಥವರು ಇಲ್ಲಿಲ್ಲಿ ಆತಿಥ್ಯವನ್ನು ಸ್ವೀಕರಿಸಬೇಕೆಂದು ಗೊತ್ತುಮಾಡಿದರು. ಇವರು ಅನೇಕ ಕಾವ್ಯಗಳನ್ನು ರಚಿಸಿರುವುದರಿಂದ ಇವರ ಪಾಂಡಿತ್ಯದ ವಿಷಯವಾಗಿ ಹೆಚ್ಚು ಹೇಳಬೇಕಾಗಿಲ್ಲ. ಆದಿಶಂಕರಾಚಾರ್ಯರನಂತರ ಇವರಷ್ಟು ವಿದ್ಯಾವಂತರ್ಯಾರೂ ಶೃಂಗೇರಿಯ ಗುರುಪೀಠವನ್ನಲಂಕರಿಸಿಲ್ಲವೆಂದು ಹೇಳಬಹುದಾಗಿದೆ.

ಮೇಲೆ ಹೇಳಿದಂತೆ ಧರ್ಮ, ಪಾಂಡಿತ್ಯ, ರಾಜ್ಯಾಡಳಿತ, ಇವುಗಳಲ್ಲಿ ಶ್ರೀ ವಿದ್ಯಾರಣ್ಯರು ಒಂದೇ ಸಮನಾಗಿ ಪ್ರಕಾಶಿತರಾಗಿದ್ದರು. ಇಂತಹ ಮಹಾ ಪುಣ್ಯಪುರುಷರ ಜನ್ಮದಿನವು ಬಹುಕಾಲಕ್ಕೆ ಹಿಂದೆಯೇ ನಮ್ಮ ಕರ್ಣಾಟಕದಲ್ಲಿ ಆಚರಿಸಲ್ಪಡಬೇಕಾಗಿತ್ತು; ಆದರೆ ನಮಗೆ ಅಂತಹ ಸುಯೋಗವು ದೊರೆತು ಅವರು ಸ್ಮೃತಿಗೆ ಬಂದದ್ದೇ ಈಗ. ಕರ್ಣಾಟಕವು ಜಾಗ್ರತೆಹೊಂದಿ ನಿದ್ರೆಯಿಂದೆಚ್ಚತ್ತು ಈಗತಾನೇ ನಾಲ್ಕೈದು ವರ್ಷಗಳು ಮಾತ್ರವೇ ಆಗಿದೆ. ಕರ್ಣಾಟಕವು ತನ್ನ ಐತಿಹಾಸಿಕಕಾಲದ ಉದರದಲ್ಲಿ ಯಾವ ಯಾವ ರತ್ನಗಳಿವೆಯೆಂಬುದನ್ನು ಮರೆತು ಈಗತಾನೇ ಸ್ವಲ್ಪ ಸ್ವಲ್ಪವಾಗಿ ನೋಡಲು ಮೊದಲುಮಾಡಿದೆ. ಇಂತಹ ಅಭ್ಯುದಯ ಸೂರ್ಯನು ದೇದೀಪ್ಯಮಾನವಾಗಿ ಬೆಳಗುವಸಮಯದಲ್ಲಿ ಕರ್ಣಾಟಕ ಸಾಮ್ರಾಜ್ಯಸ್ಥಾಪಕರಾದ ಶ್ರೀವಿದ್ಯಾರಣ್ಯರ ಪುಣ್ಯಸ್ಮೃತಿಯು ದೇಶಬಾಂಧವರಿಗೆ ಉಂಟಾದುದು ಕರ್ಣಾಟಕದ ಭಾಗ್ಯೋದಯವೇ ಸರಿ. ಧಾರ್ಮಿಕಸಾಮ್ರಾಜ್ಯದಲ್ಲಿ ವಿಕಸಿತರಾದವರು ಅನೇಕರಿರಬಹುದು, ವಿದ್ವತ್ಪ್ರದೇಶದಲ್ಲಿ ಪ್ರಕಾಶಿತರಾದವರು ಅನೇಕರಿರಬಹುದು, ರಾಜ್ಯಾಡಳಿತದಲ್ಲಿ ಪ್ರಖ್ಯಾತರಾಗಿ ಕೀರ್ತಿಸ್ತಂಭವನ್ನುನೆಟ್ಟ ಮಹನೀಯರು ಅನೇಕರಿರಬಹುದು ; ಆದರೆ ಮೇಲೆ ಹೇಳಿದ ತ್ರಿಗುಣಗಳಲ್ಲಿಯೂ ಪ್ರಸಿದ್ಧರಾಗಿ ರಾಜ್ಯವನ್ನು ಸ್ಥಾಪಿಸಿದವರು ಈ ಕರ್ಣಾಟಕದ ಪ್ರಾಚೀನ ಇತಿಹಾಸದಲ್ಲಿ ಶ್ರೀವಿದ್ಯಾರಣ್ಯರೊಬ್ಬರೇ. ಶ್ರೀರಾಮಚಂದ್ರನಿಗೆ ವಸಿಷ್ಠಮಹರ್ಷಿಗಳಂತೆಯೂ, ಶಿವಾಜಿಗೆ ರಾಮದಾಸನಂತೆಯೂ, ಹರಿಹರಮಹಾರಾಜನಿಗೆ ವಿದ್ಯಾರಣ್ಯರು ಮಂತ್ರಿಗಳಾಗಿಯೂ ಗುರುಗಳಾಗಿಯೂ ಧರ್ಮ, ರಾಜನೀತಿಗಳೆರಡನ್ನೂ ಬೋಧಿಸಿ ಸ್ವರಾಜ್ಯವನ್ನು ಸ್ಥಾಪಿಸಿರುವರು. ಇಂತಹ ಕೀರ್ತಿಯುತ ಆದರ್ಶಸಂಭೂತರಾದ ಮಹಾಪುರುಷರ ಚರಿತ್ರದ ಸ್ಮರಣವು ಪ್ರಕೃತಕಾಲದಲ್ಲಿ ಅವಶ್ಯಕವೂ ಪುಣ್ಯಪ್ರದವೂ ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ. ಇಂತಹ ಸುಬುದ್ಧಿಯನ್ನು ಇಷ್ಟುದಿನಗಳ ಮೇಲಾದರೂ ಕರ್ಣಾಟಕರಿಗೆ ಅನುಗ್ರಹಿಸಿದುದಕ್ಕಾಗಿ ದೇವದೇವನನ್ನು ಎಷ್ಟು ಕೊಂಡಾಡಿದರೂ ಸ್ವಲ್ಪವೇ!

# ಗತಿಸಿದ

## ಶ್ರೀಯುತ ದೇಶಬಂಧು ಚಿತ್ತರಂಜನ ದಾಸರವರು.



"ಬೆಣ್ಣೆ ಬರುವಾಗ ಮಡಕೆಯೊಡೆಯಿತು" ಎಂಬುದು ನಮ್ಮಲ್ಲಿ ವಿಶೇಷ ರೂಢಿಯಾದೊಂದುಗಾದೆ. ಇದರಂತೆಯೇ "ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ"ವೆನ್ನುವುದೂ ಕೂಡ. ಹೊತ್ತು ಹೋಗದವರ್ಯಾರೋ ಗಾದೆಗಳನ್ನು ಮಾಡಿದರೆಂದು ನಾವು ಹೇಳಿಕೊಳ್ಳುವೆವು. ದೀರ್ಘವಾಗಿ ಯೋಚಿಸಿ ನೋಡಿದರೆ ಪ್ರತಿಯೊಂದು ಗಾದೆಯೂ ಸದರ್ಥಗರ್ಭಿತವಾದುದಾಗಿರುವುದು. ದೇಶಬಂಧುಗಳ ಅಕಾಲಮರಣವು ನಮಗೀಗಾದೆಯ ನೆನಪನ್ನುಂಟುಮಾಡುತ್ತದೆ. ನಮ್ಮ ಪುಣ್ಯಭೂಮಿಯಾದ ಆರ್ಯಾವರ್ತದ ಕಷ್ಟವು ನೀಗಿ ದೇಶಕ್ಕೆ ಸುಖಸಾಮ್ರಾಜ್ಯವೊದಗುವ ಕಾಲದಲ್ಲುಂಟಾದ ಈ ವಂಗರಾಜನ ಮರಣವು ಪ್ರತಿಯೊಬ್ಬ ಭಾರತವಾಸಿಯ ಹೃದಯವನ್ನೂ ತಲ್ಲಣಿಸುವಂತೆ ಮಾಡಿತೆಂದರೂ ಅತಿಶಯೋಕ್ತಿಯಾಗಲಾರದು.



ದೇಶಬಂಧು ಚಿತ್ತರಂಜನದಾಸರವರು ಪರಲೋಕಗತರಾದರು. ಇಂತಹ ಮಹಾತ್ಮರ ಮರಣದಿಂದ ಭರತಖಂಡದ ಒಂದಮೂಲ್ಯರತ್ನವು ಮಾಯವಾಯಿತು. ಬಂಗಾಳದ ಪ್ರಜ್ವಲ ಸೂರ್ಯನು ಅಸ್ತಂಗತನಾದನು. ಈ ಕರ್ಮಯೋಗಿಯ ಮರಣದಿಂದ ಹಿಂದೂಗಳು ಅತಿ ನಷ್ಟಹೊಂದಿದರು. ಅರ್ಜುನನಂತಹ

ಸ್ವತಂತ್ರವೀರನ! ಸ್ವಾತಂತ್ರ್ಯಪ್ರಿಯನ ಮರಣದಿಂದ ಭಾರತನಮಾತೆಯು ಶೋಕಸಾಗರದಲ್ಲಿ ಮುಳುಗಿರುವಳು. ಕರ್ಣನಂತಹ ದಾನಶೂರನ ಮರಣದಿಂದ ಪ್ರಪಂಚಕ್ಕೇ ನಷ್ಟ. ಭರತಖಂಡವನ್ನಾವರಿಸಿಗುವ ದುರಾದೃಷ್ಟವನ್ನು ಎಷ್ಟೆಂದು ಹೇಳಲಿ! ದೇಶಬಂಧುವಿನ ಮರಣವನ್ನು ಕುರಿತು ಯಾವ ಮಾತುಗಳಿಂದ ಬರೆಯಲಿ! ಈ ಮಹಾತ್ಮನ ಮರಣವಾರ್ತೆಯು ಅಖಿಲ ಭರತಖಂಡದಲ್ಲೆಲ್ಲಾ ಸಿಡಿಲು ಬಿದ್ದಂತಾಗಿರುವುದು. ಕೆಲವು ದಿನಗಳ ಹಿಂದೆತಾನೇ ಮಹಾತ್ಮಾ ಗಾಂಧಿಯವರೊಡನೆ ಡಾರ್ಜಿಲಿಂಗಿನಲ್ಲಿ ಪ್ರಕೃತ ರಾಜಕೀಯ ವಿಷಯವಾಗಿ ಚರ್ಚಿಸುತ್ತಿರುವರೆಂಬ ವದಂತಿಯುಂಟಾಯಿತು. ಕೆಲವು ದಿನಗಳ ಹಿಂದೆತಾನೇ ಸಮಸ್ತ ಭಾರತವರ್ಷವನ್ನೆಲ್ಲಾ ಖಾದಿಯು ಮಯವಾಗಿ ಮಾಡಬೇಕೆಂದು ಗಾಂಧಿಯವರೊಡನೆ ತೀರ್ಮಾನ ಮಾಡಿಕೊಂಡರು. ಈತನ ಮರಣಕ್ಕೆ ಎರಡು ದಿನಗಳ ಮುಂಚೆ ಪ್ರಜೆಗಳೂ ಈತನೂ ವಂಗನಾಡಿನಲ್ಲಿ ದ್ವಿಮುಖರಾಜ್ಯಭಾರಕ್ರಮವು ಸತ್ತಿತೆಂಬ ವರ್ತಮಾನವನ್ನು ಅತ್ಯಾನಂದದಿಂದ ಕೇಳಿದರು. ಈ ಕರ್ಣಾಮೃತವಾದ ವಾರ್ತೆಯೇ ದಾಸರಿಗೆ ವಿಷಮಯವಾಯಿತೇ! ಈ ದ್ವಿಮುಖ ರಾಜ್ಯಾಡಳಿತವು ನಾಶವಾಗಲು ತನುಮನಧನಗಳನ್ನು ಧಾರೆಯೆರೆದ ಮಹಾಪುರುಷನು ತನ್ನ ಹಟವು ಗೆದ್ದ ವರ್ತಮಾನವನ್ನರಿತು ಆನಂದದಿಂದ ಹಿಗ್ಗಿ ಬಹುಕಾಲ ಜೀವಿಸಿರಬಾರದಾಗಿತ್ತೇ! "ಬೆಣ್ಣೆ ಬರುವಾಗ ಮಡಕೆ ಹೊಡೆಯಿತು" ಎನ್ನುವ ಗಾದೆಯು ನಮ್ಮ ವಿಷಯದಲ್ಲೇ ಫಲಿಸಬೇಕಾಯಿತೇ!

ದೇಶಬಂಧುದಾಸರವರು ಭಾರತಮಾತೆಯ ಪುತ್ರರಲ್ಲಗ್ರಗಣ್ಯರು. ಇವರು 1870 ನೆಯ ಇಸವಿ ನವಂಬರ್ ತಿಂಗಳಲ್ಲಿ ಕಲ್ಕತ್ತಾ ಪಟ್ಟಣದಲ್ಲಿ ಒಂದು ಗೌರವ ಕುಟುಂಬದಲ್ಲಿ ಜನ್ಮವೆತ್ತಿದರು. ಕಲ್ಕತ್ತೆಯಲ್ಲಿನ ವಿಶ್ವವಿದ್ಯಾನಿಲಯದ ಪರೀಕ್ಷೆಗಳಲ್ಲೆಲ್ಲಾ ಉತ್ತೀರ್ಣರಾಗಿ ಇಂಗ್ಲೆಂಡಿಗೆ ಹೋಗಿ ನ್ಯಾಯಪರೀಕ್ಷೆಯಲ್ಲುತ್ತೀರ್ಣರಾಗಿ ಅಲ್ಲಿನವರಿಂದ ಗೌರವಿಸಲ್ಪಟ್ಟು ಮರಳಿ ಹಿಂತಿರುಗಿದರು. ಆಗ ಬಂಗಾಳವು ವಿಭಾಗಿಸಲ್ಪಟ್ಟು ಮಾಣಿಕತೊಲಾ ಬಾಂಬ್ ಕೇಸಿನ ವಿಚಾರಣೆಯಲ್ಲಿ ಪ್ರಸಿದ್ಧ ದೇಶಭಕ್ತರಾದ ಬಾಬು ಅರವಿಂದಘೋಷರಮೇಲೆ ಅಪರಾಧವು ಆರೋಪಿಸಲ್ಪಟ್ಟಾಗ ದೇಶಬಂಧುವು ಅತಿವಿಚಕ್ಷಣೆಯಿಂದ ವಾದಿಸಿ ಒಂದುಕಾಸು ಕೂಡ ತೆಗೆದುಕೊಳ್ಳದೆ ವಕಾಲತ್ತು ನಡೆಸಿ ಅರವಿಂದರು ನಿರಪರಾಧಿಯೆಂಬುದನ್ನು ಸ್ಥಿರಪಡಿಸಿದರು. ಅಂದಿನಿಂದ ಈ ಮಹಾಪುರುಷರ ಕೀರ್ತಿಲತೆಯು ದಶದಿಕ್ಕುಗಳಲ್ಲಿಯೂ ವ್ಯಾಪಿಸಲಾರಂಭಿಸಿತು. ವಕೀಲುವೃತ್ತಿಯಲ್ಲಿ ಲಕ್ಷಗಟ್ಟಲೆ ಸಂಪಾದಿಸಿದರು. ಇಷ್ಟು ಸಂಪಾದಿಸಿಯೂ ಕೇವಲ ದರಿದ್ರರಂತೆ ಕಾಲ ಕಳೆಯುತ್ತಿದ್ದರು. ತನ್ನ ಸ್ವಂತಕ್ಕಾಗಿ ಒಂದು ಬಿಡಿಕಾಸು ಕೂಡ ಖರ್ಚುಮಾಡದೆ ಸರ್ವವನ್ನೂ ಪರಾರ್ಥಕ್ಕಾಗಿ ಉಪಯೋಗಿಸಿದ ಮಹಾಪುರುಷರು. ಬಂಗಾಳದ ರಾಜಕೀಯ ಚಳವಳಿಯಲ್ಲಿ ಸಹಾಯಮಾಡಿದವರೆಲ್ಲರಿಗೂ ಉದಾರವಾಗಿ ಸಹಾಯ ಮಾಡಿದರು

"ದೇಶಭಕ್ತಿಯ ಮಹಾಕವಿ" "ಸ್ವರಾಜ್ಯಭಕ್ತ" "ಮಾನವಕೋಟಿಯ ಭೃತ್ಯ" ಎಂದು ಶ್ರೀಯುತ ಅರವಿಂದಘೋಷರನ್ನು ಇವರು ವರ್ಣಿಸಿದುದೆಲ್ಲವೂ ಇವರಿಗೆ ಅನ್ವಯಿಸುವುದು.

ದೇಶಬಂಧುವು ಈ ರೀತಿ ಹೇರಳವಾಗಿ ದ್ರವ್ಯಸಂಪಾದನೆ ಮಾಡುತ್ತಿದ್ದ ಕಾಲದಲ್ಲಿ ಅವರ ಘನತೆಯನ್ನು ಜಗತ್ತಿಗೆ ವಿಶದಪಡಿಸುವ ಸಂದರ್ಭವು ಪ್ರಾಪ್ತವಾಯಿತು. ಆ ವಿಷಯವನ್ನು ಎಂದೆಂದಿಗೂ ಭರತಖಂಡವು ಮರೆಯಲಾರದು. ಇವರ ತಂದೆಯು ಧರ್ಮಬುದ್ಧಿಯುಳ್ಳವರಾದ್ದರಿಂದ ತಮ್ಮ ಅಪಾರವಾದ ಆಸ್ತಿಯನ್ನೆಲ್ಲಾ ಖರ್ಚುಮಾಡಿ ಕೊನೆಗೆ ಸಾಲಮಾಡಿ ತೀರಿಸಲಾರದೆ ಪಾಪರ್‌ಚೀಟಿಯನ್ನು ಪಡೆದು ಕೆಲವು ದಿನಗಳ ನಂತರ ಮಡಿದರು. ಪಿತೃ ಋಣವನ್ನು ತೀರಿಸುವುದೇ ತನ್ನ ಪ್ರಥಮ ಕರ್ತವ್ಯವೆಂದರಿತ ದೇಶಬಂಧುವು ಸಾಲಪತ್ರಗಳ ವಾಯಿದೆಯು ಅತಿಕ್ರಮಿಸಿದ್ದರೂ ಬಿಡದೆ ಬಡ್ಡಿಗೆ ಕೂಡ ಬಡ್ಡಿಯನು ತೀರಿಸಿ ನ್ಯಾಯ್ಯಸ್ಥಾನದಲ್ಲಿ ತಂದೆಯ ಹೆಸರಿನಲ್ಲಿದ್ದ ಸಾಲದ ಹೊರೆಯನ್ನು ತೀರಿಸಿದರು. ಆಗಿದ್ದ ನ್ಯಾಯಾಧಿಪತಿಯು ಪುತ್ರನು ಸಂಪಾದಿಸಿ ತಂದೆಯ ಪಾಪರ್ ಚೀಟಿಯನ್ನು ಕೋರ್ಟಿನ ಮೂಲಕ ಪುನಃ ಪಡೆದುದನ್ನು ತಾನು ನೋಡಿದುದು ಇದೇ ಮೊದಲನೆಯಾವೃತ್ತಿಯೆಂದು ಹೇಳಿದರು. ಇಂತಹ ಮಹಾತ್ಮರನ್ನು ಈ ಕಾಲದಲ್ಲಿ ಕಾಣುವುದು ಬಹಳ ಅಪರೂಪವು. ದೇಶಬಂಧುವು ಪ್ರಸಿದ್ಧವಾದ ಕವಿತಾಶಕ್ತಿಯನ್ನು ಪಡೆದಿದ್ದರು. " ಸಂಗೀತಸಾಗರ " ವೆನ್ನುವ ಗ್ರಂಥವು ಅತ್ಯಮೂಲ್ಯವಾಗಿರುವುದು. ನ್ಯಾಯವಾದಿಯ ಉದ್ಯೋಗವನ್ನೂ, ರಾಜಕೀಯ ವಿಷಯವನ್ನೂ ಒಂದುಕಡೆ ಕಟ್ಟಿಟ್ಟು ಕವಿತ್ವಮಾಡುವುದರಲ್ಲಿಯೇ ತಮ್ಮ ಕಾಲವೆಲ್ಲವನ್ನೂ ಕಳೆದಿದ್ದರೆ ಈತನೂ ಕೂಡ ಶ್ರೀ ರವೀಂದ್ರನಾಥಟಾಗೋರರಂತೆ ಪ್ರಸಿದ್ಧ ಕವಿಯಾಗುವುದರಲ್ಲಿ ಯಾವ ಸಂಶಯವೂ ಇರಲಿಲ್ಲ. ಆದರೆ ಭಾರತಮಾತೆಯ ಬಂಧನ ಯುದ್ಧವು ಇವರನ್ನು ಕರೆಯಲು ತನಗಿದ್ದ ಕಾರ್ಯಗೌರವಗಳನ್ನೆಲ್ಲಾ ಕಟ್ಟಿಟ್ಟು ದೇಶೋದ್ಧಾರಕ್ಕೆ ಪಾಡುಪಡಲು ಸೊಂಟಕಟ್ಟಿ ನಿಂತರು. ಈ ರೀತಿಯಾಗಿ ಸ್ವರಾಜ್ಯಕ್ಕಾಗಿ ಹೋರಾಡುತ್ತಿರುವ ಕಾಲದಲ್ಲಿ ಮಹಾತ್ಮಾ ಗಾಂಧಿಯವರ ಅಸಹಕಾರ ಚಳವಳಿಯು ಪ್ರಾರಂಭವಾಯಿತು. ದೇಶಬಂಧುವಿಗೆ ಯಾವಾಗಲೂ ಸನ್ಯಾಸದಲ್ಲಿಯೂ, ತ್ಯಾಗಗಳಲ್ಲಿಯೂ ಬಹಳ ಆಸಕ್ತಿಯಿದ್ದಿತು. ಮಹಾತ್ಮಜೀಯವರ ಚಳವಳಿಯು ಇವರಿಷ್ಟಕ್ಕೆ ತಕ್ಕಂತೆ ಇದ್ದಿತು. ಈ ಚಳವಳಿಯು ಕೇವಲ ದರಿದ್ರರನ್ನು ಮಾತ್ರ ತನ್ನ ಕಡೆಗೆ ಎಳೆಯಲಿಲ್ಲ. ಆ ರಾಜಗೃಹಗಳಂತಹ ಸೌಧಗಳಲ್ಲಿ ವಾಸಮಾಡುತ್ತಿದ್ದ ರಾಜಸಮಾನರಾದ ಭಾರತೀಯರನ್ನೂ, ಹಣದರಾಶಿಯಮೇಲೆ ಹೊರಳಾಡುತ್ತಿದ್ದ ಹಿಂದೂಗಳನ್ನೂ ಮಹಾತ್ಮಜೀಯವರ ಈ ಚಳವಳಿಯು ತನ್ನ ಕಡೆಗಾಕರ್ಷಿಸಿತು. ತ್ಯಾಗಕ್ಕೂ ದೇಶಸೇವೆಗೂ ತಕ್ಕ ಸಾಧನವು ಈ ತ್ಯಾಗವೇ!

ಎಂಬುದನ್ನು ದೇಶಬಂಧುವು ಅರಿತು 1920 ನೆಯ ಇಸವಿಯಲ್ಲಿ ಕಲ್ಕತ್ತೆಯಲ್ಲಿ ನಡೆದ ರಾಷ್ಟ್ರೀಯ ಮಹಾಸಭೆಯಲ್ಲಿ ಮಹಾತ್ಮಜೀಯವರಿಗೂ ಇವರಿಗೂ ಕೆಲವು ವಿಷಯಗಳಲ್ಲಿ ಭಿನ್ನವಾದವುಂಟಾದರೂ ನಾಗಪುರದಲ್ಲಿ ನಡೆದ ಸಭೆಯಲ್ಲಿ ತಾವೇ ಅಸಹಕಾರ ಚಳವಳಿಯನ್ನಾ ಮೋದಿಸಿ ಅದನ್ನು ಪ್ರಚಾರಗೊಳಿಸಲು ಬದ್ಧಕಂಕಣರಾದರು.

1921 ನೆಯ ಇಸವಿಯೆಲ್ಲಾ ಈ ಅಸಹಕಾರ ಚಳವಳಿಯು ಅಭಿವೃದ್ಧಿಯಾಗಿ ದೇಶದೇಶವೆಲ್ಲವೂ ಹರಡುವ ವಿಷಯದಲ್ಲಿಯೇ ಪೂರ್ಣಶ್ರದ್ಧೆ ವಹಿಸಿದ್ದರು. ಪ್ರತಿದಿವಸವೂ ವಿದ್ಯಾರ್ಥಿಗಳಿಗೆ ಕಳುಹಿಸುತ್ತಿದ್ದ ಸಂದೇಶಗಳಿಂದ ವಂಗ ವಿದ್ಯಾರ್ಥಿಗಳ ಮನವೆಲ್ಲವೂ ಆಕರ್ಷಿಸಲ್ಪಟ್ಟಿತು. ಸಾವಿರಗಟ್ಟಲೆ ವಿದ್ಯಾರ್ಥಿಗಳು ಕಲಾಶಾಲೆಗಳನ್ನು ಬಿಟ್ಟು ದೇಶಸೇವಕರಾಗಲು ಮುಂದೆ ಬಂದರು. ಅನೇಕ ತರುಣ ವಕೀಲರು ವಕೀಲಿಯನ್ನು ಬಿಟ್ಟು ದೇಶಬಂಧುವಿನ ಹಿಂಬಾಲಕರಾದರು. ಈರೀತಿಯಲ್ಲಿ ದೇಶಬಂಧುವು ವಂಗರಾಜ್ಯದಲ್ಲೆಲ್ಲಾ ಸ್ವರಾಜ್ಯ ಚಳವಳಿಯನ್ನು ಹಬ್ಬಿಸಿ ದೇಶಾಭಿಮಾನದ ಕಿಚ್ಚು ಹತ್ತಿ ಉರಿಯುತ್ತಿರುವಾಗ 1921 ನೆಯ ಇಸವಿಯಲ್ಲಿ ಅಹಮದಾಬಾದಿನಲ್ಲಿ ನಡೆದ ರಾಷ್ಟ್ರೀಯ ಮಹಾಸಭೆಗೆ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಆ ಕಾಲದಲ್ಲಿ ಈ ವಿದ್ಯಾರ್ಥಿಗಳ ಗುಂಪು ಸ್ವಲ್ಪ ಬಲಹೀನವಾಗುವಂತಿತ್ತು. 1922 ನೆಯ ಇಸವಿಯಲ್ಲಿ ವೇಲ್ಸಿನ ಯುವರಾಜರ ಆಗಮನವನ್ನು ಬಹಿಷ್ಕರಿಸಬೇಕೆನ್ನುವ ಚಳವಳಿವು ರಾಜ್ಯದಲ್ಲೆಲ್ಲಾ ಹಬ್ಬಿತು. ಸ್ವಯಂಸೇವಕದಳದವರಿಂದ ಈ ಬಹಿಷ್ಕಾರವು ದೇಶಬಂಧುವಿನ ಮೂಲಕ ಹೇಗೂ ನಡದೇತೀರುವುದೆನ್ನುವ ಭಯದಿಂದ ಸರ್ಕಾರದವರು ವಿದ್ಯಾರ್ಥಿಗಳೂ, ಸ್ವಯಂಸೇವಕರೂ ಎಲ್ಲರೂ ''ಅರಾಜಕ ಗುಂಪಿನವರು'' ಎಂದು ಪ್ರಸಿದ್ಧಪಡಿಸಲು ಶ್ರೀಯುತ ದಾಸರು ಹೆಚ್ಚು ವಿದ್ಯಾರ್ಥಿಗಳನ್ನು ಈ ಸೇವಕ ಗುಂಪಿಗೆ ಬಂದು ಸೇರುವಂತೆ ಪ್ರಾರ್ಥಿಸಿದರು. ಇದನ್ನರಿತ ಸರ್ಕಾರದವರು ರಾಷ್ಟ್ರೀಯ ಸಭೆಯು ನಡೆಯುವುದಕ್ಕೆ ಕೆಲವು ದಿನಗಳ ಹಿಂದೆ ಇವರನ್ನು ಖೈದು ಮಾಡಿ ಮೂರು ತಿಂಗಳವರೆಗೂ ಯಾವ ವಿಚಾರಣೆಯನ್ನೂ ಮಾಡದೆ ಕಾಲಹರಣ ಮಾಡಿ ಕೊನೆಗೆ 6 ತಿಂಗಳ ಶಿಕ್ಷೆಯನ್ನು ವಿಧಿಸಿದರು. ಕೆಲವು ದಿನಗಳಾದನಂತರ ಮಹಾತ್ಮಾ ಗಾಂಧಿಯವರೂ ಖೈದುಮಾಡಲ್ಪಟ್ಟರು. ದೇಶಭಕ್ತರಾದ ಅನೇಕರು ಸರ್ಕಾರದವರ ಆಜ್ಞೆ ಮೀರಿ ಲಕ್ಷಗಟ್ಟಲೆ ದಿನವೂ ಕಾರಾಗೃಹಕ್ಕೆ ತೆರಳುತ್ತಿದ್ದರು. ಇಷ್ಟರ ಮಧ್ಯೆ ಎಷ್ಟೋ ವಿಷಯಗಳು ನಡೆದವು. ದೇಶಬಂಧುವೂ ಬಂಧಮುಕ್ತರಾದರು. ಇದಾದನಂತರ 1922 ನೆಯ ಇಸವಿಯಲ್ಲಿ ಗಯೆಯಲ್ಲಿ ನಡೆದ ರಾಷ್ಟ್ರೀಯಸಭೆಯ ಅಧ್ಯಕ್ಷಸ್ಥಾನವನ್ನು ವಹಿಸಿ ತಾವು ನೂತನವಾಗಿ ಸ್ಥಾಪಿಸಬೇಕೆಂದಿದ್ದ " ಸ್ವರಾಜ್ಯ ಸಭೆಯ " ಠರಾವುಗಳನ್ನು ಸಭೆಯು ಮುಂದಿಟ್ಟು ಸಕಲರ ಅಂಗೀಕಾರವನ್ನೂ ಪಡೆದು ಆ ಸಭೆಯ ಅಧ್ಯಕ್ಷರಾಗಿ ದಿವಾರಾತ್ರಿಯೂ ದುಡಿದರು. ಸ್ವರಾಜ್ಯಪಂಗಡದವರು ನ್ಯಾಯವಿಧಾಯಕಸಭೆಯಲ್ಲಿ ಮಾಡಿರುವ ಕಾರ್ಯಗಳನ್ನು ಇಲ್ಲಿ ವಿವರಿಸಬೇಕಾಗಿಲ್ಲ. ಬಂಗಾಳ

ವನ್ನು ಇಬ್ಭಾಗ ಮಾಡಿ ದ್ವಿಮುಖ ರಾಜ್ಯಭಾರ ಮಾಡುವುದನ್ನು ಸಂಪೂರ್ಣವಾಗಿ ನಿಲ್ಲಿಸಿದರು. ಬಂಗಾಳದ ದ್ವಿಮುಖ ರಾಜ್ಯಭಾರವು ಸಂಪೂರ್ಣವಾಗಿ ನಾಶವಾದ ವಿಷಯವು ಮರಣಕ್ಕೆ ಮೊದಲನೆಯ ದಿನ ತಾನೇ ತಿಳಿಯಿತು. ಇದರ ಪೂರ್ಣ ಗೌರವವೂ ಶ್ರೀಯುತ ದಾಸರನ್ನೇ ಸೇರಬೇಕಾಗಿರುವುದು.

1924 ನೆಯ ಇಸವಿಯಲ್ಲಿ ಬೆಳಗಾಂ ರಾಷ್ಟ್ರೀಯ ಸಭೆಯಲ್ಲಿ ಮಹಾತ್ಮಜೀಯವರೊಡನೆ ಸೇರಿ ಕೆಲಸಮಾಡಿ ಅವರ ಠರಾವುಗಳನ್ನೆಲ್ಲಾ ಅನೋದಿಸಿ ಕಾಂಗ್ರೆಸ್ಸಿನ ಸದಸ್ಯರು ನಾಲ್ಕಾಣೆ ಕೊಡುವುದನ್ನು ಬಿಟ್ಟು ನೂಲು ನೂತುಕೊಡಬೇಕೆನ್ನುವ ಠರಾವನ್ನು ಪೂರ್ಣಮನಸ್ಸಿನಿಂದಾಮೋದಿಸಿದ್ದಲ್ಲದೆ ತಾವೂ ತಮ್ಮ ಮನೆಯವರೂ ನೂಲುವುದಾಗಿ ತೀರ್ಮಾನಮಾಡಿದರು; ಆದರೆ ಬೆಳಗಾಂನಿಂದ ಹಿಂತಿರುಗಿದ್ದು ಮೊದಲು ಇವರು ಆರೋಗ್ಯವಾಗಿರಲೇ ಇಲ್ಲ. ಹವಾ ಬದಲಾಯಿಸುವ ನಿಮಿತ್ತ ಪಾಟಲೀಪುರ (ಪಾಟ್ನಾ)ಕ್ಕೆ ಹೋಗಿ ಅಲ್ಲಿ ಕೆಲವು ದಿನಗಳಿದ್ದರು. ಈ ಮಧ್ಯೆ ಮಾರ್ಚಿ ತಿಂಗಳು 23 ನೆಯ ತಾರೀಖಿನಲ್ಲಿ ನಡೆದ ಬಂಗಾಳದ ನ್ಯಾಯವಿಧಾಯಕ ಸಭೆಗೆ ತನ್ನನ್ನು ಒಂದು ಆರಾಮಕುರ್ಚಿಯಲ್ಲಿ ಮಲಗಿಸಿ ಎತ್ತಿಕೊಂಡುಹೋಗುವಂತೆ ಹೇಳಿ ಅಲ್ಲಿ ಹಾಜರಿದ್ದು ಮಂತ್ರಿಗಳ ಸಂಬಳವನ್ನು ಬಂಗಾಳದ ನ್ಯಾಯವಿಧಾಯಕಸಭೆಯವರು ಮೂರನೆಯಾವೃತ್ತಿ ನಿರಾಕರಿಸುವಂತೆ ಮಾಡಿದರು. ಇಂತಹ ಗುಂಡಿಗೆಯು ಯಾವ ಭಾರತೀಯನಿಗಿರುವುದು? ತಾನು ಹಿಡಿದಕಾರ್ಯವನ್ನು ಸಾಧಿಸಿ ತೀರಬೇಕೆನ್ನುವ ದೃಢನಿಶ್ಚಯದಿಂದ ತನ್ನ ದೇಹಾಲಸ್ಯವನ್ನೂ ಲಕ್ಷ್ಯಮಾಡದೆ ಒದ್ದಾಡಿದರು. ಮಾರ್ಚಿ ತಿಂಗಳಲ್ಲಿ ಈತನು ಭಾರತೀಯರಿಗೆ ಕಳುಹಿಸಿದ ಸಂದೇಶವು ಎಲ್ಲರಿಗೂ ತಿಳಿದಿರುವುದು. ಕಳೆದ ಏಪ್ರಿಲ್ ತಿಂಗಳಲ್ಲಿ ಎರಡನೆಯ ಸಾರಿ ಕಲ್ಕತ್ತೆಯ ನಗರಪರಿಪಾಲನಸಭೆ (Municipality)ಯ ಅಧ್ಯಕ್ಷರಾಗಿ ಚುನಾಯಿಸಲ್ಪಟ್ಟರು. ಅನಂತರ ಫರೀದ್‌ಪುರದಲ್ಲಿ ನಡೆದ ಬಂಗಾಳದ ಪ್ರಾಂತಿಕ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ಮಾಡಿದ ಭಾಷಣವು ಭಾರತೀಯರಲ್ಲಿ ಒಂದುವಿಧವಾದ ನೂತನೋತ್ಸಾಹವನ್ನುಂಟುಮಾಡಿತು. ಪುನಃ ದೇಹಾಲಸ್ಯವು ಹೆಚ್ಚಿ ತಮ್ಮಪತ್ನಿಯವರೊಡನೆ ಡಾರ್ಜಿಲಿಂಗಿಗೆ ಹೋಗಿದ್ದರು. ಮಹಾತ್ಮಜೀಯವರು ಇವರ ಅತಿಥಿಗಳಾಗಿದ್ದು ಒಂದು ವಾರವೂ ಪ್ರಕೃತ ರಾಜಕೀಯಸ್ಥಿತಿಯ ವಿಷಯವಾಗಿ ದೀರ್ಘವಾಗಿ ಯೋಚಿಸಿದರು. ಸ್ವರಾಜ್ಯಸಾಧನೆಗೆ ಮುಖ್ಯಾಯುಧವು ಚರಕವಾಗಿರಬೇಕೆಂದು ಮಹಾತ್ಮಾಜೀಯವರು ಹೇಳಿದ್ದನ್ನು ಮನಃಪೂರ್ವಕವಾಗಿ ಆಮೋದಿಸಿ ರಾಷ್ಟ್ರೀಯ ಸಭೆಗೆ ಮಿತವಾದಿಗಳೂ (Moderates) ಇತರರೂ ಸದಸ್ಯರಾಗಬಹುದೆಂಬ ಠರಾವನ್ನೊಪ್ಪಿಕೊಂಡು ಮಹಾತ್ಮಜೀಯವರೂ ತಾವೂ ಸೇರಿ ಭರತಖಂಡವಾಸಿಗಳಿಗೆಲ್ಲಾ ಒಂದು ಸಂದೇಶವನ್ನು ಕಳುಹಿಸಿದರು. ಈ ಮಧ್ಯೆ ಡಾಕ್ಟರ್ ಬೆಸಂಟರವರೂ ಇವರನ್ನು ಕಂಡು ಮಾತನಾಡಿ ಮುಂದಿನ ಕಾರ್ಯಕ್ರಮವನ್ನು ನಿರ್ಧರಿಸಿದರು.

ಬಂಗಾಳದ ಹಳ್ಳಿಗಳ ಪುನರುದ್ಧಾರಣಕ್ಕಾಗಿ ಈತನು ಪಟ್ಟಕಷ್ಟವು ಅಷ್ಟಿಷ್ಟಲ್ಲ. ದೇಶಬಂಧುವು ಪ್ರಸಿದ್ಧವಾದ ತ್ಯಾಗಮೂರ್ತಿಯು. ತಾನು ಕಷ್ಟಪಟ್ಟು ಸಂಪಾದಿಸಿದ ಸರ್ವಸ್ವವನ್ನೂ ದೇಶಕ್ಕಾಗಿ ಚೆಲ್ಲಿದರು. ಕೊನೆಗೆ ತಾವಿದ್ದ ರಾಜಗೃಹದಂತಹ ಸೌಧವನ್ನೂ ಕೂಡ ತೃಣವಾಗಿ ಭಾವಿಸಿ ಸರ್ವಸ್ವವನ್ನೂ ತ್ಯಜಿಸಿ ತ್ಯಾಗಿಯಾಗಿ ದೇಶಬಂಧನವನ್ನು ಬಿಡಿಸಲು ಹೊರಟರು. ಕಲಿಯುಗದ ಕರ್ಣನೆಂಬ ಹೆಸರೂ ದೃಢನಿಶ್ಚಯದಲ್ಲಿ ಭೀಷ್ಮನೆಂಬ ಹೆಸರೂ ಈ ಪುಣ್ಯಮೂರ್ತಿಗೆ ಸಲ್ಲುವುದು. ಕಲ್ಕತ್ತೆಯ ರಸ್ಸಾರೋಡಿನಲ್ಲಿರುವ 148 ನೇ ನಂಬರಿನ ಮನೆಯಲ್ಲಿ ಸಮೀಪದಲ್ಲಿ ತಾನಿಳಿದಿದ್ದಾಗ, ಇಷ್ಟೊಂದು ರಾಜಸುಖವನ್ನೂ ತ್ಯಜಿಸಿ ಭಗವಾನ್ ಬುದ್ಧದೇವನಂತೆ ನಿಸ್ವಾರ್ಥತ್ಯಾಗಿಯಾಗಿ ಹೊರಹೊರಟ ದೇಶಬಂಧುವನ್ನು ನೋಡಿದಾಗ ಉಕ್ಕಿಬರುವ ಕಣ್ಣೀರನ್ನಡಗಿಸುವುದು ತನ್ನಿಂದ ಸಾಧ್ಯವಾಗಲಿಲ್ಲವೆಂದು ಮಹಾತ್ಮಜೀಯವರು ಹೇಳಿದರು. ಅಂತಹ ತ್ಯಾಗಿಯು ತನ್ನ ಅಸಂಖ್ಯಾತರಾದ ಸಹಪಾಠಿಗಳನ್ನು ದುಃಖಸಾಗರದಲ್ಲಿ ಮುಳುಗಿಸಿ ಪರಲೋಕಗತರಾದರು. ಬಂಗಾಳದ ದ್ವಿಮುಖ ಸರ್ಕಾರವನ್ನು ನಿರ್ಮೂಲವಾಗಿ ಮುರಿಯಬೇಕೆಂದು ರಾತ್ರೀ ಹಗಲೂ ಒದ್ದಾಡಿದ ಮಹನೀಯರು ತಮ್ಮ ಸ್ವಾರ್ಥವು ನೆರವೇರಿದುದನ್ನು ಕಣ್ಣಿನಿಂದ ನೋಡದೆಹೋದರು. ಇಂತಹ ದೃಢನಿಶ್ಚಯವೂ ದೇಶಾಭಿಮಾನವೂ ಉಳ್ಳ ದೇಶಬಂಧುವು ಸ್ವತಂತ್ರರಾಜ್ಯದಲ್ಲಿದ್ದಿದ್ದರೆ ಪ್ರಥಮಮಂತ್ರಿಸ್ಥಾನವನ್ನು ಪಡೆದು ಸುಖವಾಗಿರುತ್ತಿದ್ದರು. ಈ ಭರತಖಂಡದಲ್ಲಿ ಬಂಧನವೂ, ಭಿಕ್ಷುಕವೇಷವೂ ಮಾತ್ರವೇ ಅವರಿಗೆ ಉಂಟಾಯಿತು. ಭಾರತಮಾತೆಯ ಅನುಗ್ರಹವಿಷ್ಟೇ! ತನ್ನ ಸರ್ವಸ್ವವನ್ನೂ ಕೊನೆಗೆ ತನ್ನ ಅಮೂಲ್ಯವಾದ ಜೀವವನ್ನೂ ಆತ್ಮವನ್ನೂ ಭರತಮಾತೆಯ ಅಡಿದಾವರೆಗಳಿಗೆ ಸಮರ್ಪಿಸಿದರು. ಇಂಥಾ ತ್ಯಾಗಿಯು ಈ ಕಾಲದಲ್ಲಿ ಬಹಳ ಅಪರೂಪವೆಂದೇ ಹೇಳಬೇಕಾಗಿ ಇವರ ರಾಜಕೀಯ ತತ್ವಗಳನ್ನು ಕೈಕೊಳ್ಳಲು ಧೈರ್ಯವಿಲ್ಲದ ಮಹನೀಯರು ಇವರ ತ್ಯಾಗಗುಣವನ್ನೂ ದೇಶಾಭಿಮಾನವನ್ನೂ ಹಿಂಬಾಲಿಸಿದರೆ ಚಿತ್ತರಂಜನರು ಭರತಖಂಡಕ್ಕೆ ಮಾಡಿದ ಅಮೋಘವಾದ ಕೆಲಸವನ್ನು ಸ್ಮರಿಸಿದಂತಾಗುವುದು. ಇವರ ಅಕಾಲಮರಣದಿಂದ ಸಮಸ್ತ ಭಾರತವರ್ಷವೂ ಅನೇಕ ಪಾಶ್ಚಾತ್ಯರೂ ಕಣ್ಣೀರು ಸುರಿಸುತ್ತಿರುವರು. ಹಿಂದೂ ಮುಸಲ್ಮಾನರ ಐಕ್ಯಮತ್ಯಕ್ಕಾಗಿ ಬಹಳ ಕಷ್ಟಪಟ್ಟರು. ಈ ಕಾರ್ಯನಿರ್ವಹಣಕ್ಕೆ ಇವರಷ್ಟು ಶಕ್ತಿವಂತರು ಮತ್ಯಾರೂ ಇರಲಿಲ್ಲ. ಬಂಗಾಳಕ್ಕೆ ಲಾರ್ಡ್ ಲಿಟ್ಟನ್ ಪ್ರಭುಗಳು ಹೆಸರಿಗೆ ಮಾತ್ರ ಅಧಿಪತಿಯಾಗಿದ್ದರೂ ದೇಶಬಂಧುಗಳು ಅನಭಿಷಿಕ್ತ ವಂಗಚಕ್ರವರ್ತಿಯಾಗಿದ್ದರೆಂದು ಅನೇಕ ಮುಂದಾಳುಗಳು ಸೂಚಿಸಿರುವರು. ಇವರ ಉಜ್ವಲವಾದ ದೇಶಭಕ್ತಿಯೇ ಇವರಿಗೆ "ದೇಶಬಂಧು" ಎನ್ನುವ ಬಿರುದನ್ನು ಸಂಪಾದಿಸಿಕೊಟ್ಟಿತು. ಮರಣಕಾಲದಲ್ಲಿಯೂ ಕೂಡ ತಾವು ಪ್ರಾರಂಭಿಸಿರುವ ಕಾರ್ಯಕ್ರಮಗಳನ್ನು ನೆರವೇರಿಸಬೇಕೆಂಬ ಸಂದೇಶವನ್ನೇ ಕೊಟ್ಟುಹೋದರು. ಈಗ ನಮ್ಮ

ಕರ್ತವ್ಯವೇನೆಂದರೆ, ಅವರು ಪ್ರಾರಂಭಿಸಿರುವ ಕೆಲಸವನ್ನು ಅಖಿಲ ಭಾರತೀಯರೂ ಒಂದುಗೂಡಿ ನಡೆಸಬೇಕಾದುದೇ. ಅವರ ಮರಣವು ನಮ್ಮ ಭರತಮಾತೆಯ ದೌರ್ಭಾಗ್ಯದಿಂದಾದುದು. ಅದನ್ನು ಕುರಿತು ಚಿಂತಿಸುವುದನ್ನು ಬಿಟ್ಟು ಅವರ ಉಪದೇಶವನ್ನು ಗ್ರಹಿಸಿ ಅನುಸರಿಸಿ ನಡೆದರೆಮಾತ್ರ ಅವರ ಕಾರ್ಯಕ್ರಮವನ್ನು ನೆರವೇರಿಸುವೆನೆನ್ನುವ ದೃಢನಿಶ್ಚಯವನ್ನು ಮಾಡಿದರೆ ಮಾತ್ರ ಅವರ ಆತ್ಮವು ತೃಪ್ತಿ ಹೊಂದುವುದಲ್ಲದೆ, ದೊಡ್ಡದೊಡ್ಡ ಸಭೆಗಳೂ, ಸಂತಾಪಸೂಚಕವಾದ ತಂತೀವರ್ತಮಾನಗಳೂ, ದೊಡ್ಡದೊಡ್ಡ ಠರಾವುಗಳೂ, ದೊಡ್ಡದೊಡ್ಡ ಸೌಧನಿರ್ಮಾಣಗಳೂ ಅವರ ಆತ್ಮಕ್ಕೆಳ್ಳಷ್ಟೂ ತೃಪ್ತಿಯನ್ನುಂಟುಮಾಡಲಾರವು. ನಾವು ಅವರ ಪವಿತ್ರನಾಮದ ಸ್ಮಾರಕನಿರ್ಮಾಣಮಾಡಬೇಕಾದರೆ ಕಾಯಾ ವಾಚಾ ಮನಸಾ ಅವರನ್ನೂ ಅವರ ಪಂಥವನ್ನನುಸರಿಸಬೇಕಲ್ಲದೆ ಮತ್ತಾವ ವಿಧವಾದ ಕಾರ್ಯದಿಂದಲೂ ಅವರ ಸ್ಮಾರಕವನ್ನು ಮಾಡಿದಹಾಗಾಗುವುದಿಲ್ಲ. ತನ್ನ ಸಹಪಾಠಿಗಳು, ತನ್ನ ಹಿಂಬಾಲಕರು, ತನ್ನ ದೇಶವಾಸಿಗಳು, ತನ್ನ ಪ್ರಜೆಗಳು ತಾನು ಪ್ರಾರಂಭಿಸಿದ ಕಾರ್ಯಕ್ರಮವನ್ನು ನಡೆಸಿ ಜೈಸುವರೆಂಬ ನಿಶ್ಚಯದಿಂದ ದೇಶಬಂಧುವಿನ ಆತ್ಮವು ಶಾಂತವಾಗಿ ನಿದ್ರಿಸಲಿ.

ಓಂ ಶಾಂತಿ ಶ್ಶಾಂತಿ ಶ್ಶಾಂತಿಃ.

# ಸುಲಭ ಚಿಕಿತ್ಸೆ.



ರೋಗ ಚಿಕಿತ್ಸೆಗಿಂತಲೂ ಆರೋಗ್ಯಜೀವನವೇ ಮೇಲು. ವಿಷಯಲೋಲುಪರಾಗಿ ದೇಹಾರೋಗ್ಯವನ್ನೂ ಬುದ್ಧಿಯನ್ನೂ ಕೆಡಿಸಿಕೊಳ್ಳುವುದಕ್ಕಿಂತ ಶಾಸ್ತ್ರೋಕ್ತ ಜೀವನದಿಂದ ಸುಖಿಯಾಗಿರುವವನು ಭಾಗ್ಯಶಾಲಿ. ಆದರೆ ಸುಖಜೀವನವೇ ಧರ್ಮಜೀವನವೆಂಬ ತಪ್ಪುತಿಳುವಳಿಕೆಯು ಹೆಚ್ಚಿನ ಜನತೆಗಿರುವುದರಿಂದ ಈ ಕಾಲದಲ್ಲಿ ಎಲ್ಲೆಲ್ಲಿಯೂ ರೋಗಿಗಳೂ ವೈದ್ಯರೂ ಕಂಡುಬರುತ್ತಾರೆ. ರೋಗಿಗಳೂ, ಆಸ್ಪತ್ರೆಗಳೂ, ದುಷ್ಟರೂ, ಕೋರ್ಟುಸೆರೆಮನೆಗಳೂ ಸಂಸ್ಕೃತಿಯ ಚಿನ್ಹೆಗಳಲ್ಲ. ಚೀನಾದೇಶದಲ್ಲಿ ಯಾವುದೋ ಒಂದು ಸರಕಾರದ ಆಸ್ಪತ್ರೆಯೊಳಗೆ ರೋಗಿಗಳ ವಾರ್ಷಿಕ ಸಂಖ್ಯೆಯು ಹೆಚ್ಚಾದರೆ ವೈದ್ಯನ ಸಂಬಳವನ್ನೇ ತಗ್ಗಿಸುತ್ತಾರೆ. ಇದರಿಂದ ವೈದ್ಯರು ರೋಗ ವಿಶೇಷವಾಗದಂತೆ ಕೊಡಬೇಕಾದ ಶಿಕ್ಷಣವನ್ನು ಜನರಿಗೆ ಕೊಟ್ಟು ಅಕಸ್ಮಾತ್ತಾಗಿ ಬಂದ ಸಾಧಾರಣರೋಗಗಳ ಚಿಕಿತ್ಸೆಯನ್ನು ತಾವೇ ಮಾಡುವಂತೆ ಉಪದೇಶಮಾಡುತ್ತಾರೆ. ಇದರಿಂದ ಜನರಿಗೆ ಆರೋಗ್ಯತತ್ವಸಾಧನೆಗಳೂ, ರೋಗ ಪ್ರತಿಬಂಧಕ ಕ್ರಮಗಳೂ, ಸಾಧಾರಣ ರೋಗಚಿಕಿತ್ಸೆಯೂ ತಿಳಿಸಬರುತ್ತಿವೆ.

ಆದರಿಂದ ಜರಾ, ವ್ಯಾಧಿ, ಮರಣಗಳು ಕಡಮೆಯಾಗುತ್ತ ಆ ದೇಶದ ಜನರು ಮುಂದಕ್ಕೆ ಬರುತ್ತಿದ್ದಾರೆ. ಸಾತ್ವಿಕ ವ್ಯವಹಾರಗಳನ್ನಿಟ್ಟುಕೊಂಡವರ ಮನಸ್ಸು ಮಾತ್ರ ಧಾರ್ಮಿಕ ಬುದ್ಧಿಯಿಂದ ಸಾತ್ವಿಕವಾಗಿಯೇ ಇರತಕ್ಕದ್ದು. ಮನಸ್ಸಿನಲ್ಲಿ ಸತ್ವಗುಣವೇ ವಿಶೇಷವಾಗಿದೆಯೆಂದು ಸಾಂಖ್ಯಯೋಗದ ಸಿದ್ಧಾಂತ. ಶರೀರೇಂದ್ರಿಯ ಸ್ಥಿತಿಗತಿಗಳು ಅದರಲ್ಲಿ ಪ್ರತಿಬಿಂಬಿಸುವುದರಿಂದ ಆ ಸತ್ವಕ್ಕೆ ಭಂಗಬರುತ್ತದೆ. ಇಂಥ ಪ್ರತಿಬಿಂಬವನ್ನು ನಿರೋಧಿಸುವುದೂ ಮತ್ತು ಅದಕ್ಕಾಗಿ ದೇಹವನ್ನು ಉತ್ತಮಸ್ಥಿತಿಯಲ್ಲಿಡಲಿಕ್ಕೆ ಬೇಕಾದ ಸಾಧನಗಳನ್ನು ಮಾಡುವುದೂ ರಾಜಯೋಗ ಹಠಯೋಗಗಳ ಕರ್ತವ್ಯವಾಗಿದೆ. "ಶರೀರಮಾದ್ಯಂಖಲುಧರ್ಮಸಾಧನಂ" ಎಂದು ಕಾಳಿದಾಸನ ವಚನವಿದೆ. ಆದುದರಿಂದ ಧರ್ಮಸಾಧನೆಯು ಸಾಂಗೋಪಾಂಗವಾಗಿ ನಡೆಯುವಂತೆ ತಿಳಿಯಬೇಕಾದ ವಿದ್ಯೆಯನ್ನು ಸಂಪಾದಿಸುವುದೂ ಧರ್ಮವೇ.

ಕೆಳಗೆ ಪುರುಷರೂ ಸ್ತ್ರೀಯರೂ ತಿಳಿದುಕೊಳ್ಳುವಂತೆ ಸಾಧಾರಣ ರೋಗಗಳ ಕಾರಣ, ನಿದಾನ,ಚಿಕಿತ್ಸೆಗಳು ವರ್ಣಿಸಲ್ಪಟ್ಟಿವೆ. ಅದರಲ್ಲಿರುವ ಎಲ್ಲ ಪದಾರ್ಥಗಳೂ ಹಳ್ಳಿಪಳ್ಳಿಗಳಲ್ಲಿಯೂ ಸುಲಭವಾಗಿ ದೊರೆಯುವಂಥವಾಗಿರುವುದರಿಂದ ಅವುಗಳನ್ನು ಸಿದ್ಧಪಡಿಸುವುದು ಎಲ್ಲರಿಗೂ ಅನುಕೂಲ. ಆಯುರ್ವೇದದಲ್ಲಿ ಉಪದ್ರವಿ ಮತ್ತು ನಿರುಪದ್ರವಿ ಎಂಬ ಎರಡು ವಿಧವಾದ ಔಷಧಿಗಳಿವೆ. ಈ "ಸುಲಭ ಚಿಕಿತ್ಸೆ"ಯಲ್ಲಿ ಬರೆದ ಎಲ್ಲ ಪದಾರ್ಥಗಳೂ ನಿರುಪದ್ರವಿಯಾಗಿವೆ. ಬಲ್ಲಿದನಾದ ವೈದ್ಯನು ಮಾಡುವ ನಿದಾನಗಳೆಲ್ಲವೂ ತಿಳಿಯುವುದು ಇವುಗಳಿಗೆ ಅನವಶ್ಯಕ. ಏಕೆಂದರೆ, ಆರೋಗ್ಯದಿಂದಿರುವ ಮನುಷ್ಯನು ಇವುಗಳಲ್ಲಿಯ ಯಾವದಾದರೊಂದು ಔಷಧವನ್ನು ಸೇವಿಸಿದರೆ ಅವನಿಗೇನೂ ಬಾಧೆಯಾಗಲಿಕ್ಕಿಲ್ಲ. ಬುದ್ಧಿಯು ಚುರುಕಾಗಿದ್ದರೆ ವಿಶೇಷ ಗುಣವಾಗುವುದು ನಿಶ್ಚಯವಲ್ಲದೆ ಅದು ಸ್ವಲ್ಪ ಕಡಮೆಯಾಗಿದ್ದವರು ಇವನ್ನುಪಯೋಗಿಸಿದರೆ ಅಪಾಯಬರುವ ಸಂಭವವೇನೂ ಇಲ್ಲ.

ಹತ್ತಿಪ್ಪತ್ತು ವರ್ಷಗಳ ಹಿಂದಿನವರೆಗೆ ಮುದುಕರಿಗೂ ಮುದುಕಿಯರಿಗೂ ಇವುಗಳಲ್ಲನೇಕ ಉಪಾಯಗಳು ತಿಳಿದಿದ್ದವು. ಇತ್ತೀಚೆಗೆ ಗೃಹಶಿಕ್ಷಣವು ಸಹ ಮುಳುಗಿ ಹಾಳಾಗಿ ಈಗಿನ ವೈದ್ಯರಲ್ಲಿದ್ದ ಸಾಧಾರಣ ಪುರುಷ ಸ್ತ್ರೀಯರಿಗೆ ವಿಷಯಲಾಂಪಟ್ಯವನ್ನುಬಿಟ್ಟನ್ಯೇನೂ ಗೊತ್ತಿಲ್ಲ. ಸ್ವಲ್ಪ ಕಾಯಿಲೆಯಾದೊಡನೆಯೇ ವೈದ್ಯನು ಮನೆಗೆ ಬರಲೇಬೇಕು. ಕಷ್ಟಪಟ್ಟು ದುಡಿದು ತಂದ ಹಣವನ್ನು ಹಾಳು ಮಾಡದೆ ಆರೋಗ್ಯವು ಲಭಿಸುವುದಿಲ್ಲ. ಮತ್ತು ಅನೇಕ ವೈದ್ಯರು ಸ್ಮಶಾನಗೋರಿಗಳ ಗುತ್ತೇದಾರರೆಂಬಂತೆ ಇರುತ್ತಾರೆ. ರೋಗಿಗಳಿಗೆ ಬೇನೆಯ ಕಾರಣವನ್ನು ವಿವರಿಸಿಹೇಳುವ ವೈದ್ಯರು ಬಹಳಕಡಮೆ. ನಮ್ಮ ಆಹಾರವ್ಯವಹಾರ ದೇಹಮನಸ್ಸಿನ ಸ್ಥಿತಿಗತಿಗಳಿಗೊಳಪಡದ ಎಷ್ಟೋ ಔಷಧಗಳು ಈಗ ಉಪಯೋಗಿಸಲ್ಪಡುತ್ತಿವೆ. ಈ ಅಜ್ಞಾನದಿಂದ ನಮ್ಮ ದೇಶ ಮತ್ತು ದೇಹಗಳು ರೋಗದಾಗರವಾಗಿವೆ.

ಸಾಧಾರಣ ಹದಿಮೂರು ವರ್ಷಗಳ ವೈದ್ಯಕೀಸೇವೆಯಿಂದ ನನ್ನ ಅನುಭವಕ್ಕೆ ಬಂದ ಈ ವಿಷಯುಗಳನ್ನಿಲ್ಲಿ ಪ್ರಕಟಿಸಿರುವ ಕಾರಣವೇನಿರಬಹುದೆಂದು ವಾಚಕರು ತಾವೇ ಊಹಿಸಿ ತಿಳಿಕೊಳ್ಳಬಹುದು. ಇದರಿಂದೆಲ್ಲರಿಗೂ ಹಿತವಾಗಬೇಕೆಂಬುದೊಂದೇ ನನ್ನ ಇಚ್ಛೆ. ಈ ಚಿಕಿತ್ಸೆಯನ್ನು ಕುರಿತು ಏನಾದರೂ ತಿಳಿದುಕೊಳ್ಳಬೇಕೆಂದು ಯಾರಾದರೂ ಇಚ್ಛಿಸಿದರೆ ನನಗೊಂದು ರಿಪ್ಲೈಕಾರ್ಡು ಬರೆದರೆ ನನ್ನ ಯೋಗ್ಯತಾನುಸಾರ ಅರಿವನ್ನು ಮಾಡಿಕೊಡುವೆನು. ಪರೋಪಕಾರಿಗಳಾದ ಪ್ರೇಮಮೂರ್ತಿಗಳು ಈ ಚಿಕಿತ್ಸೆಯ ಕ್ರಮವನ್ನು ಚನ್ನಾಗಿ ತಿಳಿದುಕೊಂಡರೆ ಹಳ್ಳಿ ಊರುಗಳಿಗೆ ಹೋಗಿ ಔಷಧ ಅರೈಕೆಯಿಲ್ಲದ ಅನೇಕಜನರಿಗುಪಕಾರಮಾಡಿ ಪುಣ್ಯವಂತರಾಗಬಹುದು. ಸತ್ಕಾರ್ಯದಿಂದ ಮರ್ಯಾದೆಯು ತಾನೇ ಬರುವುದು. ಅಂಥವರ ಉಪದೇಶವು ಸಮಾಜಕ್ಕೆ ಬೇಗನೆ ನಾಟುವುದು. ಆದಕಾರಣ ಲೋಕಸಂಗ್ರಹಮಾಡಿಕೊಂಡು ಜನರನ್ನು ಧರ್ಮಪ್ರವೃತ್ತರಾಗಿ ಮಾಡಲಿಕ್ಕೆ ಇದೊಂದು ಸುಲಭಸಾಧ್ಯ, ಅಗತ್ಯ ಮತ್ತು ಯೋಗ್ಯ ಉಪಾಯ.

ಈ ನನ್ನ ಸೇವೆಯಿಂದುಪಯೋಗ ಕಂಡುಬಂದರೆ ಮುಂದೆ ಆಯುರ್ವೇದ ಶಾಸ್ತ್ರದ ವಿಷಯಕ್ಕೆ ವಿಶೇಷಜ್ಞಾನವನ್ನು ಕೊಡಬೇಕೆಂದು ನನ್ನ ಕಾಂಕ್ಷೆ. ರಾಷ್ಟ್ರಜೀವನಕ್ಕೆ ಅಸ್ತಿಭಾರವಾದ ಶಿಶುಸಂಗೋಪನ ಶಿಕ್ಷಣವನ್ನು ಕುರಿತು ಲೇಖನಗಳು ಬರೆಯಲ್ಪಡುವವು. ಜಗತ್ತಿನಲ್ಲಿ ಪ್ರಸಿದ್ಧವಾಗಿರುವ ಚಿಕಿತ್ಸಾವಿಧಿಗಳನ್ನು ಪರಿಶೀಲಿಸಿ ಎಲ್ಲವುಗಳನ್ನು ಕುರಿತು ಮುಖ್ಯವಾದ ಜ್ಞಾನವನ್ನು ಸಾಧಾರಣ ಜನರಿಗೂ ವೈದ್ಯರಿಗೂ ಉಪಯೋಗವಾಗುವಂತೆ ಬರೆಯಬೇಕೆಂದೂ, ಮುಂದೆ ಗಾಯನಶಾಸ್ತ್ರ, ವರ್ಣ (ಬಣ್ಣ) ಶಾಸ್ತ್ರ, ಯೋಗಶಾಸ್ತ್ರ, ಮಂತ್ರಶಾಸ್ತ್ರ, ಜ್ಯೋತಿಷಶಾಸ್ತ್ರ ಮತ್ತು ಆಯುರ್ವೇದ ಶಾಸ್ತ್ರಗಳ ಪರಸ್ಪರ ಸಂಬಂಧವನ್ನು ಸ್ಪಷ್ಟವಾಗಿ ಉಪಯೋಗಕ್ಕೆ ಬರುವಂತೆ ತೋರಿಸಬೇಕೆಂದೂ ಕುತೂಹಲವಿದೆ. ಆದರೆ ದೊಡ್ಡ ಕಾರ್ಯವು ಜಗನ್ಮಾತೆಯ ಕೃಪೆಯಿಂದಲೂ ದೇಶ ಧರ್ಮ ವಿದ್ಯಾಭಿಮಾನಿಗಳಾದವರ ಪ್ರೋತ್ಸಾಹದಿಂದಲೂ ನಡೆಯಬೇಕು. ನನ್ನ ಪ್ರೇಮಸೇವೆಯು ಮಾತೆಗೆ ಸಮ್ಮತವಾಗಲಿ.

## ಪಥ್ಯಾಪಥ್ಯ ವಿಷಯಗಳು.

ಎಲ್ಲ ರೋಗಗಳಿಗೂ ಸಾಧಾರಣವಾಗಿ ಅನ್ನ, ಹಾಲು, ಮಜ್ಜಿಗೆ, ಒಳ್ಳೆಯ ಕಾಯಿಪಲ್ಯಗಳು ಮುಂತಾದ ಸಾತ್ವಿಕ ಪದಾರ್ಥಗಳನ್ನುಣ್ಣಬಹುದು. ಹೊಟ್ಟೆ ಪೂರ್ತಿಯಾಗಿ ತುಂಬುವವರೆಗೆ ಉಣ್ಣುವುದು ಎಲ್ಲರಿಗೂ ಅಪಾಯಕರವಾಗಿದೆ. ರೋಗಿಗಳಾದರೂ ಹೊಟ್ಟೆಯನ್ನು ಹಗುರವಾಗಿಟ್ಟುಕೊಳ್ಳುವಂತೆ ಇರಬೇಕು. ಬೇಳೆಗಳನ್ನುಪಯೋಗಿಸಿದ್ದಲ್ಲಿ ಅವುಗಳ ಕಟ್ಟನ್ನು ಜೀರಿಗೆ ಒಗ್ಗರಣೆ, ಸೈಂಧವ

ಲವಣ ಮೆಣಸು ಹಾಕಿ ಉಪಯೋಗಿಸುವುದು ಬಹಳ ಉತ್ತಮ. ಸಾರು ಮುಂತಾದ ಹುಳಿ ಸೇರಿದ ಪದಾರ್ಥಗಳಿಗಿಂತಲೂ ಪ್ರತಿದಿನವೂ ಕಟ್ಟಿನ ರೂಢಿಯನ್ನೇ ಇಟ್ಟುಕೊಳ್ಳುವುದು ಬಹಳ ಉತ್ತಮ. ಇದರಿಂದಲೇ ಅನೇಕ ರೋಗಗಳು ಔಷಧವಿಲ್ಲದೆ ದೂರವಾಗುತ್ತವೆ. ಇಂದ್ರಿಯಚಾಪಲ್ಯವೇ ರೋಗಗಳಿಗೆ ಮುಖ್ಯ ಕಾರಣ. ಮತ್ತು ಅದನ್ನು ಭೋಗದಿಂದ ಶಮನಮಾಡುವುದು ಸಾಧ್ಯವೇ ಇಲ್ಲ. ಹುಳಿ ಕಾರಗಳನ್ನು ಅತಿಯಾಗಿ ತಿಂದು ರೂಢಿಯಿದ್ದವರಿಗೆ ಎರಡುಮೂರು ದಿನಗಳ ವರೆಗೂ ತೊಂದರೆಯಾಗಬಹುದು. ಈ ನಮ್ಮ ಆಶ್ರಮದಲ್ಲಿಯೇ ಹುಳಿ ಕಾರವನ್ನು ಯಾವಾಗಲೂ ತಿನ್ನುವವರಿಗೆ ರೋಗಗಳು ಅಂಟುವುದು ಹೆಚ್ಚು. ಕಟ್ಟು, ಅನ್ನ, ರೊಟ್ಟಿ, ಕಾಯಿಪಲ್ಯವನ್ನುಣ್ಣುವವರ ಆರೋಗ್ಯವು ಬಹುಚನ್ನಾಗಿರುತ್ತದೆ.

ರೋಗಿಗಳು ಸಾಧಾರಣವಾಗಿ ಕಡಲೆ, ಉದ್ದು, ಮೊಸರು, ಕರಿದ ಪದಾರ್ಥಗಳು, ಹುಣಸೇ ಹುಳಿ, ಎಣ್ಣೆ, ಬಲಿತ ಬದನೇಕಾಯಿ, ಪುಂಡಿ ಪಲ್ಯ, ಮುಂತಾದ ಜಡ ಪದಾರ್ಥಗಳನ್ನು ವರ್ಜಿಸಬೇಕು. ವಿಶೇಷ ಪಥ್ಯವಿದ್ದಲ್ಲಿ ಅಲ್ಲಲ್ಲೇ ಸೂಚಿಸಲ್ಪಡುವುದು.

## ವಯೋಮಾನ— ಔಷಧಗಳ ಪ್ರಮಾಣ.

ಈಗ ಔಷಧಗಳ ಪರಿಮಾಣವನ್ನು ವಯಸ್ಸಿಗನುಸಾರವಾಗಿ ತಿಳಿದುಕೊಳ್ಳತಕ್ಕದ್ದು.

| ವಯೋಮಾನ | ... | ಪ್ರಮಾಣ |
|---|---|---|
| 1—2ರ ವರೆಗೆ | .... | $\frac{1}{16}$—$\frac{1}{8}$ ವರೆಗೆ |
| 2—4 ,, | .... | $\frac{1}{8}$—$\frac{1}{4}$ ,, |
| 4—6 ,, | .... | $\frac{1}{4}$—$\frac{1}{3}$ ,, |
| 6-12 ,, | ... | $\frac{1}{3}$—$\frac{1}{2}$ ,, |
| 12-15 ,, | .... | $\frac{1}{2}$—$\frac{3}{4}$ ,, |
| 16ರಿಂದ ಮೇಲೆ | .... | ಪೂರ್ಣ. |

ಕೆಳಗೆ ಕೊಟ್ಟ ಪ್ರಮಾಣಗಳೆಲ್ಲವೂ ಪೂರ್ಣಪ್ರಮಾಣಗಳು. ಆದುದರಿಂದ ಮೇಲೆ ಕಾಣಿಸಿದ ಪಟ್ಟಿಯಲ್ಲಿದ್ದಂತೆ ವಯಸ್ಸನ್ನು ತಿಳಿದುಕೊಂಡು ಪ್ರಮಾಣಗಳನ್ನು ನಿಶ್ಚಯಿಸಬೇಕು. ಔಷಧಗಳು ನಿರುಪದ್ರವಿಯಾಗಿರುವುದರಿಂದ ಸ್ವಲ್ಪ ಹೆಚ್ಚು ಕಡಿಮೆಯಾದರೆ ಏನೇನೂ ಅಪಾಯವಾಗುವುದಿಲ್ಲ.

ತೂಕದ ವಿಷಯ ಸ್ವಲ್ಪ ತಿಳಿದುಕೊಳ್ಳಬೇಕು.

ತೂಕಗಳು.

| | | |
|---|---|---|
| 4 ಧಾನ್ಯಗಳು | = | 1 ರತ್ತಿ |
| 8 ರತ್ತಿಗಳು | = | 1 ಮಾಶೆ |
| 12 ಮಾಶೆಗಳು | = | 1 ತೊಲೆ |
| 5 ತೊಲೆಗಳು | = | 1 ಛಟಾಕು |

180 ಗ್ರೈನುಗಳು (grains) ಅಥವಾ 3 ಡ್ರಾಮುಗಳು (drams) ಒಂದು ತೊಲೆ ಅಥವಾ ರೂಪಾಯಿ ತೂಕಕ್ಕೆ ಸರಿಯಾಗುವವು.

| | | |
|---|---|---|
| 1 ಡ್ರಾಮಿಗೆ | ... | 8 ಮಾಶೆಗಳಾಗುತ್ತವೆ |
| 1 ರತ್ತಿಗೆ | ... | 2 ಗ್ರೈನುಗಳಾಗುತ್ತವೆ. |

ಮುಂದಿನಸಂಚಿಕೆಯಿಂದ ನಿದಾನಚಿಕಿತ್ಸೆಯ ವಿಷಯವು ಕ್ರಮೇಣ ತಿಳಿಸಲ್ಪಡುವವು.



# ಬಿಡಿನುಡಿಗಳು.



## ಗ್ರಂಥಗಳು ಮತ್ತು ಪತ್ರಿಕೆಗಳು.

ಈ ಕೆಳಗೆ ವಿವರಿಸಿರುವ ವಿಷಯಗಳು ದಿ ಜಪಾನ್ ಮ್ಯಾಗಸೈನ್ (The Japan Magazine) ಎಂಬ ಪತ್ರಿಕೆಯಿಂದ ಸಂಗ್ರಹಿಸಲ್ಪಟ್ಟಿರುವುದು.

"ಸ್ತ್ರೀಯರಸಲುವಾಗಿ ಪ್ರಕಟಿಸಲ್ಪಡುವ ಪತ್ರಿಕೆಗಳು ಈಗ ಬಹಳ ಅಭಿವೃದ್ಧಿಯಲ್ಲಿವೆ. ಇತರ ಪತ್ರಿಕೆಗಳಿಗಿಂತಲೂ ಇವು ಹೆಚ್ಚಾಗಿ ವಿಕ್ರಯಿಸಲ್ಪಡುತ್ತಲಿವೆ. ಆದುದರಿಂದ ಪತ್ರಿಕಾಪ್ರಚಾರಕರು ಕಾದಂಬರಿ ಮೊದಲಾದ ಲೇಖನಗಳನ್ನು ಬರೆಯತಕ್ಕವರಿಗೆ ಸಾಕಾದಷ್ಟು ಪ್ರತಿ ಸಹಾಯವನ್ನು ಮಾಡುವರು. ಜಪಾನ್ ದೇಶದ ಪತ್ರಿಕೆಗಳಲ್ಲಿ "ಫುಜೂಕಾಯ್" (Phujoo Kai) ಮತ್ತು ಶುಫುನೋಟೋಮೋ (Shufu-no-tomo) ಎಂಬುವುಗಳು ಅಗ್ರಸ್ಥಾನವನ್ನು ವಹಿಸಿವೆ. ಈ ಮಹಾನಪತ್ರಿಕೆಯ ಪ್ರಚಾರವು 1,00,000 ಇದೆ. [illegible]

(Kodan club) ಮೊದಲಾದ ಮಕ್ಕಳಿಗೆ ಸಂಬಂಧಿಸಿದ ವಿಷಯಗಳನ್ನೊಳ ಗೊಂಡ ಪತ್ರಿಕೆಗಳೂ, ಜನಾನುರಾಗವನ್ನು ಪಡೆದಿರುವ ಇತರ ಕೆಲವು ಪತ್ರಿಕೆಗಳೂ ಹೊರತಾಗಿ ಮೇಲ್ಕಂಡ ಪತ್ರಿಕೆಗಳಿಗೆ ಸಮತೂಗುವ ಪತ್ರಿಕೆಯು ಮತ್ತಾವುದೂ ಇಲ್ಲ. "ದಿ ಷು-ಫು-ನೋ-ಟೊಮೋ" ಎಂಬ ಪತ್ರಿಕೆಗೆ ಲೇಖನವನ್ನು ಬರೆಯುವರಾದ "ಹ್ಯಾರ್ಸ" (ಷಿಪ್‌ರೆಕ್) ಎಂಬುವರಿಗೆ ಮಾಸೋಮೆಯವರಿಂದ ಹತ್ತು ಸಾವಿರ ಸವರ್ಣಗಳು (ಆ ದೇಶದ ನಾಣ್ಯಗಳು) ಕೊಡಲ್ಪಟ್ಟವು. ಹಾಗೆಯೇ "ಫುಜೋಕಾಯ್" ಎಂಬ ಪತ್ರಿಕೆಗೆ ಲೇಖನಗಳನ್ನು ಬರೆಯತಕ್ಕವರಿಗೆ "ಷಿಂಜು" (ನ್ಯೂ ಜ್ಯೂಯಲ್) ಗೆ ಕಾನ್‌ಕಿಕುಚ್ಚಿಯವರಿಂದ ಕಾಪಿಯಿಂಗ್ ಪೇಪರ್ ಅಳತೆಯ ಪುಟ ಒಂದಕ್ಕೆ ಇಪ್ಪತ್ತೈದು ಎನ್‌ಗಳಂತೆ ಕೊಡಲ್ಪಟ್ಟವು. ಇದರಿಂದ ವಿಲೇಖಕರ ಗೌರವವು ಹೆಚ್ಚುವುದಲ್ಲದೆ ಭಾಷಾ ಪ್ರೋತ್ಸಾಹವೂ ಉಂಟಾಗುವುದು. ಇದರಂತೆಯೇ "ಸೆಂಟ್ರಲ್ ರಿವ್ಯೂ" ಎಂಬ ಪತ್ರಿಕೆಯೂ ಕೂಡ ವಿಲೇಖಕರಿಗೆ ಉತ್ತೇಜನ ಕೊಡುತ್ತಿರುವುದು.

ಪಶ್ಚಿಮದೇಶಗಳಲ್ಲಿ ಪತ್ರಿಕೆಯನ್ನೋದುವವರ ಸಂಖ್ಯೆಯು ದಿನೇ ದಿನೇ ಹೆಚ್ಚುತ್ತಿರುವುದು. ಜಪಾನ್ ದೇಶದಲ್ಲಿಯೂ ಕೂಡ ಹೆಚ್ಚುತ್ತಿರುವುದು. ದೇಶ ವಿಸ್ತೀರ್ಣವು ಸ್ವಲ್ಪವಾಗಿದ್ದರೂ ಯಾವುದಾದರೊಂದು ಗ್ರಂಥದ ೬೦೦೦ ಪ್ರತಿಗಳು ವಿಕ್ರಯವಾದರೆ ಅದು ಸಾಕಾದದ್ದಾಯಿತೆಂದು ಜಪಾನಿನವರು ಭಾವಿಸುವರು. ಕೆಲವು ಗ್ರಾಮ್ಯಗ್ರಂಥಗಳುಮಾತ್ರ ಹತ್ತುಸಾವಿರ ಪ್ರತಿಗಳಷ್ಟು ವಿಕ್ರಯವಾಗಿರುತ್ತವೆ. ಆದರೂ ಸಾಹಿತ್ಯಪ್ರಪಂಚದಲ್ಲಿ ಅವು ಗಣನೆಗೆ ಯೋಗ್ಯವಲ್ಲವೆಂದು ಅವರು ಭಾವಿಸುವರು.

ಮಕ್ಕಳಿಗೆ ಸಂಬಂಧಿಸಿದ ವಿಷಯವನ್ನೊಳಗೊಂಡ ಪತ್ರಿಕೆಗಳ ಅಭಿವೃದ್ಧಿಯು ಅಗ್ರಸ್ಥಾನವನ್ನು ವಹಿಸಿರುವುದು. ಪುಸ್ತಕಶಾಲೆಗಳಲ್ಲಿ ಅಂತಹ ಸುಂದರವಾದ ಪತ್ರಿಕೆಗಳು ಹತ್ತೆಂಟು ತರಹದವುಗಳು ಮಾರಾಟಕ್ಕಿಡಲ್ಪಟ್ಟಿರುವುದರಿಂದ ಯಾವುದನ್ನು ಕೊಳ್ಳುವುದು, ಯಾವುದನ್ನು ಬಿಡುವುದು ಎನ್ನುವುದೇ ತಿಳಿಯುವುದಿಲ್ಲ. ಈಪತ್ರಿಕೆಗಳು ನಾನಾತರಹೆಯವುಗಳಿರುತ್ತವೆ. ಮೊದಲನೆಯದು 2 ರಿಂದ 6 ವರ್ಷದ ಮಕ್ಕಳಿಗೆ ಉಪಯುಕ್ತವಾದದ್ದಾಗಿರುತ್ತವೆ. ಅವುಗಳಲ್ಲಿ ನಾನಾವಿಧವಾದ ಬಣ್ಣದ ಚಿತ್ರಪಠಗಳು ಸಂಗ್ರಹವಾಗಿ ವಿವರಿಸಲ್ಪಟ್ಟಿರುತ್ತವೆ. ಎರಡನೆಯತರದ ಪತ್ರಿಕೆಗಳು ಪಾಠಶಾಲೆಯಲ್ಲಿ ಓದತಕ್ಕ ಬಾಲಕರಿಗಾಗಿ ಪ್ರಚುರಪಡಿಸಲ್ಪಡುತ್ತವೆ. ಅವುಗಳಲ್ಲಿ ವಿಸ್ತಾರವಾದ ಚಿತ್ರಪಠಗಳೂ ಓದತಕ್ಕ ವಿಷಯಗಳೂ ಚಂದಾದಾರರಿಂದ ಬರೆದು ಕಳುಹಲ್ಪಡತಕ್ಕ ಸುಲಭ ಚಿತ್ರಲೇಖನ (Fine drawing) ಗಳೂ ಇರುತ್ತವೆ. ಮೂರನೆಯ ತರದ ಪತ್ರಿಕೆಗಳು (ಸೀನಿಯರ್) ದೊಡ್ಡ ತರಗತಿಗಳಲ್ಲಿ ಓದುವ ವಿದ್ಯಾರ್ಥಿಗಳಿಗೂ (ಜೂನಿಯರ್)

ಆರನೆಯ ತರಗತಿಗಳಲ್ಲಿ ಓದತಕ್ಕ ಹುಡುಗಿಯರಿಗೂ (ವಿದ್ಯಾರ್ಥಿನಿಯರಿಗೂ) ಉಪಯುಕ್ತವಾಗಿರುತ್ತವೆ. ಬಾಲಕ ಬಾಲಕಿಯರಿಗೆ ಪ್ರತ್ಯೇಕವಾದ ಪತ್ರಿಕೆಗಳಿರುತ್ತವೆ. ಎರಡನೆಯ ತರದ ಪತ್ರಿಕೆಗಳಿಗಿಂತ ಮೂರನೆಯ ತರದ ಪತ್ರಿಕೆಗಳಲ್ಲಿರತಕ್ಕ ವಿಷಯಗಳು ಪ್ರೌಢ ಶೈಲಿಯಲ್ಲಿರುತ್ತವೆ. ಪತ್ರಿಕೆಯ ಪುಟಗಳು ಪತ್ತೇದಾರಿ ಕಥೆಗಳಿಂದಲೂ ವೀರವ್ಯಕ್ತಿಗಳ ಸಾಹಸ ಚರಿತ್ರೆಗಳಿಂದಲೂ ತುಂಬಿರುತ್ತವೆ. ಸ್ತ್ರೀಯರಿಗಾಗಿ ಪ್ರಕಟಿಸಲ್ಪಡುವ ಪತ್ರಿಕೆಗಳಲ್ಲಿ ಶೃಂಗಾರ, ಕರುಣಾರಸ ಸಂಬಂಧವಾದ ರಸಭರಿತವಾದ ವಿಷಯಗಳಿರುತ್ತವೆ. ಬಾಲಕರ ಪತ್ರಿಕೆಗಳು ಚಂದಾದಾರರು ಕಳುಹಿಸತಕ್ಕ ಲೇಖನಗಳನ್ನು ಇತರ ಲೇಖನಗಳಿಂದ ಪ್ರಾಮುಖ್ಯವಾಗಿ ಎಣಿಸುತ್ತದೆ. ಚಂದಾದಾರರು ಕಳುಹಿಸುವ ವ್ಯಾಸಗಳು, ಕಥೆಗಳು ಚಿತ್ರಲೇಖನಗಳು, ಹಾಡುಗಳು ಮುಂತಾದ ವಿಷಯಗಳು ಪತ್ರಿಕೆಯ ಕಡೆಯಭಾಗದಲ್ಲಿ ಪ್ರಕಟಿಸಲ್ಪಡುತ್ತವೆ. ಅವುಗಳಲ್ಲಿ ಅನೇಕವುಗಳಿಗೆ ಬಹುಮಾನವು ಕೊಡಲ್ಪಡುತ್ತವೆ. ನಾಲ್ಕನೆಯ ತರಹದ ಪತ್ರಿಕೆಗಳು ಪ್ರೌಢ ಮತ್ತು ಮಧ್ಯತರಗತಿಗಳ ವಿದ್ಯಾಶಾಲೆಗಳ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಉಪಯುಕ್ತವಾಗಿರುತ್ತವೆ. ಇವುಗಳಲ್ಲಿ ವಿದ್ಯಾರ್ಥಿಗಳಿಗೆ ಬೇಕಾದ ಮುಖ್ಯ ವಿಷಯಗಳೆಲ್ಲವೂ ಪ್ರಕಟಿಸಲ್ಪಡುತ್ತವೆ. ಕೆಲವು ಪತ್ರಿಕೆಗಳಲ್ಲಿ ಉನ್ನತ ಪ್ರವೇಶಪರೀಕ್ಷೆಗಳಿಗೆ ಉಪಯುಕ್ತವಾದ ವಿದ್ಯಾವಿಷಯಗಳೂ ಮತ್ತು ಹಿಂದಿನ ಕಾಲದ ಪರೀಕ್ಷಾಪ್ರಶ್ನೆಗಳೂ ತಮ್ಮ ವಿದ್ಯಾಪಾಠಕ ಬೃಂದದ ಪ್ರವೇಶ ಪರೀಕ್ಷೆಯ ತೇರ್ಗಡೆಗನುಕೂಲವಾಗಿ ವಿವರವಾಗಿ ಪ್ರಕಟಿಸಲ್ಪಡುತ್ತವೆ. ಈ ವಿಧವಾದ ಸಾಹಿತ್ಯದಲ್ಲಿ ಜಪಾನ್ ದೇಶದ ಪೋಟೀ ಪರೀಕ್ಷೆಗಳು ಬಹಳ ಕಠಿನತರವಾಗಿರುತ್ತವೆ. ಮಕ್ಕಳ ಹಾಡುಗಳು ಈ ಕಾಲದಲ್ಲಿ ಬಹಳ ಪ್ರಾಮುಖ್ಯವಾದುದರಿಂದ ಮಕ್ಕಳ ಪತ್ರಿಕೆಗಳು ಪ್ರತಿಯೊಂದು ಸಂಚಿಕೆಯ ಪ್ರತಿಯೊಂದು ಪುಟದಲ್ಲಿಯೂ ಈ ವಿಧವಾದ ಹಾಡುಗಳಲ್ಲಿ ಕೆಲವನ್ನು ಪ್ರಕಟಿಸುತ್ತವೆ. ಈ ವಿಧವಾದ ಪತ್ರಿಕೆಗಳು ನಾನಾತರದ ಚಿತ್ರಗಳಿಂದ ಕಂಗೊಳಿಸುತ್ತವೆ. ನಮ್ಮ ಭರತಖಂಡದ ಅದರಲ್ಲೂ ಕರ್ನಾಟಕದ ಪತ್ರಿಕಾಪ್ರಚಾರವನ್ನೂ, ಮೇಲ್ಕಂಡ ದೇಶದವರ ವಾಚನಾಭಿವೃದ್ಧಿಯನ್ನೂ, ಹೋಲಿಸಿನೋಡಿದರೆ ನಾವೆಷ್ಟು ಹಿಂದುಳಿದಿರುವೆವೆನ್ನುವುದು ಹೇಳದೆಯೇ ವ್ಯಕ್ತವಾಗುವುದು.

(ಮಾಡರನ್ ರಿವ್ಯೂ)

# ಭಕ್ತಿಸುಮಾಂಜಲಿ

(ಹಿಂದಿನ ಸಂಚಿಕೆಯಿಂದ ಮುಂದರಿಸಿದ್ದು.)

ಈ

ಪ್ರಪಂಚದ ಭವಬಂಧನದಲ್ಲಿ ಸಿಲುಕಿ, ಆ ಸ್ಥಿತಿಯಲ್ಲಿಯೇ ಇರಬೇಕೆಂಬಾತನಿಗೆ ವೇದಾಂತವೇಕೆ? ಮಾನಕ್ಕೆ ಅಂಜದಿರುವವನ ಮೇಲೆ ಅಭಿಮಾನವನ್ನಿಟ್ಟಲ್ಲಿ ಏನುತಾನೇ ಪ್ರಯೋಜನ? ಅಜ್ಞಾನಿಗೆ ಗುರುಬೋಧೆಯುತಾನೇ ಏಕೆ? ಅದರಿಂದಾತನಿಗೆ ಸರಿಯಾದ ತಿಳುವಳಿಕೆ ಉಂಟಾಗುತ್ತದೆಯೇ?

ಕಾಡುಕುರುಬನಿಗೆ ಪಟ್ಟಣಿಗರ ಶೃಂಗಾರ ರುಚಿಸುವುದೇ? ಲೋಭಿಗೆ ಬಿಂಕತನವೇಕೆ? ಹಾಡುಗಳನ್ನು ಹೇಳಲಿಕ್ಕೆ ಬಾರದಿರುವವರಿಗೆ, ಹಾಡುಗಳನ್ನು ಹೇಳುತ್ತೇನೆಂಬ ಬಣಡಂಭವೇಕೆ? ಯಾವ ಯೋಗ್ಯತೆಯೂ ಇಲ್ಲದವನಿಗೆ ಜಂಭಡಂಭಗಳಿದ್ದೇನುಫಲ? ಭಾಷೆಕೊಟ್ಟು ಅದರಂತೆ ನಡೆಯದಿರುವವನಮೇಲೆ ನಂಬಿಕೆ ಇಡಲೇಕೆ? ತನ್ನಂಥಾ ಪ್ರವೀಣನೂ, ಗುರುವೂ ಈ ಪ್ರಪಂಚದಲ್ಲಿಲ್ಲವೆನ್ನುವವನಿಗೆ ತಾನು ಕಲಿತ ವಿದ್ಯೆಯಿಂದೇನು ಫಲ? ತನ್ನ ಮುಂದಿನ ಗತಿ ಪರಿಣಾಮಗಳನ್ನು ಯೋಚಿಸದಿರುವವನೇಕೆ? ಯೋಗ್ಯತೆ ಇಲ್ಲದವನು ದೊಡ್ಡ ಪದವೀಧರನಾಗಲೇಕೆ? ಈ ಪ್ರಪಂಚದ ಕಷ್ಟಸುಖಗಳಿಗೊಳಪಡದಿರುವವನಿಗೇಕೆ ಕೈವಲ್ಯಮಾರ್ಗ? "ಮಾಡುವುದು ಅನಾಚಾರ, ಮನೆಮುಂದೆ ಮಾತ್ರ ಬೃಂದಾವನ" ಎಂಬ ಲೋಕೋಕ್ತಿಯಂತೆ ನಡೆಯುವಾತನಿಗೆ ಮುಕ್ತಿಮಾರ್ಗವೇಕೆ?

ಹೇ! ಮನಸ್ಸೇ! ಆತ್ಮ ಜೀವಶುದ್ಧಿಯಾಗುವುದಕ್ಕೋಸ್ಕರ ಪೂಜ್ಯಬುದ್ಧಿಯನ್ನು ಅನುಗ್ರಹಿಸುವಂತೆ ದೇವರನ್ನು ಪ್ರಾರ್ಥಿಸು! ಪ್ರಾರ್ಥಿಸು! ಅಂಥಾ ಪೂಜ್ಯಬುದ್ಧಿಯು ಅನುಗ್ರಹಿಸಲ್ಪಡಲಿ!

ತತ್ಸತ್

೮

ಹೇ ! ಜಗದೀಶ್ವರಾ ! ಕೆಲವುದಿವಸ ನಿನ್ನ ಧ್ಯಾನಪರನಾಗಿದ್ದು ಈ ಹಾಳು ಸಂಸಾರಸುಖವನ್ನು ಅನುಭವಿಸಲೆನ್ನ ಮನಸ್ಸು ಬಡಂಬಟ್ಟು ಅದರ ಪಾಶಕ್ಕೆ ಯಾತಕ್ಕೆ ಸಿಲುಕಿಬಿದ್ದೆ ? ಈ ದೆಸೆಯಿಂದ ನಿನ್ನನ್ನು ಪ್ರತಿ ದಿವಸವೂ ಭಜಿಸುವುದನ್ನೇ ಬಿಟ್ಟು, ಆ ಪಾಪಮಯವಾದ ಮಾರ್ಗಕ್ಕೆ ಒಳಪಟ್ಟವನಾದೆ. ಇದರಿಂದ ನನಗೆ ತೊಂದರೆ ಕಷ್ಟಪರಂಪರೆಗಳು ಬರಲಾರಂಭಿಸುತ್ತಿವೆ. ಈ ಬಂಧನದ ಬಿಡುಗಡೆಯು ನಿನ್ನ ಧ್ಯಾನದಿಂದಲೇ ಆಗಬೇಕಲ್ಲವೆ ?

ಈ ಹಾಳು ಸಂಸಾರಸುಖದಿಂದ ನಿನ್ನ ಧ್ಯಾನವನ್ನು ಬಿಡಲು ಕೋಪವನ್ನು ಎನ್ನಮೇಲೆ ಏಕೆ ಬೀರುತ್ತಿರುವಿ ? ನನ್ನ ಅಜಾಗ್ರತೆಯಿಂದ ಮಾಡಿದ ಅಪರಾಧವನ್ನು, ನಿನ್ನಿಂದನುಗ್ರಹಿತವಾದ ಕಷ್ಟಗಳಿಂದ ಅನುಭವಿಸುತ್ತಿರುವೆನು. ಅವುಗಳಿಂದ ನಾನು ಪಾರಾಗಲು ಎನ್ನಮೇಲಿನ ಕೋಪವನ್ನು ಬಿಟ್ಟು ಅಂಜಲಿಬದ್ಧನಾಗಿ ಮಾಡುವ ನನ್ನ ಪ್ರಾರ್ಥನೆಗಳನ್ನು ಅಂಗೀಕರಿಸು. ನೀರೊಳಗೆ ಕಷ್ಟವು ಬಿಡುಗಡೆಯಾದೀತೆಂಬ ಆಶೆಯಿಂದ ಮುಳುಗಿದರೆ, ಅದು ನನ್ನ ಬೆನ್ನನ್ನು ಬಿಡದಿಹದೇ ? ಬೇಕಾದಷ್ಟು ಭಾರ ಹೊತ್ತಿರುವನೆಂದು ತಿಳಿದು, ಅದನ್ನು ತಪ್ಪಿಸಿಕೊಳ್ಳಲೆತ್ನಿಸಿದರೆ ಆದೀತೆ ? ಈ ಕಷ್ಟಪರಂಪರೆಯಿಂದ ಬಿಡಿಸಿಕೊಳ್ಳಬೇಕೆಂದು ಎಷ್ಟು ವಿಧವಾಗಿ ತಪ್ಪಿಸಿಕೊಂಡನೆಂದರೂ ನೀನು ಮಾತ್ರ ಬಿಡೆ.

ಇಂಥಾಕಾಲದಲ್ಲಿ ನಿನ್ನನ್ನು ಅಂಜಲಿಬದ್ಧನಾಗಿ ಧ್ಯಾನಮಾಡತಕ್ಕದ್ದು ನನ್ನ ಕರ್ತವ್ಯವು. ಇಗೋ ! ನಿನ್ನ ನಾಮಸಂಕೀರ್ತನೆಯನ್ನೂ, ಧ್ಯಾನವನ್ನೂ ಮಾಡತೊಡಗುವೆನು. ನನಗೆ ಕೈವಲ್ಯಮಾರ್ಗವನ್ನು ತೋರಿಸು. ಈ ಹಾಳು ಪ್ರಪಂಚದಲ್ಲಿ ಅನುಭವಿಸುವ ಸುಖಸೌಖ್ಯಗಳಿಗಿಂತಲೂ ನಿನ್ನ ಪಾದಾರವಿಂದವನ್ನು ಸೇರುವುದೇಲೇಸು ; ಅದನ್ನು ಅನುಗ್ರಹಿಸು !

ತತ್ಸತ್

ಓಂ.

# ಸ್ತ್ರೀಯರೂ ಸಮಾಜ ಸೇವೆಯೂ.

ರಾಷ್ಟ್ರೀಯ ವಿಷಯಗಳಲ್ಲಿ ಪ್ರಾಮುಖ್ಯತೆಯನ್ನು ಮನೆಯು ವಹಿಸಿರುವುದು ಮುಖ್ಯವಾಗಿ ಭಾರತರಮಣಿಯರಿಗೆ ಏಕೆ? ಸಕಲ ಮಹಿಳಾವರ್ಗಕ್ಕೂ ಬಹಳ ಆನಂದವಾದ ವರ್ತಮಾನವಾಗಿರುವುದೂ, ಮಕ್ಕಳಿಗೆ ಕಲಿಸತಕ್ಕ ಶಾಲೆಯೂ ಕೂಡ ಸ್ವಂತ ಮನೆಯಂತೆಯೇ ಇರ ಬೇಕೆನ್ನುವುದೂ ಅನೇಕರ ಅಭಿಪ್ರಾಯವಾಗಿರುವುದರಿಂದಲೇ ಅನೇಕರು ಮನೆಯಂತಹ ಭಾವನೆಯನ್ನುಂಟುಮಾಡುವ ಶಾಲೆಗಳಿಗೂ, ಕಾರ್ಖಾನೆ ಗಳಿಗೂ ಕಳುಹಿಸುತ್ತಿರುವರು. ಖೈದಿಗಳೂ ಕೂಡ ಈಗ ನಡೆಸಲ್ಪಡು ತ್ತಿರುವ ರೀತಿಗಿಂತ ಮತ್ತಿಷ್ಟು ಉತ್ತಮ ರೀತಿಯಲ್ಲಿ ನಡೆಸಲ್ಪಡಬೇಕು. ಗೃಹಕ್ಕೆ ಸಂಬಂಧಿಸಿದ ವಸ್ತುಗಳಲ್ಲದೆ ಕಬ್ಬಿಣದ ಸಲಾಕಿಗಳೂ, ಸಂಕೋಲೆ ಗಳೂ, ನೆಲಮಾಳಿಗೆಗಳೂ ಇಂತಹ ಅಪರಾಧಿಗಳನ್ನು ಉತ್ತಮ ಮಾರ್ಗಕ್ಕೆ ತರತಕ್ಕ ಅಸ್ತ್ರಗಳಲ್ಲ. ದಾರಿತಪ್ಪಿದ ಹೆಂಗಸರಿಗೂ ಕೂಡ ಅವರನ್ನು ಉತ್ತಮಮಾರ್ಗಕ್ಕೆ ತರತಕ್ಕ ಅನುಕೂಲವಾದ ಗೃಹಸೌಖ್ಯ ಗಳನ್ನು ದೊರಕಿಸಿಕೊಟ್ಟಲ್ಲಿ ಈ ಸುಧಾರಣೆಯ ಫಲವನ್ನು ಪಡೆದು ಆರೋಗ್ಯವಂತರೂ, ನಾಗರಿಕವಂತರೂ ಆದ ಜನಾಂಗವಾಗಿ ಪರಿಣಮಿ ಸುವುದರಲ್ಲಿ ಸಂಶಯವಿಲ್ಲ. ಪಾಶ್ಚಾತ್ಯದೇಶಗಳಲ್ಲಿ ಅನಾಥರೂ, ದುರ್ಮಾ ರ್ಗಕ್ಕೆ ಸಿಕ್ಕಿದವರೂ ಆದ ಬಾಲಕರು ಇಂತಹ ಸುಧಾರಣ ಗೃಹಕ್ಕೆ ತರ ಲ್ಪಟ್ಟು ಉತ್ತಮರಾಗುತ್ತಲಿರುವರು. ನಮ್ಮಲ್ಲನೇಕರು ಈಗ ಈ ವಿಷಯ ಗಳನ್ನು ತಮ್ಮ ತಮ್ಮ ಗೃಹಿಣಿಯರೊಡನೆ ಚರ್ಚಿಸಲಾರಂಭಿಸಿರುವರು. ಪ್ರಕೃತಕಾಲದಲ್ಲಿ ಇವುಗಳೆಲ್ಲವೂ ಸಂತೋಷ ಚಿಹ್ನೆಯಾಗಿರುವುದಲ್ಲದೆ ಮಹಿಳೆಯರು ಮತ್ತಿಷ್ಟು ಪ್ರಯೋಜನವಾಗಲು ಹೇತುವಾಗಿರುವುದು. ಅವರು ಇಂತಹ ಪೌರಕಾರ್ಯಗಳಿಗಾಗಿ ಸ್ವಲ್ಪಹೊತ್ತನ್ನು ಕಳೆದ ಮಾತ್ರ ದಿಂದಲೇ ಗೃಹಕೃತ್ಯಕ್ಕೆ ಸಂಬಂಧಿಸಿದ ಕಾರ್ಯಗಳನ್ನು ಅಸಡ್ಡೆ ಮಾಡಿದ ರೆಂದು ಅಲಗಳಿಸಿಕೊಳ್ಳತಕ್ಕ ಸಂದರ್ಭವು ಬದಗಲಾರದು. ಮನೆಯು ರಾಷ್ಟ್ರೀಯ, ರಾಜಕೀಯ, ಪೌರಸಾಮಾಜಿಕ ಕಾರ್ಯಗಳೆಲ್ಲವನ್ನೂ

ಸಂತೋಷದಿಂದ ಯಾರ ಅಡ್ಡಿಯೂ ಇಲ್ಲದೆ ಮಾಡತಕ್ಕ ಸ್ಥಳವೆಂದು ನಿಸ್ಸಂದೇಹವಾಗಿ ಹೇಳಬಹುದು. ಅದು ಹೇಗೆಂದೂ, ಏಕೆಂದೂ ವಿವರಿಸಲು ನನಗೆ ಅವಕಾಶವಿಲ್ಲ. ಮನೆಯು ಹೇಗೆ ಮೇಲ್ಕಂಡ ಕೆಲಸಗಳಿಗೆ ಕೇಂದ್ರಸ್ಥಾನವಾಗಿ ಭಾವಿಸಲ್ಪಟ್ಟಿರುವುದೋ ಅದರಂತೆಯೇ ಗೃಹಿಣಿಯ ಪ್ರಾಮುಖ್ಯತೆಯ ವಿಷಯವಾಗಿ ಯೋಚಿಸಬೇಕು.

ಭಾರತ ಮಹಿಳೆಯರು (ಈಗ ನಾನು ಮಾತನಾಡಲುದ್ದೇಶಿಸಿ ರುವುದು ಮುಖ್ಯವಾಗಿ ಅವರ ವಿಷಯವಾಗಿ) ಅವರಿಗೆ ತಿಳಿದೋ ತಿಳಿ ಯದೆಯೋ ಸಾಮಾಜಿಕ, ನೈಮಿತ್ತಿಕ, ನೈಸರ್ಗಿಕ ವಿಷಯಗಳಲ್ಲಿ ಅನೇಕ ವರ್ಷಗಳಿಂದ ಮುಖ್ಯ ಪಾತ್ರಗಳನ್ನು ವಹಿಸಿದ್ದರೆನ್ನುವುದು ಎಲ್ಲರಿಗೂ ತಿಳಿದ ವಿಷಯವಾಗಿರುವದು. ಇದಕ್ಕೆ ಗಾರ್ಗಿ, ಮೈತ್ರೇಯಿ, ಶುಕವಾಣಿಯರೇ ಸಾಕ್ಷಿ. ಬಂದಾನೊಂದು ಕಾಲದಲ್ಲಿ ಎಂದರೆ ಈಗಿನಂತೆ ಸಭೆಗಳೂ, ವೃತ್ತಮಾಸಪತ್ರಿಕೆಗಳ ಮುದ್ರಣಕ್ಕೆ ಅವಕಾಶವಿಲ್ಲದ ಕಾಲ ದಲ್ಲಿಯೂ ಕೂಡ ನಮ್ಮಿಪುಣ್ಯಭೂಮಿಯು ಅತ್ಯುತ್ತಮವಾದ ಸಮಾಜ ಸುಧಾರಣೆಯ ಕಾರ್ಯಕ್ಷೇತ್ರವಾಗಿದ್ದಿತು. ಸಂಸಾರ ನಿರ್ವಾಹ ಸಮಯದಲ್ಲಿ ಉಂಟಾಗತಕ್ಕ ಒಂದು ಅಲ್ಪವಿಷಯವೂ ಕೂಡ ಯುಕ್ತಿ ಚಾತುರ್ಯಗಳಿಂದ ನಡೆಸಲ್ಪಡುತ್ತಿದ್ದುದು ಮಾತ್ರವಲ್ಲದೆ ಮೇಲ್ಕಂಡ ಗುಣಭರಿತರಾದ ರಮ ಣಿಯರು ಗೃಹರಾಜ್ಯದಲ್ಲಿ ಅಧಿಷ್ಠಿತರಾದ ಲಕ್ಷ್ಮಿಯರಂತೆ ಬೆಳಗುತ್ತಿದ್ದರು. ರುಚಿರುಚಿಯಾದ ಭಕ್ಷ್ಯವೇ ಮೊದಲಾದ ಅಡಿಗೆ ಪದಾರ್ಥಗಳನ್ನು ಸಿದ್ಧ ಗೊಳಿಸಿ ಪಾಕಶಾಲೆಯನ್ನು ಶುದ್ಧವಾಗಿಟ್ಟುಕೊಳ್ಳುವುದರಲ್ಲಿ ಇವರನ್ನು ಮೀರಿಸಿದವರ್ಯಾರೂ ಇರಲಿಲ್ಲ. ಈಗ ಇದನ್ನು 'ಗೃಹಕಾರ್ಯನಿರ್ವಾಹ' (Domestic Economy) ಎಂದು ಶಾಲೆಗಳಲ್ಲಿ ಬೋಧಿಸತೊಡಗಿ ರುವರು. ಮನೆಯಲ್ಲಿ ಮಕ್ಕಳಿಗೆ ಬೇಕಾಗುವ ಉಡಿಗೆ ತೊಡಿಗೆ ಗಳನ್ನು ಸಿದ್ಧಮಾಡುವುದು, ರೋಗಿಗಳನ್ನು ಪಥ್ಯ, ಔಷಧವೇ ಮೊದಲಾದವುಗಳಿಂದ ಉಪಚರಿಸುವುದು, ನೆರೆಹೊರೆಯವರ ಕಷ್ಟ ಸುಖಗಳನ್ನು ವಿಚಾರಿಸಿ ಅವರಿಗೆ ಸಹಾಯಮಾಡುವುದು, ಧರ್ಮ ದೇವತೆಯಂತೆ ತನ್ನ ಕಷ್ಟವನ್ನೂ ಲಕ್ಷ್ಯಮಾಡದೆ, ನಿದ್ರಾಹಾರ ವರ್ಜಿತರಾಗಿ ತಮಗೆ ತಿಳಿದಿರುವ ಅಲ್ಪಸ್ವಲ್ಪ ಅಮೂಲ್ಯ ಔಷಧ

ಗಳ ಪ್ರಯೋಗದಿಂದ ರೋಗಿಗಳನ್ನು ಉಪಚರಿಸುವುದು, ಮನೆಗೆ ಬಂದ ಅತಿಥಿಗಳನ್ನು ಆದರದಿಂದ ಕಾಣುವುದು, ಇವೇ ಮೊದಲಾದವುಗಳು ಅವರ ನಿತ್ಯನೈಮಿತ್ತಿಕ ಕರ್ಮಗಳಾಗಿದ್ದವು. ಈಗಿನ ಕಾಲದವರಾದ ಸುಖವಾಸಿಗಳಾದ ನಾವಾದರೋ ಇದಕ್ಕೆ ವ್ಯತಿರಿಕ್ತವಾದ ಸ್ಥಿತಿಯಲ್ಲಿರುವೆ ವೆಂದರೂ ಅತಿಶಯೋಕ್ತಿಯಾಗಲಾರದು. ಇದಕ್ಕೆ ನಾವೇ ಕಾರಣರಲ್ಲದೆ ಕಾಲವಾಗಲಿ, ಧರ್ಮವಾಗಲಿ ಕಾರಣವಲ್ಲ. "ದುಃಖದವಿಗ್ರಹ" ನಿರ್ಭಾಗ್ಯರು (Statue of sorrow, unfortunate) ಎಂಬಭಿದಾನಗಳಿಂದ ನಮ್ಮಿಂದ ಸಂಬೋಧಿಸಲ್ಪಡುತ್ತಿರುವ, ಅಲಕ್ಷ್ಯವಾಗಿ ಭಾವಿಸಲ್ಪಡುತ್ತಿರುವ ಹಿಂದೂ ವಿಧವೆಯರಾದರೋ ತಮ್ಮ ಕಷ್ಟದುಃಖಗಳನ್ನು ತೃಣವಾಗಣಿಸಿ ತಮ್ಮ ಬಂಧುಗಳ ಮತ್ತು ನೆರೆಹೊರೆಯವರ ಸೇವೆಯನ್ನು ಭಕ್ತಿಶ್ರದ್ಧೆಯಿಂ ದಲೂ, ಸ್ವಾರ್ಥತ್ಯಾಗದಿಂದಲೂ ಮಾಡುತ್ತಾ ತೇಜಸ್ವಿಗಳಾದ ಬಾಲಸನ್ಯಾಸಿ ಗಳಂತೆ ಬೆಳಗುತ್ತಿದ್ದರು. ಒಂದು ಬೀದಿಯ ಅಥವಾ ಪೇಟೆಯ ಸುಧಾ ರಕ ಸ್ತ್ರೀಯರೆಲ್ಲರೂ ಒಂದುಗೂಡಿ (ಈಗ ನಾಲ್ಕಾರುಜನರೊಂದಾದರೆ ಒಂದಕ್ಷೋಹಿಣಿ ಕೂಡಿದಂತೆ ತಿಳಿಯಬೇಕು. ನಮ್ಮ ಐಕಮತ್ಯವಷ್ಟ ರಲ್ಲಿದೆ) ಒಂದು ಸಭೆ ಅಥವಾ ಸಂಘವನ್ನು ಸ್ಥಾಪಿಸಿ ಅದು ನಿರ್ವಿಘ್ನವಾಗಿ ನಡೆಯಲು ಬಹಳ ಕಷ್ಟಪಡುವರು. ಪ್ರಾಚೀನ ಮಹಿಳೆಯರು ಹೀಗಿ ದ್ದರೆ ? ಕೆಲವು ಜನ ಮಹಿಳೆಯರು ಒಂದುಗೂಡಿ ಕೆಲವು ಘಂಟೆಗಳ ಕಾಲದಲ್ಲಿ ಸಾವಿರಾರುಜನ ಅತಿಥಿಗಳಿಗೆ ಸ್ವಲ್ಪವೂ ಕಷ್ಟ ಬೇಸರಿಕೆಯಿಲ್ಲದೆ ಅಡಿಗೆಮಾಡುತಿದ್ದರು. ಈಗ ಗಂಡನು ತನ್ನನ್ನು ಕೇಳದೆ ಮನೆಗೆ ಇಬ್ಬರನ್ನು ಊಟಕ್ಕೆ ಕರೆತಂದ ಮಾತ್ರದಲ್ಲಿ ಅವನಿಗೆ ಎಷ್ಟು ವಾಕ್ಪ್ರ ಹಾರವೋ ? ಎಷ್ಟು ಪಾತ್ರೆಗಳು ಒಡೆಯಬೇಕೋ ? ಎಷ್ಟು ಮಕ್ಕಳು ಏಟು ತಿನ್ನಬೇಕೋ? ತನ್ನನ್ನೆಷ್ಟು ಬೈದುಕೊಳ್ಳಬೇಕೋ? ಹೀಗಾಗುವು ದನ್ನು ನಾವೆಷ್ಟೋಕಡೆ ನೋಡಿದೇವೆ. ನಾವು ಕಲಿತ ಗೃಹಿಣೀ ಧರ್ಮ ವಿದೇ ! "ಗೃಹಿಣೀ ಗೃಹಮುಚ್ಯತೆ" ಎನ್ನುವದು "ಗೃಹಣೀ ಗೃಹಮುಚ್ಛ್ಯ ತ್ತೆ"ಎಂದಾಗಿದೆ. ಅನೇಕಕಡೆ ಒದಿನ ನಿಮಿತ್ತ ಮನೆಯ ಸಂಸಾರವನ್ನು ಅಲಗಳೆಯುವರೆಷ್ಟ್ಟೇ? ಇಂತಹ ಪರಿಸ್ಥಿತಿಗೆ ನಾವೀಗ ಬಂದಿರುವೆವು. ಪಾಶ್ಚಾತ್ಯರು ಸಭೆಗಳನ್ನು ಕೂಡಿಸಲು ತೆಗೆದುಕೊಳ್ಳತಕ್ಕ ಕಾಲದಲ್ಲಿಯೂ, ಅಡಿಗೆ ಮಾಡಲು ತೆಗೆದುಕೊಳ್ಳತಕ್ಕ ಕಾಲದಲ್ಲಿಯೂ ನಾಲ್ಕರಲ್ಲೊಂದು

ಪೋಲುಕೂಡ ಇವರಿಗೆ ಅವಶ್ಯಕವಿಲ್ಲ. ನಮ್ಮಂತೆ ಅವರಿಗೆ ವಿಹಾರಸ್ಥಳಗಳೂ ಸಂಘಗಳೂ ಅವಶ್ಯಕವಿಲ್ಲದಿರಬಹುದು; ಆದರೆ ಗ್ರಾಮದ ಬಾವಿಯಬಳಿ (ಈಗಿನಂತೆ ಸುಖವಾಗಿ ಕುಳಿತ ಕಡೆ ನೀರು ಬರುವಂತೆ ನಲ್ಲಿಗಳಿರ ಲಿಲ್ಲ.) ನೀರು ಸೇದಲು ನಾನಾ ಮನೆಯ ಹೆಂಗಸರು ಬಂದಾಗಿ ಸೇರು ತಿದ್ದಾಗ ಸಾಮಾಜಿಕ, ಸಾಂಸಾರಿಕ, ಸುಧಾರಕ, ತಮ್ಮ ಗ್ರಾಮಕ್ಕೆ ಸಂಬಂ ಧಿಸಿದ ಇತರ ಮಾತುಗಳು, ಇವುಗಳ ವಿಷಯವಾಗಿ ಚರ್ಚಿಸಿ ಪರಸ್ಪರಾ ಭಿಯುಕ್ತವಾದ ತೀರ್ಮಾನಗಳನ್ನೂ, ಸಲಹೆಗಳನ್ನೂ ನಿರ್ಧರಿಸುತ್ತಿದ್ದರು. ಈಗ ಇಂತಹ ನಿರ್ಧಾರಗಳಿಗೂ, ತೀರ್ಮಾನಗಳಿಗೂ, ಸಭೆಗಳೂ, ಠರಾ ವುಗಳೂ ಅವಶ್ಯಕವಾಗಿದೆ. ಇಷ್ಟುಮಾಡಿದರೂ ಅವರಲ್ಲಿದ್ದ ಐಕಮತ್ಯವು ನಮ್ಮಲ್ಲಿಲ್ಲವೆಂದು ನಿಸ್ಸಂದೇಹವಾಗಿ ಹೇಳದೆಯೇ ತಿಳಿಯುವುದು. ಹಿಂದೂ ಮಹಿಳೆಯ ಚಿಂತನೆ, ಕಾರ್ಯ ಎಲ್ಲವೂ ಅವಳ ಕುಟುಂಬ ಮತ್ತು ಸಮಾಜ ದವರ ಹಿತಚಿಂತನೆಯಲ್ಲಿಯೇ ಲಯಿಸಿಹೋಗಿರುವುದು. ಗ್ರಾಮ ಕುಟುಂಬ ಗಳಲ್ಲಿ ಈರೀತಿ ಇರುವುದನ್ನು ನಾವೀಗಲೂ ನೋಡಬಹುದು.

ಪ್ರಾಚೀನಮಹಿಳೆಯರ ವಿಷಯವಾಗಿ ಇಷ್ಟುದೂರ ಹೇಳಿದ್ದು ನವನಾಗರಿಕವನ್ನಲಗಳೆಯಬೇಕೆನ್ನುವ ಅಥವಾ ದಿನದಿನಕ್ಕೆ ಹೆಚ್ಚುತ್ತಿ ರುವ ನೂತನೋತ್ಸಾಹವನ್ನು ಹೋಗಲಾಡಿಸಬೇಕೆನ್ನುವ ಉದ್ದೇಶ ದಿಂದಲ್ಲ. ಅಲ್ಲದೆ ಈಗ ನಾವಿರುವ ಸ್ಥಿತಿಯೇ ಉತ್ತಮವಾದುದೆಂದು ವಾದಿಸುವುದಕ್ಕೂ ಅಲ್ಲ. ನಮಗೆ ಇಂತಹ ಭಾವನೆಯೇ ಸ್ಥಿರವಾಗಿರುವು ದೆಂದು ಹೇಳಲಾಗುವುದಿಲ್ಲ. ವಿಶೇಷ ಪ್ರಯತ್ನಮಾಡದೆ, ಬದಲಾವಣೆ ಯಿಲ್ಲದೆ ಹಳೆಯ ಪದ್ಧತಿಗಳನ್ನು ಬಿಟ್ಟು ಹೊಸಪದ್ಧತಿಯನ್ನನುಸರಿಸುವು ದೇನೂ ಕಷ್ಟವಲ್ಲ. ಅನೇಕಕಡೆ ವಿಭಕ್ತ (joint family system) ಕುಟುಂಬ ಪದ್ಧತಿಯು ಬಹಳ ಖಿಲವಾಗಿರುವ ಈ ಕಾಲದಲ್ಲಿ ಸಮಾಜ ಸೇವೆಯಲ್ಲಿ ಮಹಿಳೆಯರಿಗಿರುವ ಅಧಿಕಾರವು ಮತ್ತಿಷ್ಟು ಹೆಚ್ಚಿ ತಮ್ಮ ಸ್ವಂತ ಕುಟುಂಬದಲ್ಲಿ ಮಾತ್ರವಲ್ಲದೆ ಸಹಾಯಾಪೇಕ್ಷಿಗಳಾದ ನೆರೆಹೊರೆ ಯವರ ಕ್ಷೇಮಚಿಂತನೆಯನ್ನೂ ನೋಡಬೇಕಾದ ಸಂದರ್ಭವು ಪ್ರಾಪ್ತವಾ ಗಿರುವುದು. ದಿನೇದಿನೇ ಹೊಸವಿಷಯಗಳನ್ನು ಕಲಿಯಲು ನಮ್ಮ ಮನಸ್ಸು ಉತ್ಸುಕಗೊಳ್ಳುವುದೆಂದು ಹೇಳುವುದು ಅಷ್ಟೇನೂ ಸರಿಯಲ್ಲ. ಆದರೆ

ಪುರುಷರು ಬೇಡವೆಂದು ಬಿಟ್ಟಿರುವ ಕೆಲವು ವಿಷಯಗಳನ್ನು ಕಲಿಯುವ ಅಪೇಕ್ಷೆಯು ಒಂದೊಂದು ಸಲ ಉಂಟಾಗುವುದು ಸಹಜವೇ. ಆದುದರಿಂದಲೇ ಪ್ರಕೃತ ಏರ್ಪಡಿಸಲ್ಪಟ್ಟಿರುವ ವಿದ್ಯಾಭ್ಯಾಸವು ಜ್ಞಾನಾರ್ಜನೆಗಲ್ಲದೆ ಧನಾರ್ಜನಾಸಾಧಕವಾದುದೆಂದೂ, ಅಂತಹವಿದ್ಯಾಭ್ಯಾಸವು ನಮ್ಮ ಮಹಿಳೆಯರಿಗೆ ಅವಶ್ಯಕವಿಲ್ಲವೆಂದೂ ಅನೇಕರು ಅಭಿಪ್ರಾಯಪಡುವರು. ಅಂತಹ ವಿದ್ಯಾಭ್ಯಾಸದಿಂದ ಸಮಾಜಸೇವೆಗಾಗಲಿ ಕುಟುಂಬ ಸಂರಕ್ಷಣೆಗಾಗಲಿ ಮತ್ಯಾವ ಸದ್ವಿಷಯಕ್ಕಾಗಲಿಸಹಾಯವಾಗುವುದಿಲ್ಲವೆಂದು ಮತ್ತೆ ಕೆಲವರು ಅಭಿಪ್ರಾಯಪಡುವರು. ಯೋಚಿಸಿ ನೋಡಿದರೆ ಈ ವಿಷಯವು ನಿಶ್ಚಯವೆಂದೇ ತೋರುವುದು. ನಮ್ಮ ಸಹೋದರರು ಅನೇಕ ವರ್ಷಗಳಾದ ನಂತರ ಬಹಳ ದ್ರವ್ಯ ವ್ಯಯಮಾಡಿ ಕೂಡಿಸಿದ ಸಭೆಗಳ, ಶಾಲೆಗಳ, ವಿದ್ಯಾನಿಲಯಗಳ, ಸಂಘಗಳ ಮೂಲಕವಾಗಿ ರಾತ್ರೀ ಹಗಲೂ ಕಷ್ಟಪಟ್ಟು ಎದೆಯೊಡೆದುಕೊಂಡು ಗ್ರಂಥಾವಲೋಕನಮೂಲಕ ಕಲಿಯಲೆತ್ನಿಸುತ್ತಿರುವ ವಿದ್ಯಾಭ್ಯಾಸವು ಪ್ರಾಚೀನಕಾಲದಲ್ಲಿ ತಾಯಿಯ ಸ್ತನ್ಯಪಾನದ ಮೂಲಕ ಮಕ್ಕಳಿಗೆ ಉಂಟಾಗುತ್ತಿತ್ತು. ನಾಗರಿಕತೆಯ, ಕೇವಲ ಶೃಂಗಾರ ದೇವತೆಯ, ಸುಖದೇವತೆಯ ಉಪಾಸಕರಾದ ದುರ್ಬಲರಾದ ಈಗಿನ ಕಾಲದ ತಾಯಿಯರಿಂದ ಮಕ್ಕಳಿಗೆ ಹೊಟ್ಟೆಯತುಂಬ ಹಾಲಿಗೇ ಮಾರ್ಗವಿಲ್ಲದೆ ವಿದೇಶದಿಂದ ತಯಾರಿಸಲ್ಪಟ್ಟ ನಾನಾವಿಧವಾದ ಆಹಾರಪದಾರ್ಥಗಳಿಗೆ ಕೈಯೊಡ್ಡಿನಿಂತಿರುವಾಗ ಅಂತಹ ಜ್ಞಾನವು ಈಗಿನ ಜನಾಂಗಕ್ಕೆಲ್ಲಿಂದಬರಬೇಕು? ನಾವು ಯಾವಾಗ ಸುಖದೇವತೆಯ ಉಪಾಸಕರಾಗಲು ತೊಡಗಿದೆವೋ ಅಲ್ಲಿಗೆ ನಮ್ಮಲ್ಲಿದ್ದ ಪ್ರಾಶಸ್ತ್ಯ ಜನನೀತ್ವ,ಜ್ಞಾನತ್ವಗಳೆಲ್ಲವೂ ನಾಶವಾದವು. ಇದಕ್ಕೆ ಪೌರಾಣಿಕಕಥೆಗಳೇ ಸಾಕ್ಷಿ. ನಮ್ಮ ಈ ವಿಧವಾದ ದುರವಸ್ಥೆಯಿಂದ ಯಾವಕಾರ್ಯಕ್ಕೂ ಪ್ರಯೋಜನವಿಲ್ಲದವರಾಗಿ ಭಾವಿಸಲ್ಪಟ್ಟಿರುವೆವು ನಮಗೆ ಪ್ರಾಕೃತಿಕ ಮತ್ತು ಬುದ್ಧಿವಿಕಾಸತೆಗನುಕೂಲವಾದ ಕೆಲಸವನ್ನೊಪ್ಪಿಸಿದನಂತರ ಇದರಿಂದ ಇತರರರಿಗೆ ಸಹಾಯವಾಗುವುದೇ ಇಲ್ಲವೇ ಎನ್ನುವ ವಿಷಯವನ್ನು ತೀರ್ಮಾನಿಸಲಿ. ಪ್ರಾಚೀನಾರ್ಯರಮಣಿಯು ಗುರುಶಿಕ್ಷಣವಿಲ್ಲದೆ ಕಲಿತಷ್ಟು ವಿದ್ಯೆಯು ಈಗ ಶಾಲೆಯಲ್ಲಿ ಕಲಿತವರಿಗೆ ಇಲ್ಲವೆಂದು ಹೇಳಬಹುದಾಗಿದೆ. ಗರ್ಭಿಣೀಶಿಶುಸಂರಕ್ಷಣಶಾಲೆಗಳು, ದೊಡ್ಡದೊಡ್ಡಹೆಂಗಸರು ಕಲಿಯಲನುಕೂಲವಾದ ಶಾಲೆಗಳು,

ಸಂಘವೇ ಮೊದಲಾದವುಗಳು ಕೇವಲ ಸ್ತ್ರೀಯರ ಮಹಸತ್ತಿನಿಂದಲೇ ಎಷ್ಟು ತೃಪ್ತಿಕರವಾಗಿ ನಡೆಸಲ್ಪಡುವುದೆನ್ನುವುದು ಸರ್ವರೂ ಅರಿತ ವಿಷಯುವೇ ಆಗಿರುವುದು. ಬೆಂಗಳೂರು, ಮೈಸೂರು ಪಟ್ಟಣಗಳಲ್ಲಿರುವ ಸ್ತ್ರೀ ಸಂಘಗಳು, ಪೂನಾಪಟ್ಟಣದ ಸೇವಾಸದನ, ಮದರಾಸಿನ ಕ್ವೀನ್‌ಮೇರೀಸ್ ಕಾಲೇಜ್ ಮೊದಲಾದವುಗಳು ಇದಕ್ಕೆ ಸಾಕ್ಷಿ. ತಮ್ಮ ತಮ್ಮ ನೆರೆಹೊರೆಯವರಿಗೆ ಸಂಬಂಧಿಸಿದ ಪೌರಸಾಮಾಜಿಕಕಾರ್ಯಗಳಲ್ಲಿ ಮಹಿಳೆಯರು ಹೇಗೆ ತರಬೇತಾಗಬೇಕೆನ್ನುವ ಪ್ರಶ್ನೆಯ ಉತ್ತರವನ್ನು ನಾವೀಗ ಯೋಚಿಸಬೇಕಾಗಿದೆ. ಇಲ್ಲಿನ ಸಹೋದರಿಯರ ಪ್ರೇಮ, ಸಹಾನುಭೂತಿ, ಸರಳಹೃದಯ ಮೊದಲಾದ ಸುಗುಣಗಳು ನನ್ನ ಹೃದಯದಲ್ಲಿ ಬೇರೂರಿ ನಿಂತಿರುವವು. ಈ ಪಟ್ಟಣದಲ್ಲಿ ನನಗೆ ಬಳಕೆಯಾಗಿರುವ ಸಹೋದರಿಯರ ನಡೆನುಡಿಗಳ ವಿಷಯದಲ್ಲಿನ ಅನುಭವದಿಂದಲೂ ಬೆಂಗಳೂರಿನ ಸ್ತ್ರೀಸಂಘದಲ್ಲಿ ಕೆಲಸಮಾಡಿದ ಅನುಭವದಿಂದಲೂ ಈ ಕೆಳಗೆ ಕೊಟ್ಟಿರುವ ಕಾರ್ಯಕ್ರಮವು ಸುಲಭವಾದುದೆಂದು ನನಗೆ ತೋರುವುದು.

## ಮಹಿಳೆಯರ ಸೇವಾಗೃಹ (Women's Home of Service)

ಪೂರ್ವದಂತೆ ಮಹಿಳೆಯರು ಕೆರೆಗಾಗಲಿ, ಬಾವಿಗಾಗಲಿ ನೀರು ತರಲುಹೋಗಿ ಒಂದುಕಡೆ ಸೇರುವುದು ವಿರಳ(ಪಟ್ಟಣಗಳಲ್ಲಿ ಇಲ್ಲವೇ ಇಲ್ಲವೆಂದು ಹೇಳಬಹುದು) ವಾಗಿರುವುದರಿಂದ ಎಲ್ಲರೂ ಒಂದುಗೂಡಲು ಒಂದು ಸ್ಥಳವನ್ನೇರ್ಪಡಿಸಬೇಕು. ಐಶ್ವರ್ಯವಂತರಾದ ಮಹಿಳೆಯರೂ, ಮಧ್ಯಮತರಗತಿಯ ಮಹಿಳೆಯರೂ ಯಾವುದಾದರೊಂದುದ್ದೇಶದಿಂದ ಒಂದುಕಡೆ ಸೇರಿ ತಮ್ಮ ತಮ್ಮ ಜನಾಂಗಕ್ಕೆ ಸಂಬಂಧಪಟ್ಟ ಮತ್ತು ಇತರ ವಿಷಯಗಳನ್ನು ಚರ್ಚಿಸಿ ಪರಸ್ಪರಾಭಿಪ್ರಾಯಗಳನ್ನು ತಿಳಿದುಕೊಳ್ಳುವಂತೆ ಮಾಡಲನುಕೂಲವನ್ನು ಕಲ್ಪಿಸುವುದು ಒಂದು ದೊಡ್ಡ ಕೆಲಸ. ಹೀಗೆ ಒಬ್ಬರಿಗೊಬ್ಬರು ಸೇರಲನುಕೂಲವಾಗುವುದರಿಂದ ಅನೇಕ ಪ್ರಯೋಜನಗಳಾಗಬಹುದು. ಅವು ಯಾವುವೆಂದರೆ: ಜನಾಂಗಕ್ಕೆ ಸಂಬಂಧವಾದ ವಿಷಯಗಳಿಗೆ ಗಮನಕೊಡುವುದು. ಇದಂತೆ ಕೆಲವು ದಿನಗಳಾದನಂತರ ರಾಜ್ಯಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ, ರಾಜ್ಯಾಭಿವೃದ್ಧಿಯ ವಿಷಯದಲ್ಲಿ ಸಮಯೋಚಿತವಾದ ಸಲಹೆಗಳನ್ನು ಕೊಟ್ಟು ನಮ್ಮ ಸಹೋದರರು

ಓಂ

# ಸರಸ್ವತಿ

ಸಂಪುಟ ೫ } ಕ್ರೋಧನ ವರ್ಷ—ಆಷಾಢ ಮಾಸ { ಸಂಚಿಕೆ ೩

## ನೀವು ಯಾರು ?



ನೀವಿಂದು ಪ್ರಪಂಚವ್ಯವಹಾರವನ್ನರಿಯದ ಮಕ್ಕಳು; ನಾಳೆಯದಿನ ಬಾಲಕಿಯರಾಗುವಿರಿ; ಇನ್ನೂ ಕೆಲವು ದಿನಗಳಲ್ಲಿ ಹುಡುಗಿಯರಾಗುವಿರಿ ಮತ್ತೆ ಕೆಲವು ದಿನಗಳಲ್ಲಿ ನೀವೂ ಸ್ತ್ರೀಯರಾಗುವಿರಿ. ಈಗಲೋ ದೋಷರಹಿತವಾದ ಬಾಲ್ಯಚೇಷ್ಟೆಗಳನ್ನು ಮಾಡುತ್ತಾ ಆನಂದದಿಂದ ತಂದೆ ತಾಯಿಗಳ ಮನೆಯಲ್ಲಿ ಕೋಲಾಹಲದಿಂದಾಟವಾಡುತ್ತಿರುವಿರಿ. ನಿಮ್ಮ ಅಣ್ಣತಮ್ಮಂದಿರೊಡನೆಯೂ, ಅಕ್ಕತಂಗಿಯರೊಡನೆಯೂ, ಪಕ್ಕದಮನೆ ಎದಿರುಮನೆಯ ಹುಡುಗಿಯರೊಡನೆಯೂ ಆಟವಾಡುತ್ತಾ ಸಂತೋಷದಿಂದ ಕಾಲಕಳೆಯುತ್ತಿರುವಿರಿ. ಅತ್ತೆಯ ಮನೆಗೆ ಹೋದಮೇಲೆಯೂ ಕೂಡ ನಿಮ್ಮ ಸದ್ಗುಣ ಸನ್ಮಾರ್ಗಗಳಿಂದಾವೃತರಾಗಿ ಆನಂದಮಯವಾಗಿ ಕಾಲಕಳೆಯುವಿರಿ. ತರುವಾಯ ನೀವು ಪುತ್ರವತಿಯರಾಗಿ ನಿಮ್ಮ ಸ್ವಂತ ಗೃಹಗಳನ್ನು ಆನಂದಸದನ, ಸುಖಾವಾಸವನ್ನಾಗಿ ಮಾಡುವಿರೆಂಬುದರಲ್ಲಿ ಸಂಶಯವಿಲ್ಲ. ದೇಶಕ್ಕೆ ಸುಖ ಸಂತೋಷಗಳನ್ನುಂಟುಮಾಡುವ ಉದ್ದೇಶದಿಂದಲೇ ಈಶ್ವರನು ನಿಮ್ಮನ್ನು ಸೃಷ್ಟಿಸಿರುವನು. ಆನಂದ, ಸೌಖ್ಯ, ಭಾಗ್ಯ, ಇವುಗಳನ್ನು ಜಗತ್ತಿಗೆ ಪೂರ್ಣವಾಗಿ ಕೊಡತಕ್ಕವರು ನೀವುಗಳು. ಇವುಗಳನ್ನುಂಟುಮಾಡುವ ಶಕ್ತಿಯು ನಿಮ್ಮಲ್ಲಿರುವುದು; ಆದರೆ ಇವುಗಳನ್ನರಿತವರಾರು ?

ಈ ಪ್ರಪಂಚವೇ ಒಂದು ನಾಟಕರಂಗ, ಸಂಸಾರವೊಂದು ನಾಟಕ. ಜನಗಳು ಈ ನಾಟಕದಲ್ಲಿ ಬರತಕ್ಕ ಪಾತ್ರಗಳು. ಉತ್ತಮ ಪಾತ್ರವನ್ನು ವಹಿಸಿ ರಂಗಸ್ಥಳದಲ್ಲಿ ನಿಪುಣತೆಯಿಂದಲೂ, ಉತ್ತಮರೀತಿಯಿಂದಲೂ ಅಭಿನಯಿಸತಕ್ಕವರಿಗೆ ರಂಗ

ಸ್ಥಳದಲ್ಲಿಯೂ ಜನಸಮೂಹದಲ್ಲಿಯೂ ಸತ್ಕೀರ್ತಿಯು ಲಭಿಸುವುದಲ್ಲದೆ ಒಳ್ಳೆಯ ಹೆಸರು ಬರುವುದು ಪ್ರಿಯ ಸಹೋದರಿಯರೇ ! ಪ್ರಪಂಚರೂಪವಾದ ನಾಟಕ ರಂಗದಲ್ಲಿ ಸಂಸಾರರೂಪವಾದ ನಾಟಕದಲ್ಲಿ ನೀವೂ ನಾನಾಪಾತ್ರಗಳನ್ನು ವಹಿಸಿ ನಟಿಸಬೇಕಾಗಿರುವುದಲ್ಲವೇ ?

ನಾಟಕಕ್ಕೆ ಜೀವವೂ ಸಾರವೂ ತೇಜಸ್ಸೂ ಉಂಟಾಗಬೇಕಾದರೆ ಸ್ತ್ರೀಪಾತ್ರ ದಿಂದಲ್ಲದೆ ಪುರುಷ ಪಾತ್ರದಿಂದಲ್ಲ. ಸ್ತ್ರೀಪಾತ್ರಗಳು ತಾವು ವಹಿಸಿರುವ ಪಾತ್ರ ವನ್ನು ನಿಪುಣತೆಯಿಂದ ಅಭಿನಯಿಸಿ ಉತ್ತಮರೀತಿಯಿಂದ ನಟಿಸುವ ಪಕ್ಷದಲ್ಲಿ ನಾಟಕವು ಸ್ವಾರಸ್ಯವಾಗಿ ಜನರಂಜಕವಾಗಿರುವುದು. ಪ್ರಪಂಚರೂಪವಾದ ಈ ನಾಟಕರಂಗದಲ್ಲಿ ಸಂಸಾರರೂಪವಾದ ನಾಟಕಕ್ಕೆ ಸ್ತ್ರೀಯರ ಯೋಗ್ಯತೆ, ಆತ್ಮತೇಜಸ್ಸು ಇವುಗಳಿಂದ ಮಾತ್ರವೇ ಪ್ರಾಶಸ್ತ್ಯವೂ, ಗಣ್ಯವೂ, ಗೌರವವೂ, ಉಂಟಾಗುವವು- ಇಷ್ಟುಮಾತ್ರವಲ್ಲ; ಈ ನಾಟಕದಲ್ಲಿ ಸ್ತ್ರೀಯರು ಸಮಯೋಚಿ ತವಾದ ಪಾತ್ರಗಳನ್ನು ವಹಿಸಿ ನಟಿಸುವ ಪಕ್ಷದಲ್ಲಿ ನಾಟಕಕ್ಕೆ ಕೀರ್ತಿಯುಂಟಾ ಗುವುದು.

ಹುಟ್ಟಿದ ಮನೆಯಲ್ಲಿ ಚಂಚಲಬುದ್ಧಿಯುಳ್ಳ ಬಾಲಿಕೆಯರ ಪಾತ್ರಗಳನ್ನು ವಹಿಸಿ ನಿಮ್ಮ ತಾಯಿ ತಂದೆ, ಸೋದರಸೋದರಿಯರನ್ನು ಸಂತೋಷಪಡಿಸಬೇಕಾ ಗಿರುವುದು. ಅತ್ತೆಯಮನೆಯಲ್ಲಿ ಸೊಸೆ, ಓರಗಿತ್ತಿ ಮೊದಲಾದ ಪಾತ್ರಗಳನ್ನು ವಹಿಸಬೇಕಾಗಿರುವುದು. ಸ್ವಂತಗೃಹದಲ್ಲಿ ಕ್ರಮವಾಗಿ ಪತ್ನಿ, ಗೃಹಿಣಿ, ತಾಯಿ, ಅತ್ತೆ ಮೊದಲಾದ ವೇಷಗಳನ್ನು ಧರಿಸಿ ನಟಿಸಬೇಕಾಗಿರುವುದು. ವೇಷಧರಿಸು ವುದು ಒಂದೇ ವ್ಯಕ್ತಿಯಾದರೂ ವೇಷವೂ, ವೇಷದ ಕರ್ತವ್ಯವೂ ಅನೇಕ ವಿಧ ವಾಗಿರುವುದರಿಂದ ಈ ಪಾತ್ರಗಳನ್ನು ವಹಿಸುವುದು ಅತಿಕಷ್ಟವೇ. ಇಷ್ಟೊಂದು ಪಾತ್ರಗಳನ್ನೂ ವಹಿಸಿ ಕುಂದುಕೊರತೆಗಳಿಲ್ಲದೆ ನಿರ್ವಹಿಸುವ ವಿವೇಕವೂ ಚಾತು ರ್‍ಯವೂ ಇದ್ದ ಹೊರ್ತು ನಾಟಕವು ಶೋಭಿಸದು. ಈ ಪಾತ್ರಗಳನ್ನು ನೀವು ಸರಿಯಾಗಿ ಅಭಿನಯಿಸಿದರೆ ಎಲ್ಲರೂ ನಿಮ್ಮನ್ನು ಹೊಗಳುವರು. ನಾಟಕಕ್ಕೂ ಒಳ್ಳೆಯ ಹೆಸರು ಬರುವುದು.

ಈ ಪ್ರಪಂಚ ನಾಟಕದಲ್ಲಿ ಪಾತ್ರವನ್ನು ವಹಿಸಿ ಉತ್ತಮ ರೀತಿಯಿಂದ ಅಭಿ ನಯಿಸಬೇಕಾಗಿದ್ದರೆ ಕಾಳಿದಾಸ, ಭವಭೂತಿ ಷೆಲ್ಲಿ (Shelly), ಬೈರನ್ (Byron) ಷೇಕ್ಸ್‌ಪಿಯರ್ (Shakespeare) ಮೊದಲಾದ ನಾಟಕ ಕರ್ತರಿಂದ ನೀವು ಕಲಿ ಯಬೇಕಾದುದೇನೂ ಇಲ್ಲ. ದಿವಾರಾತ್ರಿಯೂ ನಿಮ್ಮ ಕಣ್ಣುಗಳ ಮುಂದೆ ನಿಂತಿ ರುವ ಸಂಸಾರವೇ ನಿಮಗೆ ಬೇಕಾದುದನ್ನು ಕಲಿಸುವುದು. ಈ ಸಂಸಾರದಲ್ಲಿ ಮನಸ್ಸಿಟ್ಟು ಪ್ರತಿಯೊಂದು ಕಾರ್ಯವನ್ನೂ ಮನಃಪೂರ್ವಕವಾಗಿ ಅಭ್ಯಾಸ ಮಾಡಿದರೆ ನಿಮ್ಮ ಪಾತ್ರಗಳನ್ನು ತಕ್ಕರೀತಿಯಲ್ಲಿ ವಹಿಸಿ ನಡೆಸಬಹುದು. ಕಣ್ಣು

ಗಳನ್ನು ಯಾವಾಗಲೂ ತೆರೆದೇ ಇರಬೇಕಲ್ಲದೆ ಅಂತಃಕರಣ ಶುದ್ಧಿಯಾಗಿರಬೇಕು. ಹೀಗೆ ಮಾಡಿದರೆ ನೀವು ಕೂಡುವಾಗಲೂ, ನಿಲ್ಲುವಾಗಲೂ, ನಿದ್ರೆಮಾಡುವಾಗಲೂ, ಊಟಮಾಡುವಾಗಲೂ, ಕೆಲಸಮಾಡುವಾಗಲೂ ಸಂಸಾರದಲ್ಲಿ ನಿಮಗೆ ಬೇಕಾದುದನ್ನು ಕಲಿಯಬಹುದು.

ಸಂಸಾರದಲ್ಲಿ ನಡೆಯತಕ್ಕ ಪ್ರತಿಯೊಂದು ಕಾರ್ಯಗಳ ಮೂಲಕವಾಗಿಯೂ ನೀವು ಪ್ರಪಂಚವ್ಯವಹಾರವನ್ನು ಸ್ವಲ್ಪಸ್ವಲ್ಪವಾಗಿ ಕಲಿಯಬಹುದು. ಸದ್ಗ್ರಂಥಗಳನ್ನೋದುವುದರಿಂದ ಸಂಸಾರದಲ್ಲಿ ಉತ್ತಮರೀತಿಯಿಂದ ವರ್ತಿಸಬಹುದು. ಸದ್ಗ್ರಂಥಗಳ ಸಹವಾಸವು ಬೇಕಾಗಿದ್ದಲ್ಲಿ ವಿದ್ಯೆಯನ್ನು ಕಲಿಯತಕ್ಕದ್ದು ಅತ್ಯಾವಶ್ಯಕವು. ಪ್ರತಿಯೊಬ್ಬ ರಮಣಿಯೂ ಉತ್ತಮಗೃಹಿಣಿಯಾಗಬೇಕಾಗಿದ್ದಲ್ಲಿ ವಿದ್ಯೆಯು ಅತ್ಯಾವಶ್ಯಕವಾಗಿ ಬಂದಿರಬೇಕು. ಆಗ ನೀವು ಪಿತೃ ಗೃಹದಲ್ಲಿ ವಿವೇಕವತಿಯಾದ ಪುತ್ರಿಯಾಗಿಯೂ, ಪತಿಗೃಹದಲ್ಲಿ ಉತ್ತಮ ಪತ್ನಿಯಾಗಿಯೂ ಗೃಹಿಣಿಯಾಗಿಯೂ, ಪುತ್ರವತಿಯಾದನಂತರ ಉತ್ತಮ ಮಾತೆಯಾಗಿಯೂ ಆಗಬಹುದು.

ಪ್ರಿಯ ಬಾಲಕಿಯರೇ! ಈಶ್ವರನ ವಿಶೇಷ ಕೃಪಾಕಟಾಕ್ಷದಿಂದ ನೀವು ಸ್ತ್ರೀಜನ್ಮವನ್ನು ವಹಿಸಿ ಧನ್ಯರಾಗಿರುವಿರಿ. ದೇಶಕ್ಕೆ ಆಧಾರಸ್ತಂಭಗಳಂತಿರುವ ಪ್ರಜೆಗಳನ್ನು ಸೃಷ್ಟಿಸತಕ್ಕವರು ನೀವೇ. ಇಷ್ಟುಮಾತ್ರವಲ್ಲದೆ, ಅವರನ್ನು ಬಲಿಷ್ಟರನ್ನಾಗಿ ಮಾಡುವುದಕ್ಕೂ, ಉತ್ತಮ ಪ್ರಜೆಗಳಾಗುವುದಕ್ಕೂ, ಸತ್ಕಾರ್ಯಗಳನ್ನು ಮಾಡುವುದರ ಮೂಲಕ ಯಶೋವಂತರಾಗಲು ಪ್ರೇರೇಪಿಸುವುದಕ್ಕೂ ಸಾಧನವಾದ ಶಕ್ತಿಯು ನಿಮ್ಮಲ್ಲೇ ಅಡಗಿರುವುದು. ದೇಶವನ್ನು ಉನ್ನತ ಸ್ಥಿತಿಗೆ ತರುವ ಸಾಮರ್ಥ್ಯವನ್ನೂ, ಭಾಗ್ಯವನ್ನು ಹೆಚ್ಚಿಸುವ ಶಕ್ತಿಯನ್ನೂ ಪರಮೇಶ್ವರನು ನಿಮ್ಮ ಕೈಯಲ್ಲಿತ್ತಿರುವನು. ಆದುದರಿಂದ ನಿಮ್ಮ ಜನ್ಮವೇ ಅತಿ ಶ್ರೇಷ್ಠವಾದುದೆನ್ನುವುದರಲ್ಲಿ ಸಂಶಯವಿಲ್ಲ. ಆದರೆ ನಮ್ಮ ಅಜ್ಞಾನದಿಂದ ನಾವು ಕೆಲಸಕ್ಕೆ ಬಾರದವರೆಂದು ನಮ್ಮನ್ನು ನಾವೇ ಹೀಯಾಳಿಸಿಕೊಂಡು ನಮ್ಮ ಮನೆಯಲ್ಲಿರುವ ಇತರ ಹೆಣ್ಣುಮಕ್ಕಳನ್ನೂ "ಅಯ್ಯೋ! ನಿರ್ಭಾಗ್ಯ ಹೆಣ್ಣೇ! ದುರಾದೃಷ್ಟಹುಡುಗಿಯೇ!" ಎಂದು ಸಂಬೋಧಿಸುತ್ತಾ ಅವರನ್ನು ಮತ್ತಿಷ್ಟು ಅಧಃಪಾತಾಳಕ್ಕೆ ತಳ್ಳುವ ಸ್ಥಿತಿಯನ್ನು ನಾವೇ ತರುವೆವು. ಬಾಲಕಿಯರೇ! ನೀವು ಹಾಗೆ ಮಾಡುವಿರಾ? ಈ ಉನ್ನತಪದವಿಯನ್ನು ಪರಿಪಾಲಿಸಲು ಬಾಲ್ಯದಿಂದಲೂ ಶಾಂತ ದಯಾಗುಣಭರಿತರಾಗಿರಬೇಕೆನ್ನುವುದನ್ನು ನೀವು ಯಾವಾಗಲಾದರೂ ಯೋಚಿಸಿನೋಡಿದಿರಾ? ನಿಮ್ಮ ಜವಾಬ್ದಾರಿಯಾದ ಕೆಲಸವನ್ನು ಸರಿಯಾಗಿ ನಿರ್ವಹಿಸುವುದಕ್ಕೂ, ಉತ್ತಮ ಗೃಹಿಣಿಯಾಗುವುದಕ್ಕೂ ಪುರುಷರಿಗಿಂತ ಹೆಚ್ಚು ವಿದ್ಯೆಯನ್ನು ನೀವು ಕಲಿಯಬೇಕಾಗಿರುವುದೆನ್ನುವುದನ್ನು ತಿಳಿದುಕೊಳ್ಳಿ. ಪ್ರಸ್ತುತ ಪ್ರಚಾರದಲ್ಲಿರುವ ಪುರುಷರ ವಿದ್ಯಾಭ್ಯಾಸಕ್ರಮವನ್ನನುಸರಿಸುವುದರಿಂದ ನಿಮಗೆ ತಕ್ಕ ಅಭಿವೃದ್ಧಿಯನ್ನು

ಹೊಂದಲು ಅಸಾಧ್ಯವೆನ್ನುವುದನ್ನು ತಿಳಿದುಕೊಳ್ಳಿ. ಅಮೂಲ್ಯವೂ ಜವಾಬ್ದಾರಿಕೆಯೂ ಉಳ್ಳ ನಿಮಗೆ ಭಗವಂತನಿಂದ ಕೊಡಲ್ಪಟ್ಟಿರುವ ಕಾಲವನ್ನು ಪುರುಷರಂತೆ ಪಾಠಶಾಲೆಗಳಲ್ಲಿ ಬಹಳ ದಿನ ಕಳೆಯಲು ನಿಮಗವಕಾಶವಿಲ್ಲವೆನ್ನುವುದನ್ನು ತಿಳಿದುಕೊಳ್ಳಿ.

ಚಿಕ್ಕವಯಸ್ಸಿನಿಂದಲೇ ಅಂದರೆ ಪಿತೃಗೃಹದಲ್ಲಿರುವಾಗಲೇ ನೀವು ವಿದ್ಯೆಯನ್ನಭ್ಯಾಸಮಾಡತೊಡಗಬೇಕು. ಪಿತೃಗೃಹದಲ್ಲಿ ಪುತ್ರಿ, ಪತ್ನಿ, ತಾಯಿ ಮೊದಲಾದ ವೇಷಗಳನ್ನಭ್ಯಾಸಿಸಿ ಪತಿಗೃಹಕ್ಕೆ ಹೋದಮೇಲೆಯೂ ಆ ಅಭ್ಯಾಸಗಳನ್ನು ಮಾಡುತ್ತಿರಬೇಕು. ಈಶ್ವರಾನುಗ್ರಹದಿಂದ ನಿಮ್ಮ ಗರ್ಭದಲ್ಲಿ ಪುತ್ರರತ್ನಗಳುದ್ಭವಿಸಿದರೆ ಅವರಿಗೂ ಇಂಥ ಅಭ್ಯಾಸವನ್ನೇ ಮಾಡಿಸಬೇಕು. ಪುತ್ರವತಿಯರಾದ ನಂತರ ನೀವು ವಹಿಸಬೇಕಾದ ಜವಾಬ್ದಾರಿಯ ವಿಷಯವನ್ನು ಯೋಚಿಸಿನೋಡಿ. ಅಂದಿನಿಂದ ನಿಮಗೆ ನೀವೇ ಗುರುಗಳು. ನಿಮ್ಮ ಸಂತತಿಗೂ ನೀವೇ ಗುರುಗಳು. ಇಷ್ಟಲ್ಲದೆ ದೇಶಕ್ಕೇ ನೀವು ಪೂಜ್ಯಗುರುಗಳು. ನೀವು ಎಂತಹ ಉತ್ತಮ ಸಂತತಿಯನ್ನುಂಟುಮಾಡುವರೆ ದೇಶಕ್ಕೆ ಅಂತಹ ಫಲವುಂಟಾಗುವುದು.

ಗೌರಿಯ ಮಗ, ಸೀತೆಯ ಮಗ, ಲಕ್ಷ್ಮಿಯ ಮಗ, ಕಾವೇರಿಯ ಮಗ ಎಂದು ಜನರು ಹೊಗಳುವರಾದರೆ ಆ ಕೀರ್ತಿಯು ಯಾರನ್ನು ಸೇರಿದ್ದು ? ತಾಯಿಯರಾದ ನಿಮಗಲ್ಲವೇ ! ಶಾವರ್ತಿಯ ಮಗ ಅವನ ತಾಯಿಯ ಶಿಕ್ಷಣದಿಂದ ಖ್ಯಾತಿಹೊಂದಿದನು. ಜಾನಕಿಯ ಮಗ ಕೆಟ್ಟು ತಾಯಿಯ ಮಾತನ್ನು ಕೇಳಿ ಉನ್ನತಸ್ಥಿತಿಗೆಬಂದನು. ಗೌರಿಯ ಮಗನಾದ ನಾರಾಯಣನು ತಾಯಿ ಬೋಧನೆಯಿಂದ ಉನ್ನತಪದವಿಗೆ ಬಂದಿದ್ದಾನೆ, ಎಂದು ಎಲ್ಲರೂ ಹೊಗಳುವರು. ಸನ್ಮಾರ್ಗವನ್ನು ಬೋಧಿಸುವ ಪಕ್ಷಕ್ಕೆ ಅವರು ತಮ್ಮ ಕುಟುಂಬಕ್ಕೆ ಕೀರ್ತಿಯನ್ನು ತರುವಂತಲ್ಲದೆ ದೇಶಕ್ಕೂ ಒಳ್ಳೆಯ ಹೆಸರನ್ನು ಗಳಿಸುವರು. ನಿಮ್ಮ ದೇಶವು ಯಾವ ವಿಧವಾಗಿ ಪ್ರಾಬಲ್ಯಕ್ಕೆ ಬಂದಿತೆನ್ನುವುದನ್ನರಿತು ಸುತ್ತುಮುತ್ತಲಿನವರೂ ನಿಮ್ಮಂತಾಗಲು ಪ್ರಯತ್ನಿಸುವರಾದರೆ ರಾಷ್ಟ್ರವು ಉನ್ನತಸ್ಥಿತಿಗೆ ಬರಲಾರದೆ ? ಬಾಲಕಿಯರೇ ! ನಿಮ್ಮ ಮಕ್ಕಳು ಸಭೆಗಳು, ಸಂಘಗಳು, ದೇಶ, ಇವುಗಳನ್ನು ಉನ್ನತಸ್ಥಿತಿಗೆ ತರುವ ಸೂತ್ರವು ನಿಮ್ಮ ಕೈಯಲ್ಲೇ ಇರುವುದು.

ಶಿವಾಜಿ ಮಹಾರಾಜನ ತಾಯಿಯಾದ ಜೀಜೀಬಾಯಿಯು ಶಿವಾಜಿಯನ್ನು ಶಿಕ್ಷಿಸಿ ಮಹಾರಾಷ್ಟ್ರದೇಶಕ್ಕೇ ಶಾಶ್ವತವಾದ ಕೀರ್ತಿಯನ್ನೂ, ನೆಪೋಲಿಯನ್ನನ ಮಾತೆಯು ನೆಪೋಲಿಯನ್ನನ್ನು ಪಡೆದು ಜನಕದೇಶಕ್ಕೆ ಕೀರ್ತಿಯನ್ನೂ ತಂದು ತಮ್ಮ ಜನ್ಮವನ್ನು ಸಾರ್ಥಕಪಡಿಸಿಕೊಂಡರು. ನೀವೂ ಅವರಂತೆಯೇ ರಾಜಾರಾಮ ಮೋಹನರಾಯ, ಬಂಕಿಮಚಂದ್ರಚಟರ್ಜೀ, ಬಾಬು ರಮೇಶಚಂದ್ರದತ್ತ, ಮಹರ್ಷಿ ದೇವೇಂದ್ರನಾಥಠಾಗೋರ್, ಕವಿಕುಲ ರವೀಂದ್ರನಾಥಠಾಗೋರ್

ಸ್ವಾಮಿ ರಾಮತೀರ್ಥ, ಸ್ವಾಮಿ ರಾಮಕೃಷ್ಣಪರಮಹಂಸ, ಸ್ವಾಮಿವಿವೇಕಾನಂದ, ದಯಾನಂದಸರಸ್ವತಿ, ಬಾಲಗಂಗಾಧರತಿಲಕ್, ಗೋಪಾಲಕೃಷ್ಣಗೋಖಲೆ, ದಾದಾಬಾಯಿ ನೌರೋಜಿ, ಮಹಾತ್ಮಾ ಗಾಂಧಿ, ದೇಶಬಂಧು ದಾಸರೇ, ಮೊದಲಾದ ನರರತ್ನಗಳಂತಹ ಪುತ್ರರನ್ನು ಪಡೆದು ದೇಶೋದ್ಧಾರಮಾಡಿರಿ. ಇಂತಹ ನರರತ್ನಗಳನ್ನು ಹೆರುವ ತಾಯಿಯರನ್ನು ಪಡೆಯುವ ಮಾರ್ಗವನ್ನು ಪ್ರತಿಯೊಂದು ದೇಶವೂ ಹುಡುಕಬೇಕು. ಪ್ರಯತ್ನಪಟ್ಟ ನೀವೂ ಸಫಲರಾಗುವಿರಿ.

ಉತ್ತಮಮಾತೆಯಾಗಬೇಕಾದರೆ ಬ್ರಹ್ಮಚರ್ಯ ವ್ರತವನ್ನನುಸರಿಸಬೇಕು. ನಿಮ್ಮ ತಂದೆಯ ಮನೆಯಲ್ಲಿ ಈ ವ್ರತವು ಪ್ರಾರಂಭವಾಗುವುದು. ಪತಿಗೃಹಕ್ಕೆ ತೆರಳಿದನಂತರ ಈ ವ್ರತವನ್ನು ಸಮಾಪ್ತಿಗೊಳಿಸಬೇಕು. ಈ ವ್ರತಕ್ಕೆ ತಂದೆಯಮನೆಯಲ್ಲಿ ತಾಯಿ, ತಂದೆ, ಸಹೋದರ ಸಹೋದರಿಯರು. ಪತಿಗೃಹದಲ್ಲಿ ಪತಿ, ಮಾವ, ಅತ್ತೆ, ಅತ್ತಿಗೆ, ನಾದಿನಿ, ಓರಗಿತ್ತಿ ಮೊದಲಾದವರ ಸಹಾಯವು ದೊರೆಯುವುದು. ಬಾಲಚೇಷ್ಟೆಗಳನ್ನು ಮರೆತುಬಿಡಿ. ಚಂಚಲಬುದ್ಧಿಯನ್ನು ಬಿಟ್ಟುಬಿಡಿ. ಸನ್ಮಾರ್ಗವ್ರತವತವನ್ನಾರಂಭಿಸಿ ದುರ್ಮಾರ್ಗವನ್ನು ಪೂರ್ಣವಾಗಿ ತ್ಯಜಿಸಿಬಿಡಿ. ಉತ್ತಮಸಂತತಿಗಳನ್ನು ಕೊಡುವಂತೆ ಏಕಮನಸ್ಸಿನಿಂದ ಈಶ್ವರನನ್ನು ಧ್ಯಾನಿಸಿ. ಭಗವಂತನು ನಿಮ್ಮ ವ್ರತವನ್ನು ಪೂರ್ತಿಮಾಡುವನು. ನಿಮ್ಮ ಗರ್ಭದಲ್ಲಿ ಮೇಲೆ ಹೇಳಿದಂಥ ದೇಶೋದ್ಧಾರಕಗಳಾದ ನರಕೇಸರಿಗಳುದಿಸುವವು. ನಿಮ್ಮ ಜನ್ಮಸಾಫಲ್ಯವುಂಟಾಗುವುದು. ಕುಲಕ್ಕೆ ಕೀರ್ತಿಯುಂಟಾಗುವುದು. ದೇಶವು ಕೀರ್ತಿಹೊಂದುವುದು.

ಭಾರತಮಾತೆಯು ನಿಮಗಿಂತಹ ಅನುಗ್ರಹವನ್ನು ಕ್ಷಿಪ್ರದಲ್ಲಿಯೇ ಕೊಡಲಿ.



## ಭಕ್ತಕುಸುಮಾಂಜಲಿ.

(ಹಿಂದಿನ ಸಂಚಿಕೆಯಿಂದ ಮುಂದರಿಸಿದ್ದು)

೮೨

ಹೇ! ದುಂದುತನವೇ! ಅತಿಭೋಗವೇ! ನಿನ್ನಿಂದ ಈ ಪ್ರಪಂಚದಲ್ಲಿ ಎಷ್ಟು ಅನಾಹುತಗಳು ನಡದಿವೆ! ನಿನ್ನಿಂದಲ್ಲವೆ ಈ ಪ್ರಪಂಚದ ಮರುಳಾಟಕ್ಕೆ ಬಿದ್ದು ಅರ್ಥಹಾನಿ, ಮಾನಹಾನಿ, ಪ್ರಾಣಹಾನಿ— ಈ ಮೂರು ಬಹುಮಾನಗಳಿಂದ ಸಂಭಾವಿತರಾಗುವುದದಿಲ್ಲವೆ? ಮೊದಲೊಮ್ಮೆದಲು ನಿನ್ನ ಗುಣವು ಬಹು ಆನಂದದಾಯಕವಾಗಿದ್ದು, ಕೊನೆಗೆ ಜೀವಾತ್ಮವನ್ನು ಕೊಂದು, ಆ ಮೇಲೆ [illegible]

ಅನುಸರಿಸುವಂತೆ ಮಾಡುತ್ತೀ. ರಾಜ್ಯವು ನಿನ್ನ ತುಚ್ಛವಾದ ಗುಣದ ದೆಸೆಯಿಂದ ಶ್ರೇಷ್ಠತೆಯನ್ನು ಹೊಂದುವುದಾದರೂ ಅವಿಚ್ಛಿನ್ನವಾದ ಮಹಿಮೆಯನ್ನು ಅದು ಹೊಂದಲಾರದು. ಅದು ಎಂದಿನವರಿಗೆ ಐಶ್ವರ್ಯಸಂಪದ್ಯುಕ್ತವಾಗಿರುವುದೋ, ದೊಡ್ಡದಾಗಿ ಪರಿಣಮಿಸಿ ನಿರ್ವಾಹಹವಮಾಡಲು ಅಸಾಧ್ಯವಾಗಿ, ಆಟೋಪಾಡಳಿತಗಳು ಸರಿಯಾಗಿರದೆ ಅನಾಯಕತ್ವವನ್ನು ಹೊಂದುವುದಲ್ಲವೇ ? ಇದೆಲ್ಲಾ ನಿನ್ನ ಪ್ರಭಾವವೇ !

ನಿನ್ನನ್ನು ಹೊಂದಿದ ಮನುಷ್ಯನು ನಿಶ್ಚಿಂತನಾಗಿರನು. ಅವನ ದೇಹವೆಲ್ಲಾ ಬಾಯಾಗಿ ಪ್ರಪಂಚವೇ ಸಾಲದೆಹೋಗುವುದು. ಅತೃಪ್ತಿಯು ಎಲ್ಲಾ ಕಡೆಯೂ ವ್ಯಾಪಿಸಿ ಕೊನೆಗೆ ಪ್ರಪಂಚವೇ ಲಯವಾಗಿ ಹೋಗುವುದು. ಆದ ರಿಂದ ನಿನ್ನನ್ನು ಹೊಂದುವವರು ಅಧಃಪತಿತರಾಗಿ ಹೋಗುವರು.

ಹೇ ! ದೇವಾದಿದೇವ! ಪಾವನಮೂರ್ತಿ! ಸಕಲೇಶ್ವರಾ ! ''ತೃಪ್ತಿ''ಯನ್ನು ಎಲ್ಲರೂ ಹೊಂದುವಂತೆ ಅನುಗ್ರಹಿಸು. ಇದನ್ನು ಹೊಂದಿ, ಸಕಲರೂ ತೃಪ್ತರಾಗಿ ಈ ಪ್ರಪಂಚದ ಸುಖವನ್ನು ನೆನವರಿಸದೆ ಭಕ್ತಿಯನ್ನುಹೊಂದಿ, ಸ್ವರ್ಗೀಯ ಸುಖವನ್ನು ಅನುಭವಿಸುವರು. ಆದುದರಿಂದ ಇದನ್ನು ಅನುಗ್ರಹಿಸು ! ಅನುಗ್ರಹಿಸು!!

ತಶ್ಸತ್

ಊ

ಹೇ ! ದೇವಾದಿದೇವಾ ! ತೊರೆ, ಹೊಳೆ, ನದಿ, ನದಾ—ಇವುಗಳು ಅನೇಕಾನೇಕ ಸ್ಥಳಗಳಲ್ಲಿ ಉದ್ಭವಿಸಿ, ಹರಿದು, ವಾಹಿನಿಗಳಾಗಿ, ನೀರನ್ನು ಹೇಗೆ ಶೇಖರಿಸಿಕೊಂಡು ಮಹಾಸಾಗರದಲ್ಲಿ ಸಂಗಮವಾಗುತ್ತದೆಯೋ ಅದೇರೀತಿ ವಿವಿಧಮಾರ್ಗಗಳಿಂದ, ಮಾರ್ಗಗಳು ಸರಿಯಾಗಿಯೋ ಇಲ್ಲವೆ ಡೊಂಕಾಗಿಯೋ ಇದ್ದು, ಕಲ್ಲುಮುಳ್ಳುಗಳಿಂದ ತುಂಬಿದ್ದರೂ ಹೇಗೆ ನಿನ್ನನ್ನು ಸೇರುತ್ತವೆ ಎಂಬುದನ್ನು ತರ್ಕಿಸಿದರೆ ಅವೆಲ್ಲವೂ ನಿನ್ನ ಬಳಿಗೆ ತಂದುಬಿಡುತ್ತವೆ.

ನಿನ್ನ ಬಳಿಯನ್ನೈದಲು ಅನೇಕಮಾರ್ಗಗಳಿವೆ. ಅವುಗಳಲ್ಲಿ ಯಾವುದು ಸುಲಭವೋ, ಸರಳವೋ, ಕಷ್ಟವೋ, ಪ್ರಯಾಸವೋ, ನಿರ್ಣಯಿಸಲಸಾಧ್ಯ. ಕಬೀರ್ ದಾಸರು ತಮ್ಮ ಅಭಿಮತದಿಂದಲೂ, ಅಭೀಷ್ಟದಿಂದಲೂ ಉಪದೇಶವನ್ನು ಬೋಧಿಸತೊಡಗಿ, ಅಂದು ಖಿಲವಾಗುತ್ತಿದ್ದ ಹಿಂದೂಮತವನ್ನು ನವೀಕರಿಸಲಿಲ್ಲವೆ ?

'' ದೇವರು ಒಬ್ಬನೇ ; ಆತನ ಸ್ವಭಾವವು ಪ್ರೀತಿ ಅಥವಾ ಪ್ರೇಮ ; ಆತನು ಸರ್ವಾಂತರ್ಯಾಮಿ, ಸರ್ವತ್ರಾಣಿ, ಸರ್ವಲೋಕರಕ್ಷಕ ; ಆತನಿಗೆ ದ್ವಂದ್ವತ್ವವಿಲ್ಲ. ಆತನೇ ಸಕಲ ಆತ್ಮಕ್ಕೂ ಸ್ನೇಹಿತ ಮತ್ತು ದರ್ಶಕನು. ಆತನನ್ನು ಸೇರಲು ನಡೆ [illegible] ಋಜುಸರಳವಾಗಿರುವುದು, ವಿಶ್ವಾಸ, ನಂಬಿಕೆ, ಶ್ರದ್ಧೆ ಮತ್ತು ಭಕ್ತಿ

ಇವು ಮಾತ್ರವೇ! ದೇವರು ಎಂಥಾ ಭಕ್ತನಿಗೂ (ಆತನು ಕೀಳಾಗಿದ್ದರೂ ಮೇಲಾಗಿದ್ದರೂ ಸರಿಯೆ) ಒಲಿಯುತ್ತಾನೆ ''. (ಕಬೀರ್).

'' ಮನಸ್ಸಿನಲ್ಲಿ ದೇವರನ್ನು ಧ್ಯಾನಿಸು. ಯಾವಾಗ್ಯೂ ಸತ್ಕೃತ್ಯವು ನ್ಯಾಯವು, ವಿಶ್ವಾಸ, ಸಂಚಿಕೆ, ಶ್ರದ್ಧೆ ಇದರಮೇಲೆ ನಿಲ್ಲುವುದು '' (ನಾನಕ್).

'' ದೇವರೊಬ್ಬನೇ! ಆತನೇ ಸತ್ಯ ಮತ್ತು ಸೃಷ್ಟಿಕರ್ತ! ದೇವರು ಏಕೇಶ್ವರನು! ಆತನೊಬ್ಬನೇ! ಆತನೇ ಕರ್ತನು! ಆತನು ಹಿಂದುವಿನ ಅಲ್ಲವೇ ಮುಸಲ್ಮಾನನ, ಅಲ್ಲವೇ ಕ್ರಿಶ್ಚಿಯನ್ನಿನ ದೇವರಲ್ಲ, ಮಾನವದೇವರು! ಆತನನು ಯಾವವಿಧದಲ್ಲಿ ಪೂಜಿಸಿದರೂ ಯಹೋವಾ! ಜೀಸಸ್ ಕ್ರೈಸ್ತ! ಅಲ್ಲಾ! ರಾಮಾ! ಆತನು ಒಬ್ಬನೇ—ಅದೃಶ್ಯನು, ಚಿರಸ್ಥಾಯಿಯು! ಅನಿರ್ವಿಕನು! ಸಕಲ ಜ್ಞಾನಗಳಿಗಿಂತಲೂ ದೈವಜ್ಞಾನವು ಶ್ರೇಷ್ಠತಮವು.' '(ನಾನಕ್)          ಶಶ್ಯತ್.

ಬಾ

ಶ್ರೀನಿವಾಸ! ವೈಕುಂಠಾಧಿಪತಿ! ಲಕ್ಷ್ಮೀಪ್ರಿಯಾ! ವೆಂಕಟಾಚಲಾಧಿಪತಿ! ಶ್ರೀ ವೆಂಕಟರಮಣಸ್ವಾಮಿ! ಶ್ರೀ ಲಕ್ಷ್ಮೀವೆಂಕಟೇಶಾ! ಏಕೆನ್ನನು ಈಪರಿಯೊಳು ಸಂಕಟಪಡುವಂತೆ ಮಾಡಿರುವಿ? ನಿನ್ನನ್ನು ನನ್ನ ಅಜ್ಞಾನದಿಂದಲೂ ಅಜಾಗ್ರತೆಯಿಂದಲೂ, ಕ್ಷಣಭಂಗುರವಾದ ಪ್ರಪಂಚಸುಖಗಳಿಂದ ಮರೆತುಬಿಟ್ಟಿರೋಣದರಿಂದ ಈಪರಿಯು ಕಷ್ಟವನ್ನಿತ್ತಿರುವಿಯೋ? ಜ್ಞಾನವನ್ನೂ, ಮೋಕ್ಷಮಾರ್ಗವನ್ನೂ ಇತ್ತು ಸಲಹೋ! ತೀವ್ರವಾಗಿ ಈ ಕಷ್ಟಗಳ ಬಂಧನದಿಂದ ಬಿಡಿಸು!

*     *     *     *     *

ಅತ್ತು ಅತ್ತು ಬೇಸರಪಟ್ಟು ನಿನ್ನ ಆಗಮನವನ್ನೇ ನಿರೀಕ್ಷಿಸುತ್ತಿದ್ದೆ! ನಿನ್ನ ದಯಬಾರಲಿಲ್ಲ. ಏಕಿಂತು ಕ್ರೂರಿಯಾಗಿರುವೆ? ಎನ್ನಳುವು ದಾರುಣವಾದುದು. ಇದೇನು ನನ್ನ ಲಲಾಟದಲ್ಲಿ ಲಿಖಿಸಿದಂಥಾ ಲೇಖವೋ? ಅಥವಾ ಅದೃಷ್ಟವೋ? ಹೃಷೀಕೇಶ! ಎಲ್ಲಿರುವೆ? ನನಗೆ ಜಗತ್ತೇ ಕಾಣದಂತಾಗಿರುವುದಿಲ್ಲ. ಅಜ್ಞಾನಸಾಗರದಲ್ಲಿ ಮುಳುಗಿರುವೆನು. ದಡವೆಂತು ಕಾಂಬೆನೋ! ನೀನು ಭಕ್ತನಮೇಲೆ ಕೃಪೆಯಿಟ್ಟು ರಕ್ಷಿಸು. ಭಕ್ತವತ್ಸಲನು ಎಂಬ ಬಿರುದನ್ನು ಹೊಂದಿರುವೆ. ಅಂಥಾವನಾಗಿದ್ದ ಪಕ್ಷದಲ್ಲಿ ರಕ್ಷಿಸೋ! ಹೇ ದೇವಾದಿದೇವ! ಈ ಭವಬಂಧನಕ್ಕೆ ಸಿಲುಕಿ ದಿಕ್ಕಿಲ್ಲದೆ ಕಾಣದೆ ಇದ್ದೇನೆ.

ಲೋಕರಕ್ಷಕನೂ ಸರ್ವಾಂತರ್ಯಾಮಿಯೂ ಆದ ನೀನು ಪ್ರಹ್ಲಾದ, ಅಜಾಮಿಳ ಮೊದಲಾದ ಎಲ್ಲಾ ಭಕ್ತರನ್ನೂ ಕಾಪಾಡಿ ಭಕ್ತರಕ್ಷಕನೆಂಬ ಬಿರುದನ್ನು ಹೊಂದಲಿಲ್ಲವೆ? ರಕ್ಷಿಸಿ ಮೋಕ್ಷವನ್ನು ಅನುಗ್ರಹಿಸು!          (ಶಶ್ಯತ್)

# ಮಾನವ ಸುಖಬೋಧಾಮೃತ

## (Part I.)

### ೧. ಮಾನವನ ಜೀವಿತಕಾಲದ ಏಳು ಅಂಕಗಳು.

ಭಾ॥ ಧರೆಯು ರಂಗಸ್ಥಳವುದಾಗಿದೆ ।
ಪುರುಷವನಿತೆಯರೆಲ್ಲರಭಿನಯ ।
ಕರುವಸುವೇಷಧಾರಿಗಳೆನಿಸಿ ಜನನಮರಣಗಳು ॥
ಭರದೆರಂಗಕೆ ಸಾರಿಪೋಗುವ ।
ತೆರದೆಕಾಣ್ಬುದ ಬಗೆಯೆ ಮನುಜನ ।
ಮೆರೆವಜೀವಿತಕಾಲದೇಳಂಕನೆನೆತೋರುವುದು ॥೧॥

ಮೊದಲೆನಿಪಶೈಶವವೆಂಬಂ ।
ಕದೊಳುವಮಾತೆಯತೊಡೆಯಮೇಲುತೆ ।
ವಿದವಿಧದಸರಗಳನೆಚೀರುತೆಕಾರುತಿರುತಿಹನು ॥
ಮುದದೊಳೆರಡನೆಯಂಕಬಾಲ್ಯದೆ ।
ಹೃದಯಕಾನಂದವನು ಬೀರುವ ।
ವದನದಿಂರಾಜಿಸುವಕಾಂತಿಯನಾಂತುಮೆಗೆಯುವನು ॥೨॥

ಬಿಡದೆಹೊತ್ತಿಗೆಯನ್ನು ಹಸ್ತದೆ ।
ಪಿಡಿದುಬಿಕ್ಕುತಳಲುತುದಯದೊಳು ।
ನಡೆದುಬಸವಿನಘಳದತೆರದಿಂಮಠಕೆಸಾರ್ವನೆಲೆ ॥
ನಡೆವ ಮೂರನೆ ಯಂಕದೊಳುತನ ।
ಗಡಸಿದಾಜೌವ್ವನದೆ ಮುದದಿಂ ।
ದಿಡಿದುಜವದಿಂಮತ್ತನಾಗುತೆ ವಿರಹತಾಪದೊಳು ॥೩॥

ತರಹರಿಸಿ ನಿಟ್ಟುಸಿರಬಿಡುತಂ ।
ನಿರುತತನ್ನಿನಿಯಳನೆಬಣ್ಣಿಸಿ ।
ಬರೆದಪದ್ಯಂಗಳನುಪಾಡುತೆ ಮೋಹವಶನಹನು ॥
ಕರೆವನಾಲ್ಕನೆಯಂಕದೊಳುತಾ ।
ಮೆರೆವಶೌರ್ಯದೊಳಧಿಕನಾ ।
ಗಿರುವಪದವಿದ್ರವ್ಯಯಶಗಳ ಬಿಡದೆತಾಗಳಿಸಿ ॥೪॥

ಬಿನದದಿಂದಾಣೆಗಳನಿಕ್ಕುತೆ |
ಜನಕೆಸತ್ಯವನೊರೆವೆನೆನ್ನುತೆ |
ಘನತರದಭಾಷೆಗಳನಿಡುತಲಿ ದುಡುಕಿಕಲಹವನು ||
ಮುನಿದುಗೆಯ್ಯುತೆ ವಿದಿತಕೀರ್ತಿಯು |
ನನುವಿನಿಂತಾಪಡೆವೆನೆನ್ನುತೆ |
ಘನತೆಗೋಸುಗ ಗುಂಡಿನಿದಿರೊಳುನಿಲಲುಹೆದರನಲ ||೫||

ಒರೆಯುವ್ವೈದನೆಯಂಕದೊಳುನಸು |
ನರೆತಕೇಶವನಾಂತುಜನರೊಳು |
ನೆರೆವಗೌರವದಿಂದೆಕಾಣಿಸಿಕೊಳುತೆಜನಗಳನು ||
ತರತರದ ನುಡಿಗಳಿಗೆ ದಂಡಿಸು |
ತರಿಮೆಯಿಂಲೋಕಾನುಭವವಂ |
ಧರೆಗೆಸಾರ್ವತೆಲೋಕಮನ್ನಣೆಯಾಂತು ಜೀವಿಸುತೆ ||೬||

ಮುದದೆಲೋಕಕೆನೀತಿಯೊರೆಯುತೆ |
ಹದನದಿಂದಿತಿಹಾಸಗಾದೆಗ |
ಳದುಬುತವಾಗಿಪೇಳ್ವುತೆಮಿತಿಯುಮೀರಿಭುಂಜಿಸುತೆ ||
ಒದಗಿದಾಸ್ಥೂಲವಪುವಾಂತೀ |
ವಿಧದೆತಾಪಃಚಾಯುತಿಯುಗ್ರೈ |
ವುದರೊಳಾಸಕ್ತತೆಯುನಾನುತೆಕಾಲಕಳೆಯುವನು ||೭||

ಆರನೆಯಂಕವೆನಿಪಜರೆಯೊಳು |
ಭೂರಿಸುಖಮಿಲ್ಲದಲೆಗಳಿತಶ |
ರೀರಕಡಿಗಡಿಗುಡಿಗೆತೊಡಿಗೆಗಳಿಂದೆಸಿಂಗರಿಸಿ ||
ದೂರನೋಡೆಸುಲೋಚನ ಕಂಟ |
ಕಾರಿಗಳನ್ನುಕಾಳಿನೆಟ್ಟುತ |
ಊರಗೋಲನುಪಿಡಿದು ತಪ್ಪೆಜ್ಜೆಗಳಹಾಕುವನು ||೮||

ನಂಬುಗೆಯನಿಡದಂತೆಯಾರೊಳು |
ಹಂಬಲಿಸಿಯಾಡಿದುದನಾಡುತೆ |
ತುಂಬಿದಾಪಳಿವಿಗೆಡೆಯಾಗುತೆ ವೊದಲಸರಮುಳಿದು ||
ಕುಂಭಿಣಿಯುಹಾಸ್ಯಕೆಡೆಯಾಗುತ |
ಲಿಂಬುಳಿಯುತಂಕೀರಸರಂಗ |
ಳಂಜಿಡಿವಿಡಿಯನುಡಿಯ ನುಡಿಯುತೆಕಾಲಕಳೆಯುವನು ||೯||

ನರನನಾಟಕಕೊನೆಯದಂಕದೊ |
ಕಿರುಕಲಂತ್ಯಾವಸ್ಥೆಗೆ ಬಿಡದೆ |
ಗುರಿಯುದಾಗುತತಿರುಗಿಬಾಲ್ಯಾವಸ್ಥೆಯತೋರಿಸಿ ||
ಅರಿಮೆಹೀನತೆಯಾಂತುದಂತಗ |
ಕಿರದೆರುಚಿದಪ್ಪಿಕರಣಮುಡುಗಿ |
ಪರಮಪದವಂಪಡೆಯಲಂತ್ಯದೆಲಯವನೊಂದುವನು ||೧೦|

ಇಂತಿರುವನರಜನ್ಮದೆಬಿಡದೆ |
ಸಂತತಂ ಸಂತರನುಸೇವಿಸಿ |
ಸಂತಸದ್ಗುಣಭರಿತನಾಗುತಲೋಕಸೇವೆಯೊಳು ||
ಸಂತಸದೆತಾನಿರತನಾಗುತೆ |
ಚಿಂತಿತಾರ್ಥಪ್ರದನಸೇವಿಸು |
ತಿಂತುಮಾನವಜನ್ಮತತ್ವವನರಿಯೊಮಾನವನೆ ||೧೧||



## ಬಿಡಿನುಡಿಗಳು.

---

### ಕೆಲವು ಪ್ರಾಚೀನ ಕ್ರೈಸ್ತ ಪಾದ್ರಿಗಳ ಅಭಿಪ್ರಾಯಗಳು.

ದೇವನು ಚಿನ್ಮಯನು, ರಸಪುರುಷನು; ಆದರೆ ಮಾನವಾಕಾರನೂ ಅಲ್ಲ, ನಿರಾಕಾರನೂ ಅಲ್ಲ. ಸರ್ವ ಸೃಷ್ಟಿಯಲ್ಲಿಯೂ ಆವಿರ್ಭವಿಸುವನು; ಆದರೆ ಜಡ ಪ್ರಕೃತಿ (ವಸ್ತು) ಭಿನ್ನವಾದ ಆತ್ಮನಾಗಿಹನು.

ಸ್ವರ್ಗಕ್ಕೆ ಮುತ್ತಿನ ಹೆಬ್ಬಾಗಿಲುಗಳಿಲ್ಲ; ಗಾನ ವಾದ್ಯಗಳ ಮಂಗಳಸ್ವರವೂ ಇಲ್ಲ. ನರಕದಲ್ಲಿ ಅಗ್ನಿ ಇಲ್ಲ. ಭೂತವೆಂಬುದು ಪಾರ್ಶಿಯವರ ಘೋರೋಸ್ಟ್ರಿಯನ್ ಧರ್ಮದ ಒಂದು ಕಲ್ಪನೆ ಮಾತ್ರ.

ಬರೀಧ್ಯಾನ (ಪ್ರಾರ್ಥನೆ)ವು ಯಾವನಾದರೊಬ್ಬ ಮಧ್ಯಸ್ಥನಿಲ್ಲದೆ ಹಸಿವೆಯಿಂದ ಕೊಣಗಾದ ಮನುಷ್ಯನ ಕೈಯಲ್ಲಿ ರೊಟ್ಟಿಯ ತುಣಕನ್ನು ನೀಡಲರಿಯದು.

ಅಮರತ್ವವು ಸ್ವದೇಹವಲ್ಲ. ಸ್ವಸಾದೃಶ್ಯವು ಬಾಳಬಲ್ಲದು; ಆದರೆ ಸ್ವದೇಹಕ್ಕೆ ಪುನಜ್ಜನ್ಮವಿಲ್ಲ.

ಹಳೇ ಒಡಂಬಡಿಕೆಯಲ್ಲಿಯ ಪವಾಡ ಕೃತ್ಯಗಳೆಲ್ಲ ಕೇವಲ ಕಟ್ಟು ಕಥೆಗಳು. ಹೊಸ ಒಡಂಬಡಿಕೆಯಲ್ಲಿವು ಇತ್ತೀಚಿಗೆ ಸೇರಿಸಲ್ಪಟ್ಟವುಗಳು. ಇಂಥ ಜಾಲ ವಿದ್ಯೆಯ ಏಸುಕ್ರಿಸ್ತನ ಸ್ವಭಾವಕ್ಕೆ ಸರಿಬಾರದ ಸಂಗತಿಯು.

"ಸ್ವರ್ಗಾರೋಹಣ" ವೆಂಬ ಪದಸಮುಚ್ಚಯವು. ಸ್ವರ್ಗವು ಭೂಮಿಯ ಮೇಲ್ಭಾಗದಲ್ಲಿರುವುದೆಂದು ತಿಳಿಯುವ ಮನುಷ್ಯನಿಂದ ಧರ್ಮಗ್ರಂಥದಲ್ಲಿ ಸೇರಿಸಲ್ಪಟ್ಟಿದೆ. ಇದನ್ನು ಎಷ್ಟೋ ಜನರು ಇನ್ನೂ ನಂಬುತ್ತಾರೆಂದು ಹೇಳು ವುದು ಬರಿಯ ಮೂರ್ಖತನವು.

(ಪ್ರೇಮ)

---

ಕೌಚ್ ಎಂಬ ಹೈಸ್ಕೂಲಿನ ಮುಖ್ಯ ಉಪಾಧ್ಯಾಯಿನಿಯ ಅಭಿಪ್ರಾಯವು.

"ಅಡಿಗೆಮಾಡುವುದಕ್ಕೂ ಬಟ್ಟೆ ಹೊಲಿಯುವುದಕ್ಕೂ ಒಗೆಯುವದಕ್ಕೂ ಬಾರದ ಹುಡುಗಿಯರು ವಿದ್ಯಾವಂತರಲ್ಲ.

ಹೆಂಗಸು ತನ್ನ ಜೀವನಕ್ಕೆ ಗಂಡನನ್ನು ನಂಬಿರಕೂಡದೆಂಬ ಅಭಿಪ್ರಾಯ ದಿಂದ ಪಾಶ್ಚಾತ್ಯ ತಂದೆ ತಾಯಿಯರು ತಮ್ಮ ಹುಡುಗಿಯರನ್ನು ಶಾಲೆಗೆ ಕಳು ಹಿಸಿ ದೊಡ್ಡದೊಡ್ಡ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿಸುತ್ತಾರೆ. ದಡ್ಡ ಹುಡುಗಿ ಯರು ಮಾತ್ರ ಅಡಿಗೆಮಾಡುವುದನ್ನೂ ಗೃಹಕೃತ್ಯದ ಕೆಲಸಗಳನ್ನೂ ಕಲಿಯ ಬೇಕೆಂಬುದು ವಾಡಿಕೆಯಾದ ಅಭಿಪ್ರಾಯವಂತೆ.

"ಇದು ತಪ್ಪು. ಪರೀಕ್ಷೆಗಳಲ್ಲಿ ತೇರ್ಗಡೆಯಾಗುವುದರಲ್ಲಿ ಹೆಚ್ಚಿನ ಗೌರವ ವಿಲ್ಲ. ಒಬ್ಬ ಹುಡುಗಿಯು ಅಡಿಗೆ ಮಾಡುವುದನ್ನೂ, ಬಟ್ಟೆ ಹೊಲಿಯುವು ದನ್ನೂ, ಬಟ್ಟೆ ಒಗೆಯುವುದನ್ನೂ ಕಲಿತು ಹಣವನ್ನು ಆದಷ್ಟು ಕಡಿಮೆ ಖರ್ಚು ಮಾಡಿ ಉಳಿಸುವದನ್ನು ಕಲಿಯುವುದೇ ಎಲ್ಲಕ್ಕಿಂತಲೂ ಹೆಚ್ಚಿನ ಗೌರವ. ಈ ವಿಷಯಗಳು ಗೊತ್ತಿಲ್ಲದ ಹುಡುಗಿಗೆ ಭೂಲೋಕದಲ್ಲಿದ್ದ ಎಲ್ಲಾ ಪರೀಕ್ಷೆಗಳ ಸರ್ಟಿಫಿಕೇಟುಗಳು ಸಿಕ್ಕಿದರೂ ಅವಳು ವಿದ್ಯಾವಂತೆಯಾಗಲಿಲ್ಲ" ಎಂದು ಮೇಲ್ಕಂಡ ಹೈಸ್ಕೂಲಿನ ಮುಖ್ಯೋಪಾಧ್ಯಾಯಿನಿಯಾದ "ಮಿಸ್ ಕೌಚ್" ಎಂಬುವರು ಹೇಳುತ್ತಾರೆ.

ಇದು ನಿಜವಾದದ್ದು. ಪಾಶ್ಚಾತ್ಯರ ಮಾದರಿಯನ್ನು ವಿದ್ಯಾವಂತರಾದ ಹಿಂದೂಗಳೂ ಸಹ ಅನುಸರಿಸುತ್ತಿರುವುದು ಅತಿಶೋಚನೀಯವಾದ ಸಂಗತಿ. ಪುರುಷಜನನಕ್ಕೂ ಸ್ತ್ರೀಯನ್ನೂ ಶ್ರೇಷ್ಠತರಕ್ಕೆ ತರುವ ಕಾರ್ಯಕ್ರಮಗಳನ್ನು

ಮೂಲೆಗೊತ್ತಿ ಪ್ರಾಪಂಚಿಕ ಮೇಲಾಟಕ್ಕೆ ಒದ್ದಾಡುತಿದ್ದೇವೆ. ಅಂತಹ ನೆಯಲ್ಲಿ ಸುಖವೆಲ್ಲಿಂದ ಬರಬೇಕು ?

"ನಮ್ಮ ಮನೆಗಳು ಮನಸ್ಸಿಗೆ ಶಾಂತತೆಯನ್ನು ಕೊಡುವ ಗಡುಗಳಂತಿದ್ದರೂ ಚಿಂತೆಯಿಲ್ಲ. ಪಾಶ್ಚಾತ್ಯರು ಅನುಸರಿಸುವ ಲೌಕಿಕ ಮೇಲಾಟ ಜೂಜು ನಮಗೆ ಬೇಡ" ಎನ್ನುವುದೇ ಇನ್ನು ಮುಂದಿನ ಕೂಗಾಗುತ್ತದೆ.

(ಲೋರಹಸ್ಯ)



# ಸ್ತ್ರೀಯರೂ ಸಮಾಜ ಸೇವೆಯೂ.

(ಹಿಂದಿನ ಸಂಚಿಕೆಯಿಂದ ಮುಂದರಿಸಿದ್ದು)

ಮಾಡತಕ್ಕ ಅನೇಕ ಕಾರ್ಯಗಳಿಗೆ ತಾವೂ ಸಹಾಯಕರಾಗಿ ನಿಲ್ಲುವ ಮನಸ್ಸುಂಟಾಗುವುದು ಮಾತ್ರವಲ್ಲದೆ ತಮ್ಮಿಂದ ಸಾಧ್ಯವಾದ ಪರೋಪಕಾರಕಾರ್ಯಗಳನ್ನು ಮಾಡಲು ಸಿದ್ಧರಾಗುವಂತೆ ಪ್ರೇರೇಪಿಸುವುದು. ಅಲ್ಲದೆ ನಮ್ಮದೀನ ಸೋದರಿಯರ ಸಹಾಯಾರ್ಥವಾಗಿ ನಮ್ಮ ಮೂಲಕ ಅಥವಾ ಸ್ತ್ರೀಸಂಘಗಳ ಮೂಲಕ ಮಾಡಲ್ಪಡಬೇಕಾದ ಕಾರ್ಯಗಳು ಎಷ್ಟೋ ಇರುವುದರಿಂದ ಇಂತಹ ಕಾರ್ಯನಿರ್ವಾಹಕತ್ವವನ್ನು ವಹಿಸಿ ದೇಶಸೇವೆ ಮತ್ತು ಸಮಾಜ ಸೇವೆಮಾಡಲು ಒಬ್ಬರಿಬ್ಬರು ಸೋದರಿಯರು ಸ್ವಾರ್ಥತ್ಯಾಗಮಾಡಿ ಸೊಂಟಕಟ್ಟಿ ನಿಲ್ಲಬೇಕಾದುದು ಅತ್ಯಾವಶ್ಯಕವು.

ಇಂತಹ ಕಾರ್ಯವನ್ನು ಮಾಡಲೆಳಸುವರು ಆಯಾ ಊರಿನವರ ಅಥವಾ ಪಟ್ಟಣದವರ ಅನುಕೂಲಕ್ಕೆ ತಕ್ಕಂತೆ ಎಲ್ಲರನ್ನೂ ಒಂದು ಸ್ಥಳದಲ್ಲಿ ಕೂಡಿಸಿ ಸಮಯಾನುಸಾರ ಅವರವರಿಗೆ ತಕ್ಕಂತೆ ಕೆಲಸಗಳನ್ನು ವಿಭಾಗಿಸಿ ಕೊಡಬೇಕಾದರೆ ಈ ಕೆಳಗೆ ಕಂಡುಬರುವಂತೆ ಪರಸ್ಪರ ಸಹಾಯದಿಂದ ನಡೆಸಬಹುದು.

## (1) ಐಶ್ವರ್ಯವಂತ ಮಹಿಳೆಯರೂ—ಮಧ್ಯಮತರಗತಿಯವರೂ.

ಕೆಳಗೆ ಕಂಡುಬರುವಂತಹ ವಿಧವನ್ನು ಈ ವಿದ್ಯಾವಂತರ ವಿಷಯದಲ್ಲಿ ಆಚರಣೆಗೆ ತರುವುದು ಮುಖ್ಯವಾದುದು. ಮೇಲ ರಿಡ ಸ್ತ್ರೀಯರೆಲ್ಲರೂ ಸಾಧಾರಣವಾಗಿ ತಮ್ಮತಮ್ಮ ಸ್ವಂತಭಾಷೆಯಲ್ಲಿಯೂ ಅನೇಕರು ಆಂಗ್ಲಭಾಷೆಯಲ್ಲಿಯೂ

ಪರಿಚಯುವುಳ್ಳವರಾಗಿರುವರು. ಇವರುಗಳಿಗಾಗಿ ಪ್ರತಿದಿನವೂ ತರಗತಿಗಳನ್ನೇರ್ಪಡಿಸಬೇಕಾದ ಅವಶ್ಯಕತೆಯಿಲ್ಲ. ಆದರೆ ಆಗಾಗ್ಯೆ ಸುಲಭವಾಗಿ ಅರ್ಥವಾಗುವ ಮಾಸ ಪತ್ರಿಕೆಗಳು, ಪುರಾಣಪುಣ್ಯಗ್ರಂಥಗಳು, ವ್ಯಾವಹಾರಿಕಜ್ಞಾನವನ್ನುಂಟುಮಾಡುವ ಮಹಿಳಾವರ್ಗಕ್ಕೆ ಉಪಯುಕ್ತವಾದ ಉಪನ್ಯಾಸಗಳು, ಪೌರಸಾಮಾಜಿಕವಿಷಯಕ್ಕೆ ಸಂಬಂಧಪಟ್ಟ ಭೂತಕನ್ನಡಿಯ ಮೂಲಕ ಚಿತ್ರಪ್ರದರ್ಶನ (Magic lantern) ಇವುಗಳ ಮುಖಾಂತರ ತಿಳಿಸುವುದು ಮಾತ್ರವಲ್ಲದೆ ಮಾತೃಶಾಸ್ತ್ರ ಮೊದಲಾದವುಗಳಿಗೆ ಸಂಬಂಧವಾದ ವಿಷಯಗಳ ಚರ್ಚೆಗೆ ಅವಕಾಶವನ್ನುಂಟುಮಾಡುವುದರಿಂದ ಇಂತಹ ಮಹಿಳೆಯರು ಉತ್ಸಾಹದಿಂದ ಕಾಲಕಳೆಯಲು ಅನುಕೂಲವಾಗುವುದಲ್ಲದೆ ಉತ್ತರೋತ್ತರ ಸಕಲ ಅಂತಸ್ಥಿನ ಸ್ತ್ರೀಯರೂ ಒಂದುಕಡೆ ಸೇರುವುದರಿಂದ ಪರಸ್ಪರ ಸೌಹಾರ್ದ್ರಭಾವವೂ ಸೋದರೀಭಾವವೂ ಹೆಚ್ಚಿ ತಮ್ಮ ಸಮಾಜ ಸೇವೆಗೆ ಬದ್ಧಕಂಕಣರಾಗುವ ಮನಸ್ಸುಂಟಾಗುವುದು. ಬಾಲಕಿಯರ ಆಟಗಳು ಸಂಗೀತ, ಚಿತ್ರಕೆಲಸ ಮೊದಲಾದವುಗಳು ಇಂತಹ ಉಪಪನ್ನರಾದ ಸ್ತ್ರೀಯರ ಅನುಕೂಲಕ್ಕಾಗಿ ಮಾತ್ರವಲ್ಲದೆ ಸಕಲರೂ ಉತ್ಸಾಹದಿಂದ ಒಂದು ಕಡೆ ಸೇರುವ ಅಭಿಲಾಷೆಯನ್ನುಂಟುಮಾಡುವ ಉದ್ದೇಶದಿಂದೇರ್ಪಡಿಸಬಹುದು. ಸಂಘದ ಅಭಿವೃದ್ಧಿಗೆ ದ್ರವ್ಯ ಸಹಾಯಮಾಡುವುದು ಇವರ ಮುಖ್ಯಕರ್ತವ್ಯವಲ್ಲದೆ ತಾವು ಕಲಿತಿರತಕ್ಕ ಕುಶಲವಿದ್ಯೆಗಳನ್ನೂ ಓದುಬರಹವನ್ನೂ ಸಂಘದವರಿಗೆ ಮುಫತ್ತಾಗಿ ಕಲಿಸುವುದು ಇವರನ್ನು ಸೇರಿರುವುದು.

## (2) ಮಧ್ಯಮತರಗತಿಯ ಹೆಂಗಸರು

ಐಶ್ವರ್ಯವಂತರ ವಿಷಯವನ್ನಾಲೋಚಿಸಿದ್ದಾಯಿತಷ್ಟೆ. ಕಡಿಮೆಸಂಬಳ ಬರತಕ್ಕವರ ಪತ್ನಿಯರು, ಸಹೋದರಿಯರು ತಾವು ಕೈಗಾರಿಕೆಯನ್ನಾಗಲಿ, ವಿದ್ಯೆಯನ್ನಾಗಲಿ ಕಲಿಯಲು ತಮಗೆ ಇಷ್ಟವಿದ್ದಾಗ್ಯೂ ತಮ್ಮ ಗಂಡಂದಿರಿಗೆ ಬರತಕ್ಕ ವರಮಾನವು ಅಲ್ಪವಾಗಿರುವುದರಿಂದ ತಮ್ಮ ಆಸೆಯನ್ನು ತೃಪ್ತಿಪಡಿಸಿಕೊಳ್ಳಲಾರರು. ಇಂತಹವರಿಗಾಗಿ ಹೊಲಿಗೆಯಕೆಲಸ, ಕಸೂತಿಯಕೆಲಸ, ಚಿತ್ರದಕೆಲಸ ಮೊದಲಾದವುಗಳನ್ನು ಪ್ರಥಮತಃ ಕಡಿಮೆಖರ್ಚಿನಿಂದೇರ್ಪಡಿಸಿ ಇಂತಹವರಿಗೆ ಸ್ವಲ್ಪಮಟ್ಟಿಗೆ ಸಹಾಯದೊರೆಯುವಂತೆ ಮಾಡಬಹುದು. ಮನೆಯಲ್ಲಿ ಮಕ್ಕಳಿಗೂ ಮತ್ತು ತಮಗೂ ಉಪಯೋಗವಾಗುವಂತೆ ಹೊಲಿಗೆಯ ಕೆಲಸವನ್ನು ಕಲಿಯುವುದು ಮುಖ್ಯವಾದುದಲ್ಲದೆ ಮನೆಯ ಖರ್ಚಿನಲ್ಲಿ ಸ್ವಲ್ಪಭಾಗವು ಕಡಿಮೆಯಾದಂತಾಗುವುದು. ಈ ಕಾರ್ಯದಿಂದ ಸಂಘಕ್ಕೆ ನಷ್ಟವಾಗದ ಸಾಕಾದಷ್ಟು ದ್ರವ್ಯವು ಉತ್ಪನ್ನವಾಗದೆ ಮೇಲ್ಕಂಡ ವಿದ್ಯಾರ್ಥಿಗಳಿಗೆ ತಾವು ಖರ್ಚು ಮಾಡಿದಷ್ಟು ಹಣವನ್ನು ಕಳೆದುಕೊಂಡು ಉಳಿದದ್ದನ್ನು ಹಂಚಬಹುದು. ಈ ರೀತಿ ಹಣವಿರುವವರೂ ಇಲ್ಲದವರೂ ಒಂದುಕಡೆ ಸೇರಿ ಕೆಲಸ ಕಲಿಯಲು ಮೊದಲುಮಾಡಿದರೆ

ಕಡಮೆಯಾಗಿರುವುದರಿಂದ ಮೇಲ್ಕಂಡ ರೀತಿಯಲ್ಲಿ ಅವರಿಗೆ ಸಹಾಯಮಾಡಿದಲ್ಲಿ ಹಿಂದೂಮುಸಲ್ಮಾನರಲ್ಲಿ ಪರಸ್ಪರ ಸೌಹಾರ್ದಭಾವವು ಹೆಚ್ಚಿ ಹಿಂದೂ ಮಹಿಳಾಜನಾಂಗವುಮತ್ತಷ್ಟು ಪ್ರಾಬಲ್ಯಕ್ಕೆ ಬರುವುದು. ತಮ್ಮ ಹಿತಚಿಂತಕರಿರುವರೆಂಬ ಭಾವನೆಯು ಯಾವಾಗ ಉದಿಸಿತೋ ಆಗ ಪ್ರೀತಿ, ವಿಶ್ವಾಸ, ಪರಸ್ಪರ ಸೌಹಾರ್ದಭಾವ, ಸೋದರೀವಾತ್ಸಲ್ಯ ಮೊದಲಾದವುಗಳು ತಮ್ಮಷ್ಟಕ್ಕೆ ತಾವೇ ಉಂಟಾಗುವುವು.

ಇಂತಹ ಸ್ತ್ರೀಸಂಘಗಳು ನೆರೆಹೊರೆಯ (ಪುರುಷರಿಂದ ಸ್ಥಾಪಿಸಲ್ಪಟ್ಟಿರುವ) ಸಂಘಗಳೊಡನೆ ಸೇರಿ ಕೆಲಸಮಾಡುದಾದರೂ ಉದ್ದೇಶವುಮಾತ್ರ ಮುಖ್ಯವಾಗಿ ಮಹಿಳೆಯರ ಪುರೋಭಿವೃದ್ಧಿಯನ್ನನುಸರಿಸಿದ್ದಾಗಿರಬೇಕು. ಬಡವರಾಗಿರುವ ತಮ್ಮ ಸ್ನೇಹಿತರಿಬ್ಬರು ಮೂವರನ್ನು ಉತ್ತಮಸ್ಥಿತಿಯಲ್ಲಿರುವ ಸ್ತ್ರೀಯರು ಇಂತಹ ಸಂಘಗಳಿಗೆ ಕರೆದುಕೊಂಡುಬಂದು ಸಹಾಯಮಾಡಿಸಿದಲ್ಲಿ ಸ್ತ್ರೀಯರಲ್ಲಿ ನೆಲಸಿರುವ ಕೆಲವು ಮೂಢನಂಬಿಕೆಗಳು ತೊಲಗಿ ತಮ್ಮ ಕ್ಷೇಮಕ್ಕಾಗಿ ಪಾಡುಪಡತಕ್ಕವರಿರುವರೆಂದು ಅವರವರಲ್ಲಿ ಹೇಳುವುದರಿಂದ ಇಂತಹ ಸಂಘಗಳಿಂದಾಗುವ ಸಹಾಯವನ್ನು ಇಲ್ಲಿ ಮತ್ತೆ ವಿವರಿಸಬೇಕಾಗಿಲ್ಲ.

## ಕಾರ್ಯ ನಡೆಸುವರೀತಿ

ಇಂತಹ ಸಂಘಗಳನ್ನು ಸ್ಥಾಪಿಸಿ ನಡೆಸತಕ್ಕ ವಿಷಯದಲ್ಲಿಯೂ, ಮುಖ್ಯವಾಗಿ ಇಂತಹ ಸಂಘಗಳು ಅಭಿವೃದ್ಧಿಗೆ ಬರತಕ್ಕ ವಿಷಯದಲ್ಲಿಯೂ ಇರತಕ್ಕ ಅಟಂಕವು ಆರೋಗ್ಯವಾದ ವಿಸ್ತಾರವಾದ ಸ್ಥಳಗಳಲ್ಲಿರತಕ್ಕ ಪ್ರತ್ಯೇಕ ಕಟ್ಟಡವು. ಸ್ತ್ರೀಯರು ಮಾಡತಕ್ಕ ಸಾಂಘಿಕ ಕಾರ್ಯಗಳು (Social works) ಅನೇಕಕಡೆ ಅವರು ಒಂದಾಗಿಸೇರಲು ಯೋಗ್ಯವಾದ ಕಟ್ಟಡವಿಲ್ಲದ್ದರಿಂದ ಕ್ರಮವಾಗಿ ನಡೆಯುತ್ತಿಲ್ಲವೆಂದು ಹೇಳಬಹುದು. ಇಂತಹ ಕಟ್ಟಡವು ಸಾಧಾರಣವಾಗಿ ಆ ಪ್ರಾಂತ್ಯದಸುತ್ತುಮುತ್ತಲಿರುವ ಸ್ತ್ರೀಯರು ಸುಲಭವಾಗಿ ಬರಲು ಅನುಕೂಲಸ್ಥಳದಲ್ಲಿರಬೇಕು. ಪುಸ್ತಕಭಂಡಾರ ಉಪನ್ಯಾಸಮಂದಿರ, ಸಂಗೀತಶಾಲೆ, ಆಟಪಾಠಗಳಿಗನುಕೂಲವಾದ ಸ್ಥಳ, ಇತ್ಯಾದಿಗಳಿಂದ ಕೂಡಿದುದಾಗಿರಬೇಕು. ಹೊಲಿಗೆ ತರಗತಿ, ಚಿತ್ರದ ತರಗತಿ, ಮತ್ತು ಅನೇಕ ಇತರವಿಧವಾದ ಕೈಗಾರಿಕೆ ತರಗತಿಗಳನ್ನು ನಡೆಸಲು ಅನುಕೂಲವಾದ ಸ್ಥಳವುಳ್ಳದ್ದಾಗಿರಬೇಕು. ಇಲ್ಲಿಂದ ಬಡವರಾದವರಿಗೆ ಬಟ್ಟೆಬರೆಗಳನ್ನು ಹಂಚಬಹುದು. ಸಾಧ್ಯವಿದ್ದು, ತಕ್ಕಷ್ಟು ಪ್ರೋತ್ಸಾಹವಿದ್ದರೆ ಕಲಿಯಲು ಬರುವ ದೊಡ್ಡದೊಡ್ಡ ಹೆಂಗಸರ, ಮಕ್ಕಳುಗಳ ಪರಾಂಬರಿಕೆಗಾಗಿ ಆಳುಗಳನ್ನಿಟ್ಟು ಆಡಿಸುವುದಕ್ಕೆ ಪ್ರತ್ಯೇಕಸ್ಥಳವನ್ನೇರ್ಪಡಿಸಿ ಅವರು ಸ್ವಲ್ಪ ದೊಡ್ಡವರಾದ

[ಸಶೇಷ]

# ಭಗವತೀ ಶ್ರೀ ಶಾರದಾದೇವಿಯವರು.

## (ಶ್ರೀ ರಾಮಕೃಷ್ಣ ಪರಮಹಂಸರವರ ಧರ್ಮಪತ್ನಿ)



ಜನನ ೧೮೫೩ ನಿರ್ಯಾಣ ೨೧-೭-೧೯೨೦.

ಆರ್ತಾರ್ತೇಮುದಿತೇಹೃಷ್ಟಾ ಪ್ರೋಷಿತೇಮಲಿನಾಕೃಶಾ |
ಮೃತೇಮ್ರಿಯೇತಯಾನಾರೀ ಸಾಸ್ತ್ರೀಜ್ಞೇಯಾಪತಿವ್ರತಾ ||

---

ಆಧುನಿಕಭಾರತವು ಅನೇಕ ವಿಷಯಗಳಲ್ಲಿ ಪಾಶ್ಚಾತ್ಯ ಹಾಗೂ ಪೌರಾತ್ಯ ದೇಶಗಳಿಗಿಂತ ಬಹುಮಟ್ಟಿಗೆ ಹಿಂದುಳಿದಿರುವುದಾದರೂ ಸಮಸ್ತ ಮಹಿಳಾಪ್ರಪಂಚಕ್ಕೆ ಆದರ್ಶಸ್ವರೂಪರಾದ ಸಾಧ್ವಿಶಿರೋಮಣಿಯರನ್ನು ಹೊಂದಿರುವುದರಲ್ಲಿ ಮಾತ್ರ ಇದು ಈಗಲೂ ಅಗ್ರಸ್ಥಾನವನ್ನೇ ವಹಿಸಿರುವುದೆಂಬುದು ಎಲ್ಲರಿಂದಲೂ ಒಪ್ಪಲ್ಪಟ್ಟ ಮಾತು. ಸೀತಾ ಸಾವಿತ್ರಿಯರಂತಹ ಸಾಧ್ವೀಮಣಿಯರೂ, ಮೈತ್ರೇಯಿ ಲೀಲಾವತಿಯರಂತಹ ವಿದುಷಿಯರೂ, ಜನ್ಮಗ್ರಹಣಮಾಡಿದ ಈ ಪವಿತ್ರಭೂಮಿಯು ಎಂದಿಗೂ ಭಂಜೆಯಾಗತಕ್ಕದ್ದಲ್ಲ. ಪತಿಗತಪ್ರಾಣೆಯರಾಗಿ ತಮ್ಮ ಸುಖಸಂತೋಷ

ಗಳನ್ನು ಪತಿಗೋಸ್ಕರ ತ್ಯಜಿಸಬಲ್ಲವರೆಂದರೆ ನಮ್ಮ ಭಾರತಮಹಿಳೆಯರೇ! ಇಂತಹವರಲ್ಲಿ ಶ್ರೀಮತಿ ಶಾರದಾದೇವಿಯವರೊಬ್ಬರು. ಈಕೆಯು ಉದ್ಧಾಮ ಮಹಾತ್ಮರೆನಿಸಿದ ಶ್ರೀ ರಾಮಕೃಷ್ಣ ಪರಮಹಂಸರವರ ಅರ್ಧಾಂಗಿ. ನೂತನ ಪಾಶ್ಚಾತ್ಯ ವಿದ್ಯಾಭ್ಯಾಸದಿಂದ ಭಾರತೀಯರಲ್ಲಿ ಹಾಗೂ ಬಂಗಾಳಿಗಳಲ್ಲಿ ಅಂಕುರಿಸಿದ್ದ ವಿಲಾಸಲೋಲುಪತೆ ಮತ್ತು ಆರ್ಯಧರ್ಮಗಳಲ್ಲಿ ಅವಿಶ್ವಾಸವೆಂಬ ದುಷ್ಕೃತವನ್ನು ನಾಶಮಾಡಿ ಧರ್ಮದ ಜೀವಜ್ಯೋತಿಯನ್ನು ಮತ್ತೆ ಸಂಸ್ಥಾಪನೆಮಾಡುವ ಮಹತ್ಕಾರ್ಯದಲ್ಲಿ ಆ ಮಹಾತ್ಮರಿಗೆ ನೆರವಾಗಿದ್ದ ಸಹಧರ್ಮಿಣೀ. ಚಿರಬ್ರಹ್ಮಚರ್ಯವನ್ನು ಸಾಧಿಸುತ್ತಾ ಆ ಪುಣ್ಯಪುರುಷರ ಸೇವೆಗೆ ತನ್ನ ನಾರೀದೇಹವನ್ನು ಅರ್ಹವನ್ನಾಗಿ ಮಾಡಿದ ಮಹನೀಯಳು. ಶ್ರೀ ರಾಮಕೃಷ್ಣ ಪರಮಹಂಸರು ಈಕೆಯನ್ನು ಮಾತೃಭಾವದಿಂದ ನೋಡುತ್ತಿದ್ದರು. ತಮ್ಮ ಇಷ್ಟದೈವವಾದ ಮಾದುರ್ಗಿಯ ಅವತಾರವೆಂದು ತಿಳಿದಿದ್ದರು. ಇವರೀಗ ಸ್ವರ್ಗವಾಸಿಗಳಾಗಿದ್ದರೂ ಇವರ ಅಕ್ಷಯವಾದ ಆತ್ಮವು ಸರ್ವದಾ ನಮ್ಮ ಸೋದರೀಮಣಿಯರ ಹೃದಯದ ಮಧ್ಯೆ ಆವಿಷ್ಕರಿಸಿ ಅವರನ್ನು ಇಮ್ಮಡಿ ಗುಣವತಿಯರನ್ನಾಗಿಯೂ, ಪತಿಯ ಇಷ್ಟಧರ್ಮದಲ್ಲಿ ಅನನ್ಯಸಹಾಯವನ್ನು ಕೊಡುವ ಸಹಧರ್ಮಿಣಿಯರನ್ನಾಗಿಯೂ ಮಾಡಲಿ!

ಓಂ ಶಾಂತಿಶ್ಶಾಂತಿಶ್ಶಾಂತಿಃ



ಹಾವು ಸರಸರನೆ ಹರಿದು ಕಂಟಿ (ಪೊದೆ)ಯನ್ನು ಹೊಕ್ಕಿತು. ಕೂಡಲೆ ಅಭಿಮಾನೆಯು ಓಡಿಹೋಗಿ ಮಗಳನ್ನು ಅಮಚಿಕೊಂಡು ಬಂದೇಸವನೆ ಮುದ್ದಾಡಿ ಮೊಲೆಕುಡಿಸಿದಳು.

ಆ ಹಿಂಸ್ರಪ್ರಾಣಿಯಾದ ಹಾವಿನ ಅಲೌಕಿಕ ಪ್ರೇಮದ ನೋಟ ದಿಂದಲೋ ನಾಗರಹಾವಿನ ಹೆಡೆಯನ್ನು ಕೊಡೆಯಾಗಿ ಹಿಡಿಸಿಕೊಂಡ ಕೂಸುಗಳು ಮುಂದೆ ಅರಸುತನವನ್ನು ಹೊಂದುತ್ತಾರೆಂಬ ನರೆಸಂಬಿಕೆ ಯಿಂದಲೋ ತಂದೆತಾಯಿಗಳಬ್ಬರ ಹೃದಯವೂ ಕರಗಿನೀರಾಗಿ ಹರಿಯಲಾ ರಂಭಿಸಿತು. ಆ ಕಾಲಕ್ಕೆ ಅವರಲ್ಲಿ ಹುಟ್ಟಿದ ಕಕ್ಕುಲತೆಯು ಆ ಕೂಸನ್ನು ಬಿಟ್ಟು ಹೋಗಬೇಕೆಂಬ ಅವರ ದೃಢನಿಶ್ಚಯವನ್ನು ತೇಲಿಸಿಕೊಂಡು ಹೋಗಿ ಅದನ್ನು ಎಲ್ಲಿ ಒಯ್ದುಬಿಟ್ಟಿತೋ ದೇವರೇ ಬಲ್ಲನು! ಇಬ್ಬರಲ್ಲಿ ಯೂ ಅದನ್ನು ತೆಗೆದುಕೊಂಡುಹೋಗಬೇಕೆಂಬ ಬಯಕೆಯು ಬಲಿ ಯಿತು. ಇಬ್ಬರೂ ಕೂಸನ್ನು ಬಿಟ್ಟುಹೋಗುವ ಮಾತನ್ನು ಎತ್ತದೆ, ಆ ಹಾವಿನ ಅದ್ಭುತ ಪ್ರೇಮವನ್ನೂ, ದೇವರ ಅಗಾಧವಾದ ಕರುಣೆಯನ್ನೂ ಹೊಗಳುತ್ತ ಆನಂದಾತಿರೇಕದಿಂದ ಹಾದಿಹಿಡಿದು ನಡೆದರು. ಹಾವಿನ ಅಗಮ್ಯವಾದ ಪ್ರೇಮ, ದೇವರ, ಅಪಾರಮಹಿಮೆ ಕೂಸಿನ ಭಾವಿ ಐಶ್ವರ್ಯ ಈ ಮೂರು ಮಾತುಗಳ ಹೊರತು ಬೇರೆ ಯಾವ ವಿಷಯವೂ ಅವರ ನೆನ ಪಿಗೆ ಬರಲಿಲ್ಲ.

ಹೀಗೆ ಒಂದೆರಡು ದಿವಸಗಳು ಕಳೆದುಹೋದಬಳಿಕ ಅವರಿಗೆ ತಮ್ಮ ಪರಿಸ್ಥಿತಿಯ ಅರಿವು ಬಂತು. ಈ ಕಾಲಕ್ಕೆ ಅವರು ಉಸುಬಿನ ಬಯ ಲನ್ನು ದಾಟ ಗುಡ್ಡಗಾಡು ಸೀಮೆಗೆ ಬಂದಿದ್ದರು. ಆಗ ಬಾಯಾರಿಕೆ ನೀರಡಿಕೆ ಬಿಸಲುರಿಗಳು ಕಡಮೆಯಾಗಿದ್ದರೂ ಶೀತದ ಬಾಧೆಯೂ ಕಾಡು ಮಿಕಗಳ ಕಾಟವೂ ಹೆಚ್ಚಿದ್ದವು

ಉಸುಬಿನ ಕಾಡಿನ ಕಿಚ್ಚಿನಿಂದಲೂ ಬಿಸಲಿನ ತಾಪದಿಂದಲೂ ಹೊತ್ತು ಹೊತ್ತಿಗೆ ಅನ್ನನೀರು ದೊರೆಯದ್ದರಿಂದಲೂ, ದಾರಿನಡೆಯುವ ಆಯಾಸ ದಿಂದಲೂ ಹೆರಿಗೆಯ ರಕ್ತಸ್ರಾವದಿಂದಲೂ, ಮುಂದೆ ತಮ್ಮ ಪಾಡುಏನಾ ಗುವುದೆಂಬ ಉಮ್ಮಳದಿಂದಲೂ, ತಾನೇ ತನ್ನ ಗಂಡನು ಮನೆಮಾರು ತಂದೆ ತಾಯಿಗಳನ್ನು ಬಿಟ್ಟು ನಾಡುಗೇಡಿ ಆಗಲಿಕ್ಕೆ ಕಾರಣಳಾದೆನೆಂಬ ಹಿರಿದು ಗಡಿದಿಂದಲೂ ಕೊರಗಿ ಅಭಿಮಾನೆಯು ತೀರ ಅಶಕ್ತಳಾಗಿದ್ದಳು. ಇಂತಹ

ದೇಹಸ್ಥಿತಿಯಲ್ಲಿ ಅತಿಶೀತಪ್ರದೇಶವಾದ ಗುಡ್ಡಗಾಡಿನಲ್ಲಿ ಬಂದುದರಿಂದ ಕಾದ ಹೆಂಚಿನಮೇಲೆ ನೀರು ಸುರುವಿದಂತಾಯಿತು. ಆಕೆಗೆ ಉರಿಬಂದವು. ಅಯ್ಯಾಸನು ಎಷ್ಟು ಆರೈಕೆ ಮಾಡಿದರೂ ಅವು ಕಡಮೆಯಾಗದೆ ದಿನ ದಿನಕ್ಕೆ ಹೆಚ್ಚುತ್ತ ನಡೆದವು. ಇನ್ನು ಬದಕುವ ಆಶೆ ಇಲ್ಲವೆಂದು ಅಮಿನೆಗೆ ಹೊಳೆಯಿತು. ತನ್ನ ಮುದ್ದು ಮಗಳನ್ನು ಎಷ್ಟು ಶ್ರಮವಾದರೂ ಜೋಕೆ ಮಾಡಬೇಕೆಂದು ಗಂಡನಿಂದ ಕೈಮೇಲೆ ಕೈ ಹಾಕಿಸಿಕೊಂಡು ಆಕೆಯು ಪ್ರಾಣಬಿಟ್ಟಳು!!

ಅಯ್ಯಾಸನ ದುಃಖಕ್ಕೆ ತಡೆಯೇ ಇಲ್ಲದಾಯಿತು ಮುಗಿಲು ಒಮ್ಮೆಲೆ ಅವನ ಮೇಲೆ ಕಡಿಕೊಂಡು ಬಿದ್ದಂತಾಯಿತು. ಅವನಿಗೆ ದಿಕ್ಕುಗಳೇ ತೋರಲೊಲ್ಲವು. ಅವನು ಈಗ ದಿಟವಾಗಿ ಪರದೇಶಿಯಾದುದಲ್ಲದೆ, ಒಂದು ತಿಂಗಳ ಕಂದಮ್ಮನ ಜೋಪಾನದ ಹೊರೆಯನ್ನು ಹೊತ್ತುಕೊಳ್ಳ ಬೇಕಾಯಿತು. ಮುಂದಿನ ವಿಚಾರವೇನೂ ಬಗೆಹರಿಯಲೊಲ್ಲದು. ಆತ್ಮ ಹತ್ಯದಿಂದ ಸಂಸಾರದುಃಖವನ್ನು ನೀಗಬೇಕೆಂದು ಬಗೆದನು. ಅಷ್ಟರಲ್ಲಿ ತಾನು ತನ್ನ ಪ್ರಿಯಹೆಂಡತಿಗೆ ಕೊಟ್ಟಮಾತು ನೆನಪಾಯಿತು. ಅವನು ಕರ್ತವ್ಯದಕ್ಷನೂ ಎದೆಗಾರನೂ ದೃಢನಿಶ್ಚಯನೂ ಆದ್ದರಿಂದ ಆ ವಿಚಾರವನ್ನು ಅಷ್ಟಕ್ಕೇ ಅಡಗಿಸಿಕೊಂಡನು. ಎಲ್ಲ ಕೋಟಲೆಯನ್ನೂ ತಾಳಿ ಆ ಕೂಸನ್ನು ಸಂರಕ್ಷಿಸಿ ತಾನು ಕೊಟ್ಟ ವಚನದಿಂದ ಮುಕ್ತನಾಗ ಬೇಕೆಂದು ನಿರ್ಧರಿಸಿದನು. ಇನ್ನುಮುಂದೆ ಅಲ್ಲಿ ನಿಂತು ಎಷ್ಟು ದುಃಖಿ ಸಿದರೂ ಏನೂ ಪ್ರಯೋಜನವಿಲ್ಲೆಂದು ಮನಗಂಡು, ವ್ಯರ್ಥವಾಗಿ ಕಾಲಕಳೆಯುವುದು ಸರಿಯಲ್ಲವೆಂದೆಣಿಸಿ, ಆ ಪರದೇಶಿಯಾದ ಕೂಸನ್ನು ಎದೆಗೆ ಅವಚಿಕೊಂಡು, ಸಾಮಾನಿನ ಗಂಟನ್ನು ತಲೆಯ ಮೇಲೆ ಹೊತ್ತು ಕೊಂಡು ಈ ದೇಶದ ದಾರಿಯನ್ನು ಹಿಡಿದನು.

ಒಂದೆರಡು ದಿವಸ ಹಾದಿ ನಡೆಯುವಷ್ಟರಲ್ಲಿ ಒಂದು ದಿನ ನಡುಹಗ ಲಿನಲ್ಲಿ ೩೧೪ ಡೇರೆಗಳೂ ಹತ್ತಿಪ್ಪತ್ತು ಕುದುರೆಗಳೂ, ಎಂಟುಹತ್ತು ಒಂಟೆಗಳೂ ಬಹುಜನರ ಸುಳದಾಟವೂ ಅಯ್ಯಾಸನ ಕಣ್ಣಿಗೆ ಬಿದ್ದವು. ಆಗ ಅವನಿಗಾದ ಆನಂದವು ಕೆಳಗೆ ಬರೆದ ಶ್ಲೋಕದಲ್ಲಿ ಹೇಳಿದ ಜನರ ಆನಂದದಷ್ಟಾಯಿತು—

ಬಡವ ನಡೆನಡೆಯುತ್ತ ಭಾಗ್ಯವ ನೆಡಹಿ ತಾ ಕಂಡಂತೆ |
ರೋಗಿಯು ಹುಡುಕುತಿರ್ದೌಷಧದ ಲತೆ ಕಾಲ್ತೊಡರಿ ಕಾಣ್ಬಂತೆ||

ಅವನು ನಲವಿನಿಂದ ಹಿರಿಹಿರಿ ಹಿಗ್ಗಿದನು. ಕೂಡಲೆ ಅಲ್ಲಿಗೆ ಹೋಗಿ ಆಳುಗಳಿಗೆ ಹೇಳಿಕೊಂಡು ಒಳಗೆ ಹೋಗಿ ಅವರ ಒಡೆಯನ ಮುಂದೆ ಉದ್ದಕ್ಕೆ ಅಡ್ಡಬಿದ್ದನು. ಆ ಒಡೆಯನು ಅವನನ್ನು ಎಬ್ಬಿಸಿ ಕುಳ್ಳಿರಿಸಿ ಅವನ ಹೆಂಡತಿಯು ಅಡವಿ ಹೆಣವಾದ ಸುದ್ದಿಯನ್ನು ಕೇಳಿ ಕನಿಕರಪಟ್ಟು ಅವನಿಂದ ಆ ಕೂಸನ್ನು ತೆಗೆದುಕೊಂಡು, ಅವನಿಗೆ ಊಟೋಪಚಾರ ಮಾಡಿಸಲಿಕ್ಕೆ ನೆರಯಲ್ಲಿದ್ದ ಡೇರೆಗೆ ಕಳುಹಿಸಿದನು. ಅಯ್ಯಾಸನು ತೆಹರಾನ ಬಿಟ್ಟಂದಿನಿಂದ ಹೊಟ್ಟೆತುಂಬ ಊಟಮಾಡಿದ್ದು ಆ ಹೊತ್ತೇಸರಿ. ಊಟಮಾಡಿ ಬಂದಬಳಿಕ ಯಜಮಾನನು ತಾನು ಕಂದಹಾರದ ವ್ಯಾಪಾರಿಯೆಂತಲೂ ತಾನು ಸರಕು ತೆಗೆದುಕೊಂಡು ಹೊರಟಿರುತ್ತೇನೆಂತಲೂ, ಅಯ್ಯಾಸನನ್ನು ತನ್ನ ಸಂಗಡ ಕರೆದುಕೊಂಡು ಹೋಗುವೆನೆಂತಲೂ ಹೇಳಿದನು.

ಈ ಆತಿಥ್ಯವನ್ನೂ ಈ ಅನಿಮಿತ್ತ ಪ್ರೇಮವನ್ನೂ ಕಂಡು ಅಯ್ಯಾಸನಿಗೆ ಹೊಟ್ಟೆ ಹಿಡಿಸಲಾರದಷ್ಟು ಆನಂದವಾಯಿತು. ಆದ್ದರಿಂದ ಅವನು ದೇವರ ಅಗಾಧಮಹಿಮೆಯನ್ನೂ ತಡೆಯಿಲ್ಲದ ಶಕ್ತಿಯನ್ನೂ ಅನಂತಪ್ರೀತಿಯನ್ನೂ ಕೊಂಚ ಹೊತ್ತು ಕಣ್ಣುಮುಚ್ಚಿ ನಿಸ್ಸೀಮ ಭಕ್ತಿಯಿಂದ ಕೊಂಡಾಡಿದನು. ಬಳಿಕ ಆ ವರ್ತಕನ ಕೋರಿಕೆಯಂತೆ ಕೆಲದಿನ ಅವನ ಬಳಿಯಲ್ಲಿರಲಿಕ್ಕೆ ಒಪ್ಪಿಕೊಂಡನು.

ಅಯ್ಯಾಸನು ಊಟಕ್ಕೆ ಹೋದಾಗ ಅವನ ಕೂಸನ್ನು ಆ ವರ್ತಕನು ತನ್ನ ಹೆಂಡತಿಗೆ ತೋರಿಸಿದನು. ಅದರ ಅಂದಚಂದ ಸೊಬಗನ್ನು ನೋಡಿ ಆಕೆಯು ಅದಕ್ಕೆ ಮೋಹಿಸಿದಳು. ಕರ್ಮಧರ್ಮಸಂಯೋಗದಿಂದ ಆಕೆಯ ಕೂಸು ಸತ್ತು ಒಂದು ತಿಂಗಳಮಾತ್ರ ಆಗಿತ್ತು. ಆದ್ದರಿಂದ ತನ್ನ ಸತ್ತಕೂಸನ್ನೇ ದೇವರು ತನಗೆ ಮರಳಿ ಕೊಟ್ಟನೆಂದು ನೆನಿಸಿ ಆಕೆಯು ಅದಕ್ಕೆ ಮೊಲೆಕೊಡಲಾರಂಭಿಸಿದಳು. ಮೊಲೆ ಕಾಣದ ಆ ಕೂಸು ಆನಂದದಿಂದ ಕುಡಿಯಲಾರಂಭಿಸಿತು. ಹಾಲಿನ ರೂಪದಿಂದ ಆಕೆಯ ಪ್ರೇಮವು ಆ ಕೂಸಿನ ಮೆಯ್ಯೆಲ್ಲಾ ವ್ಯಾಪಿಸಿತು. ದೇವರ ಮಹಿಮೆಯಿಂದ ಆ ಕೂಸು ತನ್ನದೇ ಎಂದು ಆಕೆಯು ಮನಸ್ಸಿನಲ್ಲಿ ಭಾವಿಸಿ

ಉಂಟಾಯಿತು. ಆದ್ದರಿಂದ ಆಕೆಯು ಆ ಕೂಸನ್ನು ಹೇಗಾದರೂ ಮಾಡಿ ಇಟ್ಟುಕೊಳ್ಳಬೇಕೆಂದು ಗಂಡನನ್ನು ಬೇಡಿಕೊಂಡಳು. ತನ್ನ ಹೆಂಡತಿಯ ಕೋರಿಕೆಯನ್ನು ಪೂರೈಸುವ ಉದ್ದೇಶದಿಂದಲೇ ಆ ವರ್ತಕನು ಮೇಲೆ ಹೇಳಿದಂತೆ ಅಯ್ಯಾಸನಿಗೆ ತನ್ನ ಸಂಗಡ ಬರಲಿಕ್ಕೆ ಸೂಚಿಸಿದನು; ಮತ್ತು ಅಯ್ಯಾಸನು ಆ ಸೂಚನೆಗೆ ಒಪ್ಪಿಕೊಂಡು ಅವನನ್ನು ಹಿಂಬಾಲಿಸಿದನು. ಆದ್ದರಿಂದ ಅವನಿಗೆ ತನ್ನ ಹೆಂಡತಿಯು ಸಾವಿನ ಉಮ್ಮಳದ ಹೊರತು ಬೇರೆ ಯಾವ ಹಂಬಲವೂ ಉಳಿಯಲಿಲ್ಲ.

ಅಯ್ಯಾಸನು ಅನಾಯಾಸವಾಗಿ ವರ್ತಕನ ಪರಿವಾರದೊಡನೆ ದಾರಿನಡೆಯುತ್ತಾ ಲಾಹೋರಿಗೆ (ಕಂದಹಾರ)ಬಂದುಮುಟ್ಟಿದನು. ವರ್ತಕನ ಹೆಂಡತಿಯು ಮೊಲೆಕುಡಿಸುತ್ತಿದ್ದುದರಿಂದ ಕೂಸು ಪುಷ್ಟಿಯಾಗಿ ಬೆಳೆಯತೊಡಗಿತು. ಆಕಾಲಕ್ಕೆ ಈಗಿನಂತೆ ಅಂಚೆಯ ಏರ್ಪಾಡಿದ್ದಿಲ್ಲ, ತಂತಿಸುದ್ದಿ ಇದ್ದಿಲ್ಲ, ಉಗೆಬಂಡಿಯ ಪ್ರಯಾಣವಿದ್ದಿಲ್ಲ ; ಅದೇಕೆ ಊರಿಂದೂರಿಗೆ ಹೋಗಲಿಕ್ಕೆ ಸರಿಯಾಗಿ ಮಾಡಿದ ದಾರಿಗಳೆ ಇದ್ದಿಲ್ಲ. ಆದ್ದರಿಂದ ದಿಲ್ಲಿಯ ಚಕ್ರವರ್ತಿಯಾದ ಅಕ್ಬರ ಬಾದಶಹನು ಎಲ್ಲಿರುತ್ತಾನೆಂದು ತಿಳಿದುಕೊಳ್ಳಲಿಕ್ಕೆ ಅಯ್ಯಾಸನಿಗೆ ಬಹಳ ಪ್ರಯಾಸವೂ ಕಾಲವ್ಯಯವೂ ಹತ್ತಿತು. ೪-೫ ತಿಂಗಳ ಮೇಲಾದರೂ ಈ ಸಂಗತಿಯು ತಿಳಿದುದು ಅವನ ಸುದೈವವೇ ಸರಿ. ರಜೆ ತೆಗೆದುಕೊಂಡುಬಂದ ಒಬ್ಬ ದಂಡಾಳಿನ ಭೆಟ್ಟಿಯು ಅಕಸ್ಮಾತ್ತಾಗಿ ಅವನಿಗೆ ಆದುದರಿಂದ ಬಾದಶಹನು ಜೆಹಲಮ ಹೊಳೆಯ ದಂಡೆಯ ಮೇಲಿದ್ದ ಬಹಿರೆ ಎಂಬ ಊರಲ್ಲಿ ಪಾಳೆಯ ಹಾಕಿಕೊಂಡಿರುತ್ತಾನೆಂತಲೂ ಅವನ ಬೇಟೆಯ ಪೂರ್ವಸಿದ್ಧತೆಯು ನಡೆದಿರುತ್ತದೆಂತಲೂ ಗೊತ್ತಾಯಿತು ಕೂಡಲೆ ಅವನು ವರ್ತಕನಿಗೆ ಈ ಸುದ್ದಿಯನ್ನು ತಿಳಿಸಿದನು. ದೈವಯೋಗದಿಂದ ಆ ವರ್ತಕನಿಗೆ ಲಾಹೋರಿನ ಸುಬೇದಾರನೊಡನೆ ಮನೆತನದ ಬಳಕೆಯಿತ್ತು. ಆದ್ದರಿಂದ ಆ ಸುಬೇದಾರನು ತನ್ನ ಗೆಳೆಯನಾದ ಅಬ್ದುಲ್ ಖಾನನಿಗೆ ಒಂದು ಕಾಗದವನ್ನು ಕೊಟ್ಟನು. ಆ ಕಾಗದವನ್ನು ತೆಗೆದುಕೊಂಡು ಅವನು ಬಹಿರೆಗೆ ಹೊರಟನು (ಮೇ ೧೫೩೮).

"ಶ್ರೇಯಾಂಸಿ ಬಹುವಿಘ್ನಾನಿ" ಎಂಬ ಸಕ್ಕದ ಗಾದೆಯ ಅನುಭವವು ಈ ಕಾಲಕ್ಕೆ ಅಯ್ಯಾಸನಿಗೆ ಬಂತು. ಅವನು ಬಹಿರೆಗೆ ಹೋಗಿ

ಸುಬೇದಾರನ ಓಲೆಯನ್ನು ಕೊಡಲು, ಅದನ್ನು ನೋಡಿ ಅಬುಲ್ ಘಾಜಲ್ಲನು ಅವನಿಗೆ ಆದರ ಸತ್ಕಾರವಮಾಡಿದನು. ಆದರೆ ಆ ಕಾಲಕ್ಕೆ ಬಾದಶಹನ ಪ್ರಕೃತಿಯು ಅಸ್ವಸ್ಥವಾಗಿತ್ತು. ಆದ್ದರಿಂದ ಅವನನ್ನು ಬಾದಶಹನ ಕಡೆಗೆ ಒಯ್ದು ಬೆಟ್ಟಿಮಾಡಿಸಲಿಕ್ಕೆ ಅನುಕೂಲವಿದ್ದಿಲ್ಲ ಬಾದಶಹನ ಆರೈಕೆಮಾಡಲಿಕ್ಕೆ ಅವನ ತಾಯಿಯು ಆಗ್ರದಿಂದ ಬರುವವಳಿದ್ದಳು. ಆದಕಾರಣ ಮುಂದೆ ಏನುಮಾಡಬೇಕೆಂಬುದು ಅಯ್ಯಾಸನಿಗೆ ಹೊಳೆಯಲಿಲ್ಲ. ಅಲ್ಲೇ ಇರಬೇಕೆಂದರೆ ಉದರನಿರ್ವಾಹಕ್ಕೆ ಮಾರ್ಗವಿದ್ದಿಲ್ಲ. ತಿರುಗಿ ಹೋಗಬೇಕೆಂದರೆ ಅವನು ಇದ್ದಲ್ಲಿ ಬಾದಶಹನ ಆರೋಗ್ಯದ ಬಸುಗೆಯು ತಿಳಿಯಲಿಕ್ಕೆ ಅನುಕೂಲವಿದ್ದಿಲ್ಲ ಒಂದು ಕಡೆ ಬಾವಿ, ಒಂದುಕಡೆ ಕೆರೆ, ಈಬಗೆಯಾಗಿ ಉಮ್ಮಳಿಸುತ್ತ ಕುಳಿತಿರುವಾಗ ಅಬುಲ್‌ಘಾಜಲ್ಲನೆ ಒಂದು ಉಪಾಯವನ್ನು ತೆಗೆದನು. ೮-೧೦ ದಿವಸಗಳ ಬಳಿಕೆಯಿಂದ ಅಯ್ಯಾಸನು ಓದಿದವನೆಂತಲೂ ಬುದ್ಧಿಯುಳ್ಳವನೆಂತಲೂ ಮಾತಿನಲ್ಲಿ ಚತುರನೆಂತಲೂ ಅವನು ಮನಗಂಡನು. ಅವನ ವಿಶಾಲವಾದ ಹಣೆಯನ್ನೂ ಅರಳಿದ ಹೂವಿನಂತಿರುವ ಕಣ್ಣನ್ನೂ ಸಂಪಿಗೆಹೂವಿನಂತೆ ನೀಟಾದ ಅವನ ಮೂಗನ್ನೂ ತೇಜಸ್ವಿಯಾದ ಮೋರೆಯನ್ನೂ ಹರವಾದ ಎದೆಯನ್ನೂ ಉದ್ದಾದ ಕೈಗಳನ್ನೂ, ಎತ್ತರವಾದ ನಿಲುವಿಕೆಯನ್ನೂ ನೋಡಿ ಅಬುಲ್ ಘಾಜಲ್ಲನು ಅವನನ್ನು ಹೇಗಾದರೂ ಮಾಡಿ ಇಟ್ಟುಕೊಳ್ಳಬೇಕೆಂದು ಮನದಲ್ಲಿ ನಿಶ್ಚಯಿಸಿಕೊಂಡು ಅವನಿಗೆ ಬಾದಶಹನಿಗೆ ಗುಣವಾಗುವ ವರೆಗೆ ತನ್ನ ಬಕ್ಷಿಯಾಗಿ ನಿಲ್ಲಲಿಕ್ಕೆ ಸೂಚಿಸಿದನು. "ರೋಗಿ ಬಯಸಿದ್ದು ಹಾಲೋಗರ, ವೈದ್ಯನು ಹೇಳಿದ್ದು ಹಾಲೋಗರ" ಎಂಬ ಗಾದೆಯಂತೆ ಅಯ್ಯಾಸನು ಆನಂದದಿಂದ ಅವನ ಬಕ್ಷಿಯಾಗಲಿಕ್ಕೆ ಒಪ್ಪಿಕೊಂಡು, ತನ್ನ ಕೂಸನ್ನು ತರಲಿಕ್ಕೆ ತಿರುಗಿ ಹೊರಟನು. ಲಾಹೋರಿನಲ್ಲಿದ್ದ ವರ್ತಕನ ಹೆಂಡತಿಯು ಆ ಮುದ್ದು ಕೂಸನ್ನು ಕೊಡಲಿಕ್ಕೆ ಬೇಗನೆ ಒಡಂಬಡಲಿಲ್ಲ. ಆಕೆಯು ಸಂರಕ್ಷಣೆ ಮಾಡಲಿಕ್ಕೆ ಆ ಕೂಸನ್ನು ತನಗೇ ಕೊಡಬೇಕೆಂದು ಪರಿಪರಿಯಿಂದ ಬೇಡಿಕೊಂಡಳು. ತನ್ನ ಹೆಂಡತಿಗೆ ಮಾತುಕೊಟ್ಟುದರಿಂದ ಆ ಜೋಪಾನದ ಹೊರೆಯನ್ನು ಎರಡನೆಯವರ ಮೇಲೆ ಹಾಕದೆ ತಾನೇ ಹೊರಬೇಕಾಗಿರುತ್ತದೆಂದು ಅಯ್ಯಾಸನು ಖಂಡಿತವಾಗಿ ಹೇಳಿದನು. ಕೊನೆಗೆ ಆಕೆಯು ಆ ಕೂಸನ್ನು

ಅತಿದುಃಖದಿಂದ ಅವನಿಗೆ ಒಪ್ಪಿಸಿದಳು. ಆ ಕೂಸಿನೊಡನೆ ಬಹಿರೆಗೆ ಬಂದು ಅಯ್ಯಾಸನು ಅಬುಲ್ ಫಜಲ್ಲನ ಬಕ್ಷಿಯಾಗಿ ನಿಂತನು. ಆ ಹೊತ್ತಿಗೆ ಅವನ ದುರದೃಷ್ಟವು ಮುಗಿಯಿತು ಮತ್ತು ಸುದೈವವು ತೆರೆಯಿತು. ಅವನು ಮುಂದೆ ಸಾಮ್ರಾಜ್ಯದ ಲೆಕ್ಕಿಗನೂ ಬಂಡಾರದವನೂ ಆಗಿ ಬಾದಶಹನ ಪೂರ್ಣನಂಬಿಕೆಗೆ ಪಾತ್ರನಾದನು.

ಹೀಗೆ ಐಯ್ದಾರು ವರುಷಗಳು ಕಳೆದುಹೋದವು. ಹಗಲು ೧೦ ತಾಸು "ಅಮೀನೆ ಅಮೀನೆ" ಎಂದು ಹಲಬುತ್ತಿದ್ದ ಅಯ್ಯಾಸನು ಆಕೆಯನ್ನು ಮರೆಯತೊಡಗಿದನು. ಪ್ರಪಂಚದ ಮಾಯೆಯು ಅನಿವಾರ್ಯವಾದುದು ಮತ್ತು ಕಾಲದ ಮಹಿಮೆಯು ಅವರ್ಣನೀಯವಾದುದು. ಮಹಾತ್ಮರಾದ ಪರಮಹಂಸರ ಹೊರತು ಉಳಿದವರೆಲ್ಲರೂ ಈ ಮಾಯೆಯ ಬಲೆಗೆ ಸಿಲುಕುವವರೇ. ಪ್ರಿಯರ ಸತ್ತ ದಿವಸದ ದುಃಖವು ಮರುದಿವಸ ಇರುವುದಿಲ್ಲ, ತಿಂಗಳಾದ ಬಳಿಕ ಅದಕ್ಕೂ ಕಡಮೆ, ವರ್ಷವಾದ ಬಳಿಕ ಅದಕ್ಕೂ ಕಡಮೆ. ಈಗ ಅಮೀನೆಯು ಸತ್ತು ೬|೭ ವರ್ಷಗಳಾಗಿದ್ದವು. ಆದ್ದರಿಂದ ಅಯ್ಯಾಸನ ದುಃಖವು ಬಹಳ ಕಡಮೆಯಾಗಿತ್ತೆನ್ನಲಿಕ್ಕೆ ಅಡ್ಡಿಯಿಲ್ಲ. ಅವನು ತನ್ನ ವಿರಾಮಕಾಲವನ್ನು ಓದುಬರಹದಲ್ಲಿಯೂ, ತನ್ನ ಮುದ್ದುಮಗಳಿಗೆ ಕಲಿಸುವುದರಲ್ಲಿಯೂ, ಆಟನೋಟಗಳಲ್ಲಿಯೂ ಕಳೆಯುತ್ತಿದ್ದನು. ಆದರೆ ಇರುಳೂಟದ ಬಳಿಕ ಅವನ ಮಗಳು ಬೇಗನೆ ಮಲಗುತ್ತಿದ್ದುದರಿಂದ ಅವನಿಗೆ ಒಬ್ಬಂಟಿಗತನದ ಅನುಭವವು ಬರುತ್ತಿತ್ತು. ಆಗ ಸ್ವಾಭಾವಿಕವಾಗಿ ಅವನ ಪ್ರೀತಿಯ ಅಮೀನೆಯು ನೆನಪಾಗುತ್ತಿದ್ದಳು. ಆಕೆಯ ಚೆಲುವಿಕೆಯನ್ನೂ, ಗುಣಾತಿಶಯವನ್ನು ನೆನೆನೆನೆದು ಕಣ್ಣೀರು ಸುರಿಸುತ್ತಿದ್ದನು. ತಂದೆತಾಯಿಗಳ ಅಗಲುವಿಕೆಗೂ ದೇಶತ್ಯಾಗಕ್ಕೂ ಅಮೀನೆಯೇ ಕಾರಣಳಾದಳೆಂದು ಆಕೆಯನ್ನು ಕೆಲಹೊತ್ತು ಹಳಿಯುತ್ತಿದ್ದನು. ತರುವಾಯ ತನಗೆ ಮುದ್ದುಮಗಳೂ, ಈಗ ಅನುಭವಿಸುವ ಸುಖವೂ ಅಬುಲ್‌ಫಾಜಲ್ ಫೈಜಿ ಬೀರಬಲ್ಲ ಇಂತಹ ಘನವಿದ್ವಾಂಸರ ಮತ್ತು ಪಂಡಿತರ ಸಹವಾಸವೂ ಅಕ್ಬರ ಬಾದಶಹನಂತಹ ಉದಾರಚಕ್ರವರ್ತಿಯ ಆಶ್ರಯವೂ ತಾನು ಆಕೆಯನ್ನು ಮದುವೆಮಾಡಿಕೊಂಡದ್ದರಿಂದಲೇ ದೊರೆತವೆಂದೆಣಿಸಿ ಹಿಗ್ಗಿ, ಆಕೆಯನ್ನು ಕೊಂಡಾಡುತ್ತಿದ್ದನು. ಈ ಎಣಿಕೆಯ ತೆರೆಗಳ ಮೇಲೆ

ತೇಲಾಡುವಾಗ ಹೊಂಚುಹಾಕಿಕೊಂಡು ಕುಳಿತಿದ್ದ ನಿದ್ರೆವೆಣ್ಣು ಒಮ್ಮೆ ಮೇಲೆ ಹಾರಿಬಂದು ಅವನ ಮೇಲೆ ಬಿದ್ದು ಮುಸುಕಿ ಕಟ್ಟಿ ಅವನನ್ನು ತನ್ನ ಸೆರೆಯಾಳಾಗಿ ಮಾಡುತ್ತಿದ್ದಳು.

ಅಯ್ಯಾಸನ ಸ್ಥಿತಿಯಲ್ಲಿದ್ದ ಗೃಹಸ್ಥರು ಬಹಳ ವರ್ಷ ವಿಧುರರಾಗಿ ಇರಲಾರರೆಂಬ ಮಾತು ಪ್ರವೃತ್ತಿಮಾರ್ಗದಲ್ಲಿದ್ದ ಎಲ್ಲ ಸಂಸಾರಿಕರಿಗೆ ಗೊತ್ತಿದ್ದ ಸಂಗತಿಯೇ ಸರಿ. ಅಭಿಮಾನೆಯು ಸ್ವಚ್ಛಂದದಿನಿಂದ ಆಗ್ರಾಕ್ಕೆ ಬರುವ ವರೆಗೆ ೨ನೆಯ ಮದುವೆ ಮಾಡಿಕೊಳ್ಳಬಾರದೆಂದು ಅವನು ದೃಢ ನಿಶ್ಚಯ ಮಾಡಿದ್ದನು. ಬಾದಶಹನ ಆಶ್ರಯವು ದೊರೆತಂದಿನಿಂದ ಅವನ ಅಧಿಕಾರವೂ ಸಂಪತ್ತೂ ಬೆಳೆಯಲಾರಂಭಿಸಿದವು. ಅವನಿಗೆ ೩೦ ವರ್ಷಗಳು ಇನ್ನೂ ತುಂಬಿದ್ದಿಲ್ಲ. ಇಂತಹ ಹೊರಹೊಮ್ಮುವ ಹರೆಯದಲ್ಲಿ ಅವನು ಹೆಂಡತಿಯಿಲ್ಲದಿರಲೆಳಸುವುದು ಎಲ್ಲರಿಗೂ ಬಲು ಸೋಜಿಗವಾಗಿ ಕಂಡಿತು. ಆಗ್ರಾದಲ್ಲಿ ಅವನಿಗೆ ಹತ್ತಿಹೊಂದಿದವರಾರೂ ಇದ್ದಿಲ್ಲ. ಆದ್ದರಿಂದ ಅವನ ಆಶ್ರಿತರೂ ಗುರುತಿನವರೂ ಗೆಳೆಯರೂ ಬೇಕಾದವರೂ ಉಪಕೃತರೂ ೨ನೆಯ ಮದುವೆಮಾಡಿಕೊಳ್ಳಬೇಕೆಂದು ಎಡೆಬಿಡದೆ ಅವನಿಗೆ ಸೂಚಿಸತೊಡಗಿದರು. ಪ್ರಾರಂಭದಲ್ಲಿ ಅವನು ತನ್ನ ಗುಟ್ಟನ್ನು ಹೊರಗೆಡವದೆ ಸುಮ್ಮನಿರುತ್ತಿದ್ದನು. ಅವನ ಮೌನವನ್ನು ಕಂಡು ಎಲ್ಲರೂ ಆಶ್ಚರ್ಯಭರಿತರಾಗುತ್ತಿದ್ದರು. ಅವರಿಗೆ ಕಾರಣವೇನೂ ತಿಳಿಯಲೊಲ್ಲದು. ಪೂರ್ಣಯೌವನ-ಧನಸಂಪತ್ತು ಅಧಿಕಾರ ಇವು ಮೂರೂ ಇದ್ದು ಅವನು ಏಕೆ ಮದುವೆ ಒಲ್ಲನೆಂಬುದು ಅವರೆಲ್ಲರಿಗೂ ಗುಂಬುಬಿತ್ತು. ಅವನಿಗೆ ಆಗಲಾರದವರು ಅವನು ತೃತೀಯ ಪ್ರಕೃತಿಯ ಪುರುಷ (ನಪುಂಸಕ)ನಾಗಿರಬಹುದೆಂದು ಅಭಿಪ್ರಾಯಪಟ್ಟರು. ಮೊದಲಿನ ಹೆಂಡತಿಯು ಅತಿಪ್ರಿಯಳಾದ್ದರಿಂದ ಆಕೆಯ ನೆನಪು ಮದುವೆಗೆ ಅಡ್ಡ ಬರುತ್ತದೆಂದು ಹಲವರು ಹೇಳಿದರು. ಸಾಯುವಾಗ ಮೊದಲಿನ ಹೆಂಡತಿಯು ೨ನೆಯ ಮದುವೆ ಮಾಡಿಕೊಳ್ಳಬಾರದೆಂದು ಅವನಿಂದ ಮಾತು ತೆಗೆದುಕೊಂಡಿರಬಹುದೆಂದು ಕೆಲವರು ತರ್ಕಿಸಿದರು. ಮಗಳ ಮೇಲಿದ್ದ ತನ್ನ ಪ್ರೇಮಾತಿಶಯಕ್ಕೆ ತೊಂದರೆ ಬರಬಹುದೆಂದು ೨ನೆಯ ಮದುವೆಯ ವಿಚಾರವನ್ನುಬಿಟ್ಟಿರುತ್ತಾನೆಂದುಮತ್ತೆ ಕೆಲವರು ಅನುಮಾನ ಮಾಡಿದರು.

ಈಮೇರೆಗೆ ಊರಲ್ಲೆಲ್ಲ ಅಯ್ಯಾಸನ ಮದುವೆಯ ಸಲುವಾಗಿ

ತರ್ಕಕುತರ್ಕಗಳು ನಡೆಯಲಾರಂಭಿಸಿದವು. ಈ ಚರ್ಚೆಯ ಸುದ್ದಿಯು ಆಗಿಂದಾಗ ಅವನ ಕಿವಿಯಮೇಲೆ ಬೀಳುತ್ತಿತ್ತು. ಅವನು ಜನರು ಹೇಳಿದ್ದನ್ನೆಲ್ಲ ಕೇಳಿ ಮುಗುಳುನಗೆ ನಕ್ಕು ಸುಮ್ಮನಿರುತಿದ್ದನು. ಎಷ್ಟು ಕೆಣಕಿದರೂ ಒಂದು ತುಟಿ ಎರಡುಮಾಡುತ್ತಿರಲಿಲ್ಲ. ಕಟ್ಟಕಡೆಗೆ ಅವನೊಬ್ಬ ಜೀವದ ಗೆಳೆಯನು ಈ ಮದುವೆಯ ಮಾತನ್ನು ಅವನ ಮುಂದೆ ಎತ್ತಿದನು.

ಗೆಳೆಯ:—ಅಯ್ಯಾಸ ಬೇಗ, ಹೋದಲ್ಲೆಲ್ಲ ಗುರುತಿನ ಗಂಡಸರೂ ಹೆಂಗಸರೂ "ನೀನು ಎಂದು ಮದುವೆಮಾಡಿಕೊಳ್ಳುತ್ತಿ" ಎಂದು ಕೇಳುತ್ತಾರೆ. ನೀನು ಲಗ್ನಮಾಡಿಕೊಳ್ಳುವುದಿಲ್ಲೆಂದು ಹೇಳಿದರೆ ಅದೇಕೆ ಎಂದು ಪ್ರಶ್ನೆ ಮಾಡುತ್ತಾರೆ. ಅವರಿಗೆ ಉತ್ತರ ಕೊಟ್ಟು, ಕೊಟ್ಟು ಬೇಸತ್ತೆನು. ಇನ್ನು ಮುಂದೆ ಯಾರ ಮನೆಗೂ ಹೋಗಬಾರದೆಂದು ನಿಶ್ಚಯಿಸಿದ್ದೇನೆ.

ಅಯ್ಯಾಸ— ಈ ಊರಿನವರು ನಿರುದ್ಯೋಗಿಗಳೋ ಕಿಡಿಗೇಡಿಗಳೋ ? ನನ್ನ ಮದುವೆಯ ಗೊಡವೆ ಅವರಿಗೇನು? ಮುನ್ನೋಡಿ ತಮ್ಮ ತಮ್ಮ ಮನೆಯ ವಿಚಾರಮಾಡುವುದನ್ನು ಬಿಟ್ಟು ನನ್ನ ಮದುವೆಯ ಬಗ್ಗೆ ಏಕೆ ತಲೆಚಚ್ಚಿಕೊಳ್ಳುತ್ತಾರೆ ?

ಗೆ—ಹಾಗಂದರೆ ಹೇಗೆ ? ಮದುವೆಯು ಸಾಮಾಜಿಕವಿಷಯವಲ್ಲವೇ? ಸಮಾಜದವರಿಗೆ ಸಾಮಾಜಿಕ ವಿಷಯದ ವಿಚಾರಮಾಡಲಿಕ್ಕೆ ಪೂರ್ಣ ಅಧಿಕಾರವಿರುತ್ತದೆ. ಆದ್ದರಿಂದ ಅವರು ವಿಚಾರಮಾಡುವುದು ತಪ್ಪೆಂದು ಹೇಗೆ ಹೇಳಬೇಕು ?

ಅಯ್ಯಾಸ—ಮದುವೆಯ ಸಮಾರಂಭವು ಸಾಮಾಜಿಕವಾದರೂ ಯಾವನಾದರೊಬ್ಬನು ಮದುವೆಮಾಡಿಕೊಳ್ಳುವುದೂ ಬಿಡುವುದೂ ವ್ಯಕ್ತಿಮಾತ್ರಕ ವಿಷಯವಾಗಿರುತ್ತದೆ. ನನ್ನ ಆಪ್ತೇಷ್ಟರು ಮಾತ್ರ ಆ ಸಂಬಂಧದಿಂದ ಕೇಳಬಹುದು. ಉಳಿದವರು ಅದರಲ್ಲಿ ಬಾಯಿಹಾಕುವುದು ತಪ್ಪಲ್ಲದೆ ಮತ್ತೇನು ?

ಗೆಳೆ—ಅಯ್ಯಾಸಬೇಗ, ಇದೆಂತಹ ನಿನ್ನ ವಿಚಾರ ? ನಮ್ಮ ಸಮಾಜವು ಬೆಳೆಯಬೇಕೆಂದು ಬಯಸುವುದು ಸರ್ವರೆಲ್ಲರ ಕರ್ತವ್ಯವಲ್ಲವೇ ?

[ಸಶೇಷ]

ಓಂ

# ಸರಸ್ವತಿ

ಸಂಪುಟ ೫ | ಕ್ರೋಧನ ವರ್ಷ— ಶ್ರಾವಣ ಮಾಸ | ಸಂಚಿಕೆ ೪

## ಅಭಿನಂದನ



ಸುಲಲಿತ ಕಾವ್ಯ ಕೋಮಲ ಸುಹಾಸಿನಿ। ರೂಪಳ ರಮ್ಯರೂಪೆ। ಸೋ |
ಜ್ವಲ ಸರಸಪ್ರಭಂದ ಭರಭಂದುರೆ । ಸುಂದರನವ್ಯಸತ್ಕಥಾ ||
ವಿಲಸದ ಮಂದ ವಿಭ್ರಮ ವಿಲಾಸಿನಿ ಸಜ್ಜನ ಸೇವ್ಯೆಯಾಗುತಂ |
ನಲಿಯುಗೆ ನಮ್ಮ ಚಿತ್ತದೆ ‘‘ಸರಸ್ವತಿ’’ ಭಾರತಿಯಂತೆ ಸಂತತಂ ||೧||

ಮಹಿಳೆಯರೇಳ್ಗೆಯ ಬಯಸುತೆ |
ಮಹಿಳಾಜನದೊಲವನಾಂತು ಪ್ರತಿಮಾಸದೊಳಂ ||
ಮಹಿಳಾಧರ್ಮವಭೋದಿಪ |
ಮಹಿತೆ ‘‘ಸರಸ್ವತಿಗೆ’’ ಮಂಗಳಂ ಚಿರಮಿರ್ಕೆ ||೨||

ಒಗುಮಿಗೆ ಸಲ್ಪ ಮಾತುಗಳನಾಡುವ ಮೋಹದಪುತ್ರಿಯಂತೆ ಪ್ರೀ |
ತಿಗೆ ನೆಲೆಯಾಗಿ ನಲ್ನುಡಿಗಳಿಂ ಮುದವೀಯುವ ಕಾಂತೆಯಂತೆ ನ ||
ಲ್ಮೆಗೆ ನಿಧಿಯಾಗಿ ನಮ್ಮಯ ಹಿತೇಚ್ಛೆಗೆ ದಂಡಿಪಮಾತೆಯಂತೆ ಕೂ |
ರ್ಮೆಗೆ ತವರಾಗಿ ಶೋಭಿಸುಗೆ ನಾಡೆ ‘‘ಸರಸ್ವತಿ’’ ನಮ್ಮ ನಾಡಿನೊಳ್ ||೩||

«ಭಾರತೀಸುತೆ»

# ಭರತಭೂಮಿ.

---

ನಮ್ಮದೀ ನಮ್ಮದೀ ಭರತಭೂಮಿ
ನೀಡುತಲಿ ನಿಜಬಾಹುಯುಗಳಮಂ ನಿರ್ಭಯದಿ |
ನಿಂದಿಹನು ದ್ವಾರದೊಳ್ ಹಿಮವಂತನು
ಕೂಡಿ ಮೊರೆಯುವ ನಿಖಿಲ ನಿರ್ಝರದ ದನಿಯೊ ಜಯ |
ಘೋಷವಾ ರಕ್ಷಕನು ದುರ್ಧರ್ಷನೆನಿಸೆ
ನಮ್ಮದೀ ನಮ್ಮದೀ ಭರತಭೂಮಿ ||

ಪದತಲದಿ ಜಲಧಿ ತನ್ನಯ ಭೀಷಣಾರವವ |
ಗೈಯ್ಯುತಿದೆ ಜಗಕೆಲ್ಲ ಭಯವನಿತ್ತು
ನಿಧಿಯೆನಿಸಿ ಸಕಲರತ್ನಾವಳಿಗೆ ಪರಹೇಳ |
ನವ ಸಹಿಪರಾರುಂಟು ಪೇಳೆಂಬತೆರದಿ
ನಮ್ಮದೀ ನಮ್ಮದೀ ಭರತಭೂಮಿ ||

ಪೊಸತೆನಿಪ ಫಲಪುಷ್ಪಭರದಿ ಸಂಚಿತವಾದ |
ದಿವ್ಯಶೋಭೆಯನಾಂತು ಮೆರೆಯುತೀಗ
ನಸುನಾಣ್ಚುವಂತ ನಂದನವನ[illegible]ಗೈದು |
ಭವ್ಯಸೌಖ್ಯದಿ ಜನರ ತಣಿಪ ನಾಡು
ನಮ್ಮದೀ ನಮ್ಮದೀ ಭರತಭೂಮಿ ||

ವೇದಶಾಸ್ತ್ರಪುರಾಣಚಿರಸಂಚಿತಜ್ಞಾನ |
ಭಂಡಾರಮಿದು ನಾಡೆ ಕ್ಷಯಿಪುದಲ್ಲ
ಸಾದರದೊಳಾತ್ಮವಿದ್ಯದ ಮಹಿಮೆಯನು ತೋರಿ |
ವಿಶ್ವಸಂಸಾರಕಿದು ಆದರ್ಶವೆನಿಸುವುದು
ನಮ್ಮದೀ ನಮ್ಮದೀ ಭರತಭೂಮಿ ||

ಮಹಿಮೆಯುಡುಗಿದುದೆಂದು ಗರಿಮೆ ತಾನಿಲ್ಲೆಂದು |
ಮುಂದೆ ಬಹುದುಸ್ತರದ ಕತ್ತಲೆಂದು
ಗ್ರಹಿಸಿಚಿಂತಿಪುದೇಕೆ ಮರಳಿಬರ್ಪುದು ಮುನ್ನಿ |
ನುತ್ಕರ್ಷ ಈ ನಾಡಸಿರಿಂಗೆ ಜವದಿ
ನಮ್ಮದೀ ನಮ್ಮದೀ ಭರತಭೂಮಿ ||

---

"ಭಾರತೀಸುತ"

# ಭ ಕ್ತ ಸು ಮಾಂ ಜ ಲಿ

(ಹಿಂದಿನ ಸಂಚಿಕೆಯಿಂದ ಮುಂದರಿಸಿದ್ದು.)

೭

"ಸಂಸಾರ ಪೀಡನೆಯಿಂದ ಬಹು ಸಾಕಾದೆ. ಏನುತಾನೆ ಮಾಡಲಿ? ಪ್ರಪಂಚವು ಸೌಖ್ಯದ ನೆಲೆಯೆಂದು ತಿಳಿದಿದ್ದೆ. ಇಲ್ಲಿ ಅನುಭವಿಸುವ ಸುಖವನ್ನು ಸ್ವರ್ಗದಲ್ಲಿ ಅನುಭವಿಸಲಾರೆನು. ಇದೇ ಸ್ವರ್ಗೀಯಸುಖವೆಂದು ಭಾವಿಸಿದ್ದೆ. ಇದೇನು ವರ್ಗೀಯಸುಖವೋ! ಅವರ್ಗೀಯ ಸುಖವೋ! ಇದೊಂದು ಕಠಿಣವಾದ ಒಗಟಾಗಿದೆ. ಈ ಒಗಟನ್ನು ಒಡೆಯುವ ಬಗೆಯೆಂತು?"

ಹೀಗೆಂದು ಆಲೋಚಿಸುತ್ತಾ ಕುಳಿತಿರುವಾಗ ಸಂತ ತುಕಾರಾಮನು ಆದಿದಂಥಾ ಮಾತುಗಳು ಜ್ಞಾಪಕಕ್ಕೆ ಬಂದವು. ತಾನು ಜಾತಿಯಲ್ಲಿ ಶೂದ್ರನು ಮತ್ತು ವ್ಯಾಪಾರಮಾಡಿ ಜೀವನ ಮಾಡುತ್ತಿದ್ದನು. ತನ್ನ ತಂದೆ ತಾಯಿಗಳು ಪರಲೋಕವನ್ನು ಹೊಂದಿದಮೇಲೆ ತನಗೆ ಪ್ರಪಂಚವೇ ಬೇಡವಾಯಿತು. ತನ್ನಲ್ಲಿದ್ದ ಹಣವನ್ನು ಅಂದು ಕ್ಷಾಮನಿವಾರಣೆಗಾಗಿ ಉಪಯೋಗಿಸಲು ತನಗೆ ಪ್ರಖ್ಯಾತಿ ಬಂತು; ಆದರೆ ತನ್ನ ಹೆಂಡತಿಯು ಅನ್ನವಿಲ್ಲದೆ ಸತ್ತುಹೋದಳು. ತಾನು ಈ ದೆಸೆಯಿಂದ ದುಃಖಿತನಾಗಿ ಹನ್ನೊಂದನೇ ದಿನದಿಂದ ದೇವರ ಭಜನೆಯನ್ನು ಮಾಡುತ್ತಾ ಅದರಲ್ಲಿಯೇ ಆಸಕ್ತನಾದನು. ದೇವರ ಮೇಲಿನ ಭಕ್ತಿಯು ಉಕ್ಕುತ್ತಾ ಬಂತು. ತನ್ನನ್ನು ತಾನೇ ಮರೆತುಬಿಟ್ಟು ದೈವತಾಸಕ್ತಿಯಲ್ಲೇ ಇದ್ದು ಪದಗಳನ್ನು ಸೂಚಿಸಲುಪಕ್ರಮಿಸಿದ; ಇತ್ಯಾದಿ ಇತ್ಯಾದಿ.

* * *

ಆತನ ಹೆಂಡತಿಯು ತನ್ನ ಮಗನೊಂದಿಗೆ "ಮಗನೇ! ಮನೆಯಲ್ಲಿ ಏನೂ ಇಲ್ಲ. ಎಂಥಾ ಆಹಾರವನ್ನು ತಾನೇ ತಿನ್ನುತ್ತಿ? ನಮಗೆ ಅನ್ನವನ್ನು ಹಾಕುವ ಪುಣ್ಯಾತ್ಮರಾರು? ಅವರು ಪ್ರತಿದಿನಸವೂ ಭಕ್ತರಂತೆ ದೇವಸ್ಥಾನಕ್ಕೆ ಹೋಗಿ ತಾಳ ಹೊಡೆಯುತ್ತಾ ಭಜನೆ ಮಾಡುತ್ತಿರುವರು. ಅಂಗಡಿಯಲ್ಲಿ ಕುಳಿತು ವ್ಯಾಪಾರ ಮಾಡಿ ನಮಗೆ ದುಡಿದು ತಂದು ಹಾಕುವುದಿಲ್ಲ. ಈಗ ನಾವೇನು ಮಾಡೋಣ? ಅರಣ್ಯಕ್ಕೆ ಹೊರಟುಹೋದರು. ಕೇಳಿದರೆ "ನೀನು ತಾಳ್ಮೆಯನ್ನು ಹಿಂದೆ ಎಂದಾದರೂ ತೋರಿಸದಿದ್ದರೆ ಈಗಲಾದರೂ ತೋರಿಸು." ಇತ್ಯಾದಿ.

* * *

''ವಿಠೋಬ! ನಾನು ದಿವಾಳಿಯಾದ್ದು ಉತ್ತಮವಾಯಿತು. ಕ್ಷಾಮ ದಿಂದ ನರಳಿದ್ದೂ ಉತ್ತಮವೇ! ಈ ದೆಸೆಯಿಂದಲಾದರೂ ನಿನ್ನ ನಾಮಾಮೃತ ವನ್ನು ಪಾನಮಾಡಲು ಅವಕಾಶವುಂಟಾಯಿತು. ಪಶ್ಚಾತ್ತಾಪಪಟ್ಟು ನಿನ್ನನ್ನೇ ಸೇರಿದ ನನಗೆ ಈ ಪ್ರಪಂಚವು ಅಸಹ್ಯವಾಯಿತು. ನನ್ನ ಪತ್ನಿಯಿಂದ ಹೀಯಾಳಿಸಿ ಕೊಂಡು ಅಪಮಾನ ಮತ್ತು ನನ್ನ ಹೆಸರು, ಐಶ್ವರ್ಯಾದಿಗಳನ್ನು ಹೊಂದುವುದ ಕ್ಕಿಂತ ನಿನ್ನನ್ನೇ ನಾನು ಸೇರಿದ್ದೇನೆ. ನನ್ನನ್ನು ನೀನೇ ಕಾಪಾಡು! ನಿನ್ನನ್ನೇ ಶರಣು ಹೊಕ್ಕಿದ್ದೇನೆ. ನೀನೇ ನನ್ನ ತಂದೆ, ತಾಯಿ, ಎಲ್ಲವೂ ನೀನೇ''!

ಸಂಸಾರ ಪೀಡನೆಯಿಂದ ಪಾರಾಗುವವರಿಗೆ ದೇವರ ನಾಮವೇ ಅಮೃತ! ಹೇ ಮನಸ್ಸೇ! ಈಗಲಾದರೂ ದೇವರ ಧ್ಯಾನಮಾಡು! ಇದರಿಂದ ಐಹಿಕ ಸುಖ ಕ್ಕಿಂತಲೂ ಶ್ರೇಷ್ಠತಮವಾದ ಸ್ವರ್ಗೀಯ ಸುಖ, ಮೋಕ್ಷ ಸಿಕ್ಕಿ ಯಶೋಲಾಭ ವಾಗುತ್ತೆ! ತತ್ಸತ್

---

# ಸ್ತ್ರೀ ಮತ್ತು ಧರ್ಮ.

ಪಂಡಿತ ತಾರಾನಾಥರವರು.

''ಹೆಂಗಸರಿಂದಲೇ ಧರ್ಮವು ಉಳಿದಿದೆ; ಇಲ್ಲವಾದರೆ ಈಗಿನ ಗಂಡಸರ ಮನೋವಿಕಾರಗಳಿಂದ ಧರ್ಮವು ಎಲ್ಲಿ ಹೋಗುತ್ತಿತ್ತೋ ಏನೋ'' ಎಂಬ ಉದ್ಗಾರಗಳನ್ನು ಎಷ್ಟೋಮಂದಿ ಗಂಡಸರ ಬಾಯಿಂದಲೇ ಕೇಳಬಹುದು. ಅರ್ಜುನನು ಸಹ ತನ್ನ ಕ್ಲೈಬ್ಯಕ್ಕೆ ಗಂಭೀರತನಕವಚವಾಗಿ ಉಪಯೋಗಿಸಿದ ಉದ್ಗಾರವೂ ಇದೇ. ನಿಜವಾಗಿ ನೋಡಿದರೆ (29—30ನೇ ಶ್ಲೋಕಗಳು) ''ಬಾಯಿಯು ಒಣಗುತ್ತದೆ, ಮೈಗೆ ಮುಳ್ಳುಗಳೇಳುತ್ತವೆ, ಗಾಂಡೀವಧನುಸ್ಸು ಕೈಯಿಂದ ಕಳಚಿ ಬೀಳುತ್ತದೆ. ಮೈಯೆಲ್ಲ ಕಾದುಹೋಗಿದೆ, ಎದ್ದು ನಿಲ್ಲುವೆನೆಂದರೆ ಸಾಧ್ಯವಿಲ್ಲ. ಮನಸ್ಸು ಭ್ರಮೆಗೊಂಡಿದೆ'' ಎಂದು ಅರ್ಜುನನು ಕೃಷ್ಣನಿಗೆ ಹೇಳುತ್ತಾನೆ. 32 ನೇ ಶ್ಲೋಕದಿಂದ ಈ ಭಯಸೂಚಕವಾದ ಲಕ್ಷಣಗಳಿಗೆ ದಯೆ, ವೈರಾಗ್ಯಗಳ ಹೊದಿಕೆಯು ಬರುತ್ತದೆ. ''ಕೃಷ್ಣಾ! ನನಗೆ ವಿಜಯಾಪೇಕ್ಷೆ ಬೇಡ. ರಾಜಸುಖಗಳ ಕಾಂಕ್ಷೆಯೂ ಬೇಡ. ಗೋವಿಂದಾ! ರಾಜ್ಯದಿಂದೇನು, ಭೋಗ ಗಳಿಂದೇನು, ಜೀವಿತದಿಂದಾದರೂ ಏನು ಫಲ'' ಮುಂತಾದ ಬೇಡ, ಬೇಡಗಳ ಉದ್ಗಾರಗಳು!

ಪರಹಿತೇಚ್ಛು ಮಹಾತ್ಮಾ ಅರ್ಜುನ! ಕೈಕಾಲುಗಳು ನಡುಗುವದು, ಗಾಂಡೀವವು ತಾನಾಗಿಯೇ ಜಾರಿಬೀಳುವದು, ಇವೆಲ್ಲವೂ ಭೂತದಯಾಲಕ್ಷಣಗಳೋ!

ಅಥವಾ ನಪುಂಸಕತ್ವದ ಕುರುಹುಗಳೋ? ಈ ಪ್ರಕಾರವಾಗಿ ಈಕಾಲದಲ್ಲಿ ಒಳಗೆ "ಭಗಭಗ" ಮೇಲೆ "ಝಗಝಗ" ಇಟ್ಟುಕೊಂಡ ಅರ್ಜುನರು ಎಷ್ಟೋ! ಇದೊಂದು ವಿಶೇಷವಲ್ಲ. ಸಾಮಾನ್ಯಮನುಷ್ಯನ ಸ್ವಭಾವ, ಅರಿತಾಗಲಿ ಅರಿಯದೇ ಆಗಲಿ ಮನುಷ್ಯನಿಂದ ಇಂತಹ ತಪ್ಪು ಆಗುವದುಂಟು. ಇಂಥ ಕ್ಷುದ್ರ ಸ್ವಭಾವವನ್ನು ಆಳವಾದ ಮನಸ್ಸಿನ ಮೂಲೆ ಮೂಲೆಗಳಿಂದಲೂ ಹುಡುಕಿ ತೆಗೆದು ಜ್ಞಾನಾಯುಧದಿಂದ ಹೊಡೆದಟ್ಟುವದೇ ಧರ್ಮಸಾಧನ. ತನ್ನಂತರಂಗವನ್ನು ಶೋಧಿಸಿ ಜ್ಞಾನದೃಷ್ಟಿಗೆ ಕೀಳಾದ್ದನ್ನು ಕಳೆವಿ, ಮೇಲಾದ್ದನ್ನು ಕಚ್ಚೆದೆಯಿಂದ ಸ್ಥಾಪಿಸುವದೇ ಧರ್ಮಸಾಧನ. ಅರ್ಜುನನು ಇಂಥ ಜ್ಞಾನಸಾಧನವನ್ನು ಆರ್ಜನ ಮಾಡಲೇಬೇಕಾದ ಸಾಮಾನ್ಯಜನರ ಸಂಕೇತ; ಆದರೆ ಶ್ರೀ ಕೃಷ್ಣನು ಎಂತಹ ಸದ್ಗುರು! ಅರ್ಜುನನ ಸ್ವವಂಚನೋದ್ಗಾರಕ್ಕೆ ಭಳಿರೇ! ಎಂದು ಬೆನ್ನು ತಟ್ಟುತ್ತಾನೋ? "ಕ್ಲೈಬ್ಯಂಮಾಸ್ಮಗಮ! ಪಾರ್ಥ......." (ಪಾರ್ಥ! ಕ್ಲೈಬ್ಯಕ್ಕೆ ಈಡಾಗಬೇಡ) ವೆಂದು ಹೇಳುತ್ತಾನಲ್ಲದೆ ಅವನ ಅನರ್ಥವಾದ ಸಂದೇಹ ಗಳಿಗೆ ಬೇರೆ ಉತ್ತರವನ್ನೇ ಕೊಡುವುದಿಲ್ಲ. ಕ್ಲೈಬ್ಯ ಈ ಒಂದು ಶಬ್ದದಿಂದಲೇ ಅವನಮಾತು ಯಾತರ ಲಕ್ಷಣವೆಂಬುದನ್ನು ತೋರಿಸಿಬಿಡುತ್ತಾನೆ. ಆದರೆ ಅರ್ಜುನ ನನ್ನು ಪ್ರೇಮದಿಂದಲೇ ಸಾಧಕನನ್ನಾಗಿ ಮಾಡಲು ಯತ್ನಿಸುತ್ತಾನೆ.

ಹೆಂಗಸರ ಮತ್ತು ಧರ್ಮದ ಈಗಿನ ಜನರ ಉದ್ಗಾರವು ಕೃಷ್ಣನಿಂದ ನಿಷ್ಕರ್ಷಿಸಲ್ಪಟ್ಟ ಕ್ಲೈಬ್ಯದ ಲಕ್ಷಣವೇ ಎನ್ನಲಿಕ್ಕೇನೇನೂ ಸಂದೇಹವಿಲ್ಲ. ಬೇರೆಯವರಿಂದ ನಮಗೆ ಹಿತಕಾರಿಯಾದ ವಸ್ತುವು ಉಳಿದದೆ ಎಂಬ ಭಾವವು. ದಾಸ್ಯದ ಪರಾಧೀನತೆಯ ಮೊದಲನೆಯ ಲಕ್ಷಣ. ಬ್ರಿಟಿಷ ಸರಕಾರದಿಂದ ನಮ್ಮ ಧರ್ಮವೂ ಮಾನವೂ ಕಾಪಾಡಲ್ಪಟ್ಟಿದೆ ಎಂಬ ಗಾರ್ಧುಗಾನವೂ ಇದೇರಾಗಕ್ಕೆ ಸೇರಿದೆ. ಸ್ವಪ್ರಯಾಸ, ಸ್ವಮರ್ಯಾದೆಯ ಅಭಾವವು ಎಲ್ಲೆಲ್ಲಿದೆಯೋ ಅಲ್ಲೆಲ್ಲ ಇಂತಹ ರೋದನವೇ. "ಹೆಂಗಸರಿಂದಲೇ ನಮ್ಮ ಧರ್ಮವು ಉಳಿದಿದೆ" ಎಂಬುದರ ಅರ್ಥವಾದರೂ ಏನೋ ದೇವರೇ ಬಲ್ಲ! ಧರ್ಮವೆಂದರೇನೋ? ಯಾಕಂದರೆ, ಧರ್ಮಕ್ಕೆ ಅನೇಕ ಅಂಗಗಳಿವೆಯಷ್ಟೆ. ಅವುಗಳಲ್ಲಿ ಮುಖ್ಯವಾದುವು ಸ್ವಧರ್ಮ ಒಂದು, ಸಮಾಜ ಧರ್ಮ ಇನ್ನೊಂದು. ಇವೆರಡರಲ್ಲಿ ಈಗ ಸಾಮಾನ್ಯ ಹೆಂಗಸರು ನಡೆಸುವಂಥಾದ್ದು ಯಾವದು? ನಮ್ಮಲ್ಲಿ ಧರ್ಮದ ಮೂಲಗ್ರಂಥವು ವೇದವೆಂಬುದು ಎಲ್ಲರಿಗೂ ಗೊತ್ತಿದೆ. ಆದರೆ ವೇದವೇದಾಂಗಗಳನ್ನೋದುವ ಅಧಿಕಾರವು ಹೆಂಗಸಿಗೆ ಇಲ್ಲವೇ ಇಲ್ಲವಂತೆ! ಸ್ವಹಿತವನ್ನು ಮಾಡತಕ್ಕ ಸ್ವಧರ್ಮವನ್ನು ಅರಿತುಕೊಳ್ಳುವದಕ್ಕೆ ಉತ್ತಮ ಸಹಾಯವಾದ ವೇದವನ್ನು ಅವಳು ಓದಲೇಬಾರದಂತೆ. ಮುಂದ ಸಮಾಜಧರ್ಮ ಒಂದುಳಿಯಿತು. ಸ್ವಹಿತವೇ ಗೊತ್ತಿಲ್ಲದಮೇಲೆ ಸಮಾಜಹಿತವನ್ನಾದರೂ ಹ್ಯಾಗೆಮಾಡಬೇಕು? ಇರಲಿ; ಆಧುನಿಕರೀತಿಯಿಂದಲಾದರೂ ಸಮಾಜಸೇವೆ

ಯನ್ನು ಮಾಡಬೇಕಾದರೆ ಹೆಂಗಸಿಗೆ ಗೊತ್ತಿರುವ ಉಪಾಯಗಳು ಯಾವವು? ಒದಗುವ ಸಂದರ್ಭಗಳು ಯಾವವು? ಜ್ಞಾನ, ಮಾನ, ಧನ, ಧಾನ್ಯ ಇವೆಲ್ಲಕ್ಕೂ ಪರಾಧೀನಳೂ ಪರಾವಲಂಬಿಯೂ ಆಗಿ ಇದ್ದವಳು, ಇಡಲ್ಪಟ್ಟವಳು ಪರರ ಸೇವೆಯನ್ನು ಮಾಡಲಿಕ್ಕೆ ಯೋಗ್ಯಳೋ? ಅಂದ ಮೇಲೆ ಹೆಂಗಸಿನಿಂದ ಕಾಪಾಡಲ್ಪಟ್ಟ ಧರ್ಮವು ಯಾವದು? ಈ ಪ್ರಕಾರವಾಗಿ ಅವಳನ್ನು ಹೊಗಳುವ ಗಂಡಸರ ಅನುಕೂಲತೆ ಒಂದೇ ಎಂದು ತೋರುತ್ತದೆ. ಆದರೆ ಅನುಕೂಲತೆಯೂ ಧರ್ಮವೂ ಒಂದೇ ಅಲ್ಲವಷ್ಟೆ. ಇದರಿಂದಾಗುವ ಪರಿಣಾಮವೇನು? ಅಯೋಗ್ಯವಾದ ಸ್ತೋತ್ರದಿಂದ ಯಾರ ಉದ್ಧಾರವೂ ಆಗುವದಿಲ್ಲ; ಇದು ನಿಶ್ಚಯ. ಧರ್ಮವೆಂದರೆ ಶಂಖ, ಜಾಗಟೆಗಳು ಮಾತ್ರವಲ್ಲ. ಅಡಿಗೆಯಮನೆಯೂ ದೇವರ ಮನೆಯೂ ಅಲ್ಲ. ಪಾತ್ರೆಗಳೂ ದೇವರೂ ಅಲ್ಲ. ಹಾಗೆ ಜ್ಞಾನದೃಷ್ಟಿಯಿಂದ ನೋಡಿದರೆ ಜಗತ್ತೆಲ್ಲವೂ ದೇವರೇ. ಆದರೆ ಸಾಧಕರಿಗೆ ಈ ಭಾವವು ಸತ್ಯವಾದರೂ ಕಷ್ಟಸಾಧ್ಯ. ಇದರಿಂದ ಗೃಹಕೃತ್ಯಗಳು ನೀಚವೆಂದರ್ಥಮಾಡಿಕೊಳ್ಳಲಾಗದು. ಅದನ್ನೂ ಉತ್ತಮರೀತಿಯಿಂದಲೇ ಮಾಡಬೇಕು. ಸಂಸಾರದಲ್ಲಿ ತನುಮನಗಳನ್ನು ಚೊಕ್ಕಟವಾಗಿಟ್ಟು ಆತ್ಮಸಾಕ್ಷಾತ್ಕಾರಸಾಧನೆಗೆ ಅನುಕೂಲತೆಗಳನ್ನೊದಗಿಸಿಕೊಡುವ ಧರ್ಮವು ತಾಯಂದಿರಿಗೆ ಸುಂದರವಾಗಿ ಒಪ್ಪಿದಷ್ಟು ಬೇರೆಯಾರಿಗೂ ಒಪ್ಪಲಾರದು. ಆದರೆ ಈ ಕೆಲಸವು ಸಾಧಾರಣವಲ್ಲ. ಇದಕ್ಕೆ ಬೇಕಾದ ಶಾಸ್ತ್ರಗಳ ಜ್ಞಾನವೂ ಬೇಕು. ಮಾನವಜೀವನದಲ್ಲಿ "ಆಹಾರ, ನಿದ್ರಾ,ಭಯ,ಮೈಥುನ" ಮಾತ್ರವಲ್ಲದೆ ವಿಶೇಷವೇನಾದರೂ ಇದೆಯೆಂಬ ನಂಬಿಕೆಯುಳ್ಳವರು ಜ್ಞಾನವನ್ನು ಸಂಪಾದಿಸಲೇಬೇಕು. ಜ್ಞಾನದಿಂದಲೇ ಗೃಹಕೃತ್ಯಗಳನ್ನು ಮಾಡಬೇಕು. ಧರ್ಮವು ಇಲ್ಲಿಯೇ ಪ್ರಾರಂಭವಾಗುತ್ತದೆ. ಎಲ್ಲ ಕರ್ಮಗಳನ್ನೂ ಜ್ಞಾನದಿಂದ ಸರ್ವಾಂಗಸುಂದರವಾಗಿ ಮಾಡುವದೇ ಧರ್ಮ. ಅದೇ ಯೋಗ. ಯೋಗವೆಂದರೆ ಕರ್ಮತ್ಯಾಗವಲ್ಲ, ಕರ್ಮಫಲತ್ಯಾಗ; ಅದೂ ಕರ್ಮವನ್ನು ಮನಃಪೂರ್ವಕವಾಗಿ ಮಾಡಿದಮೇಲೆ, 'ಯೋಗಃ ಕರ್ಮಸು ಕೌಶಲಂ' ಎಂದು ಕೃಷ್ಣಪರಮಾತ್ಮನು ಸ್ಪಷ್ಟವಾಗಿ ಹೇಳಿದುದರ ಅರ್ಥವು ಇದೇ. ಹೆಂಗಸು ಮನೆಯ ರಾಣಿಯಾಗಿದ್ದುದರಿಂದ ಅವಳು ಜ್ಞಾನದಿಂದ ಕುಶಲವಾಗಿ ಮಾಡಿದ ಕಾರ್ಯಗಳೇ ಅವಳ ಮಕ್ಕಳಿಗೆ ಮೇಲ್ಪಂಕ್ತಿಯಾಗುವವು. ದೇಹಕ್ಕೆ ಅನಿವಾರ್ಯವಾದ, ಮಾಡಿಯೇ ತೀರಬೇಕಾದ ಕೆಲಸಗಳನ್ನು ಚನ್ನಾಗಿ ಮಾಡುವದು ಸುಲಭವೋ ಅಥವಾ ಈಗ ಸದ್ಯಕ್ಕೆ ಅದೃಶ್ಯವಾದ ಮೋಕ್ಷಸುಖಕ್ಕಾಗಿ ಮಾಡುವ ಕಾರ್ಯವು ಸುಲಭವೋ? ಅವಶ್ಯವಾಗಿ ಪ್ರಪಂಚದಲ್ಲಿ ನಡೆಸಲೇಬೇಕಾದ ಕಾರ್ಯರಂಗದಲ್ಲಿ ಉಪೇಕ್ಷೆಯಿಂದ ಬಿಟ್ಟು ಸಾಗಿಸುವವರಿಗೆ, ಊಹೆ ಸಂಕಲ್ಪಗಳಿಂದ ಮಾಡಬೇಕಾದ, ಅಗೋಚರವಾದ ಮೋಕ್ಷಸಾಧನೆಯು ಎಂದೆಂದಿಗೂ ಸಾಧ್ಯವಾಗುವದೋ? ಇಹಪರಗಳೆರಡಕ್ಕೂ ಮನಸ್ಸೇ ಮುಖ್ಯವಷ್ಟೇ. ಅದಕ್ಕೆ "ಕರ್ಮಕೌಶಲದಿಂದಲೇ

ಚೋಗಟಲವು ಬರಬೇಕಾದದ್ದು. ಆದುದರಿಂದ ಗುಣಸ್ತೋತ್ರಗಳಿಂದ ಮರುಳಾಗಿ ಯಂತ್ರದೋಪಾದಿಯಲ್ಲಿ ಜೀವನಯಾತ್ರೆಯನ್ನು ಜ್ಞಾನವೇ ಇಲ್ಲದೆ ತಿಂದು ಉಂಡು ಮಾತ್ರ ಕಳೆಯುವ ಹೆಂಗಸರಿಗೆ ಇಲ್ಲಿಯೂ ಸುಖವಿಲ್ಲ ಪರದಲ್ಲಿಯೂ ಇಲ್ಲ. ಛತ್ರಪತಿ ಶಿವಾಜಿಯ ಗುರುಗಳಾದ ಸಮರ್ಥರಾಮದಾಸರು ಇದನ್ನು ಸೂಚಿಸಿಯೇ ಹೀಗೆಂದು ಹೇಳಿದ್ದಾರೆ.—

ಆದಿ ಪ್ರಪಂಚ ಕರಾವಾನೇಟಕಾ | ಮಗ ಪರಮಾರ್ಥ ಸಾಧಾವಾ ವಿವೇಕಾ||

(ಮೊದಲು ಪ್ರಪಂಚವನ್ನು ಅಂದರೆ ಸಂಸಾರವನ್ನು ನೆಟ್ಟಗೆ ನಡೆಸಬೇಕು. ಮತ್ತೆ ಸುಲಭವಾಗಿ (ಅದರಿಂದುದ್ಭವಿಸಿದ) ವಿವೇಕದಿಂದ ಪರಮಾರ್ಥವನ್ನು ಸಾಧಿಸಬೇಕು.) ಇದು ಜ್ಞಾನದಿಂದಲ್ಲವೇ ಸಾಧ್ಯವಾಗತಕ್ಕದ್ದು.

ಹೆಂಗಸರು ಧರ್ಮದ ಉಚ್ಚ ತತ್ವಗಳನ್ನು ಮರೆತು ಕೇವಲ ತಮ್ಮ ಮತ್ತು ತಮ್ಮವರ ದೇಹದ ಸುಖ ಸೌಕರ್ಯಗಳಿಗೇ (ಆರೋಗ್ಯಕ್ಕಲ್ಲ) ಮರುಳಾದ್ದರಿಂದ ಧರ್ಮವು ಎಷ್ಟು ರೀತಿಯಿಂದ ಅಧೋಗತಿಯನ್ನೈದಿದೆಯೆಂಬದು ಮುಂದೆ ಇತಿಹಾಸದ ದೃಷ್ಟಾಂತಗಳಿಂದ ತೋರಿಸಲ್ಪಡುವದು ರಾಣಾಪ್ರತಾಪನ ತಂಗಿಯಾದ ತಾರಾದೇವಿಯು ಹಿಂದೂಸ್ತ್ರೀಯರಿಗೂ ಧರ್ಮಕ್ಕೂ ದೇಶಕ್ಕೂ ಮಾಡಿದ ಉಪಕಾರವು ಮುಂದೆ ಪ್ರಕಟವಾಗುವದು.

---

# ಪುನರುಜ್ಜೀವನ

---

**ಆನವಟ್ಟಿ ಕೃಷ್ಣರಾಯರವರು.**

೧

“ಯೋಷಿ, ರಜನಿಯು ಹೇಗೆ ಪ್ರಕಾಶಿಸುತ್ತಿರುವದು ನೋಡು. ಪೂರ್ಣಚಂದಿರನ ಸೊಬಗನ್ನು ನೋಡು. ಸಮ್ರಾಟನ ಆಸ್ಥಾನವನ್ನು, ಅಂಬರದಲ್ಲಿ ಸೂರ್ಯಮಂಡಲದ ಸುತ್ತಲೂ ಇರುವ ನಕ್ಷತ್ರಗಳ ಗುಂಪಿಗೆ ಹೋಲಿಸಬಹುದಲ್ಲವೇ ?”

“ನೀವು ಸುಮ್ಮನಿದ್ದರಾಗುತ್ತದೆ. ನಿಮ್ಮ ರಜನಿಯ ಸೊಬಗನ್ನಾಗಲೀ, ನಿಮ್ಮ ಸಮ್ರಾಟನ ಆಸ್ಥಾನವನ್ನಾಗಲೀ ಮೆಚ್ಚುವ ಶಕ್ತಿ ನನಗಿಲ್ಲ. ತಾವಾದರೋ ಸುಪ್ರಸಿದ್ಧ ಕವಿಗಳು. ಸಮ್ರಾಟನ ಪ್ರೇಮಾಸ್ಪದರು. ಸಮ್ರಾಟನಿಂದ ಅನೇಕ ಬಹುಮಾನಗಳನ್ನೂ ಗೌರವವನ್ನೂ ಮಾನವನ್ನೂ ಪಣಕಟ್ಟಿ ಪಡೆದಿರುವಿರಿ; ಆದರೆ

ನಾನು ಮುಗ್ಧೆ. ಹಳ್ಳಿಯ ಹುಡುಗಿ. ನಿಮ್ಮ ಕವಿತೆಗಳೇನೋ ನನಗೆ ರುಚಿಸು ವುದೇ ಇಲ್ಲ.''

''ಯೋಷೀ, ಕವಿತೆಗಳು ಸಾಮಾನ್ಯವಾಗಿ ಎಲ್ಲರಿಗೂ ಅರ್ಥವಾಗುವ ಪದ ಗಳಲ್ಲ. ಗೂಢಾರ್ಥಗಳನ್ನು ಸೂಕ್ಷ್ಮರೀತಿಯಿಂದಲೂ, ನಯವಿನಯಗಳಿಂದಲೂ ಪ್ರಕಟಿಸುವ ರತ್ನದ ಚೂರುಗಳು. ಯೋಷೀ, ಪ್ರಪಂಚವೇ ನನ್ನ ಕಿವಿಯಧ್ವನಿಗೆ ಬೆಪ್ಪುಮರೆತಿದ್ದರೆ ನೀನು, ನೀನು, ನನ್ನ ಸ್ವಂತ ಸಹಧರ್ಮಿಣಿ ಹೀಗೆ ಅಲೆಗಳೆಯು ವಿಯಲ್ಲಾ, ಇದಕ್ಕೆ ಕಾರಣವೇನು ಯೋಷಿ ?''

''ಕಾವ್ಯವೆಲ್ಲವೂ ಧರ್ಮವನ್ನು ಮರೆತಿರುವುದರಿಂದಲೂ, ಇಹಪರಸುಖಕ್ಕೆ ಸಾಧನವಾದ ಮೋಕ್ಷ ಬಂಧವಿಮೋಚನ ಕಾರ್ಯವನ್ನು ತಮ್ಮಂತೆ ಸಂಪೂರ್ಣ ವಾಗಿ ಅವರು ತ್ಯಾಜ್ಯವಾಗಿರುವದರಿಂದ ನಿಮ್ಮ ಕಿನ್ನರಿಯ ಕೀರ್ತನೆಗೆ ಹೆಜ್ಜೆ ಹಾಕುತ್ತಾರೆ. ಆದರೆ ಹಿಂದೂರಾಷ್ಟ್ರದ ಧರ್ಮ, ಪಾವನತ್ವದ ಜ್ಯೋತಿಗಳು ನನ್ನ ಹೃದಯದಲ್ಲಿ ಇಂದಿಗೂ ಪರಿಶುದ್ಧತೆಯಿಂದ ಪ್ರಕಾಶಿಸುತ್ತಿರುವುದು. ಆದ್ದ ರಿಂದಲೇ ದಾಸತ್ವದ ಕೀರ್ತನೆಗಳು ನನಗೆ ರುಚಿಸವು.''

''ಯೋಷೀ, ಮನೆತನದ ಮಾತನ್ನು ಮರೆತು ರಾಜಕೀಯವನ್ನಾರಂಭಿಸಿದೆ. ಜೋಕೆ! ನೀನು ಮಾತನಾಡುತ್ತಿರುವುದು ರಾಜದ್ರೋಹ, ನೆನಪಿನಲ್ಲಿರಲಿ. ಸಮ್ರಾ ಟನು ಸಾಮಾನ್ಯನೆಂದರಿಯಬೇಡ. ಯೋಷಿ, ನನ್ನ ಗೌರವಕ್ಕೂ ನನ್ನ ಪದವಿಗೂ ಚ್ಯುತಿಯನ್ನು ತರಲು ಪ್ರಯತ್ನಿಸಬೇಡ, ಜೋಕೆಯಿಂದಿರು.''

''ಇರಲಿರಲಿ ; ನಾನು ಕಂಡಿರುವೆನು. ನಿಮ್ಮ ಸಮ್ರಾಟನೇನು ನನಗೆ ಹೊಸ ಬನಲ್ಲ. ಸಮ್ರಾಟನ ನಡೆವಳಿಕೆಗಳನ್ನು ಅರಿಯದ ಅಜ್ಞಳೇನಲ್ಲ. ನಾನು ಪರ ಸ್ತ್ರೀಯರನ್ನೇ ಸದಾ ಬಯಸುತ್ತಾ, ಸ್ವಸುಖದಲ್ಲಿಯೇ ಮಗ್ನನಾಗಿ, ಅಜ್ಞರಾದಂತಹ ನಿಮ್ಮಂತಹ ಹಿಂದುಗಳಿಗೆ ಅಲ್ಪಸ್ವಲ್ಪ ಆಶೆ ತೋರಿಸಿ ಜಾತಿ, ಮಾನಗಳನ್ನು ಕೆಡಿ ಸುತ್ತಿರುವ ನರಾಧಮನವನು. ನಿಮ್ಮ ಕಣ್ಣಿಗೆ ಮನ್ಮಥನಂತೆ ಕಂಡುಬಂದರೂ ನನಗವನು ಮಹಿಷಾಸುರನೇ ! ''

''ಯೋಷೀ, ಹಾಳಾದವಳೇ ! ಕೆಟ್ಟ ಹೆಂಗಸೇ ! ನಿನಗೇನು ದುರ್ಬುದ್ಧಿ ಬಂದಿತು ? ಕೆಲಸಕ್ಕೆಬಾರದ ಮಾತುಗಳನ್ನಾಡಿ ನನ್ನ ಮನಸ್ಸನೇಕೆ ನೋಯಿ ಸುವೆ ? ಆ ಮಾತನ್ನು ಬಿಡು. ದಿನವೂ ಇದೇ ರಾಮಾಯಣವನ್ನೇ ಒದರುವಿ ಯಲ್ಲಾ ? ಅದು ಹೋಗಲೀ ? ಫಲಹಾರಕ್ಕೆ ಏನು ಮಾಡಿರುವೆ. ಯೋಷೀ, ಸತ್ಯವನ್ನು ಹೇಳುವೆನು ಕೇಳು. ಸಮ್ರಾಟನೊಂದಿಗೆ ನಾನು ಭುಜಿಸಿದಾರಭ್ಯ ನಿನ್ನ ಪಾಕದಲ್ಲಿ ನನಗೆ ರುಚಿಯೇ ಕಂಡುಬರುವುದಿಲ್ಲ. ನಿನ್ನ ಅಡಿಗೆಯು ನೀರಸ ವಾಗುತ್ತಲಿದೆ, ಯೋಷೀ !''

ಹೌದು ಹೌದು. ಸಮ್ರಾಟನ ಅಡಿಗೆಯಲ್ಲಿ ಮಾಂಸಾಹಾರವಿರುತ್ತದೆ. ಅದರಿಂದಲೇ ಅದು ತಮಗೆ ಹೆಚ್ಚು ರುಚಿ. ನನ್ನ ಅಡಿಗೆಯಲ್ಲಿ ರುಚಿ ಹೇಗೆ ಬರಬೇಕು ? ಪಾಪ ! ಈದಿನ ಇಲ್ಲಿ ಅನುಕೂಲವಿಲ್ಲ. ಸಮ್ರಾಟನ ಭೋಜನಕ್ಕೆ ದಯಮಾಡಿಸಬಹುದು,

ಯೋಷೀ, ದಮ್ಮಯ್ಯ ! ಕ್ಷುದ್ಬಾಧೆಯು ಮೀರಿದೆ. ಈದಿನ ಪಾಕವು ಹೇಗಿದ್ದರೂ ಅಮೃತಕ್ಕಿಂತಲೂ ರುಚಿಕರವಾಗಿರುತ್ತದೆ. ಸದ್ಯಃ ಏನು ಮಾಡಿರುವೆಯೋ ತಂದುಹಾಕು.

ಯೋಷಿಯು ಪೃಥ್ವಿರಾಜನ ಪತ್ನಿ. ಯೋಷಿಯು, ಯೋಷೀಬಾಯಿಯೋ ಯೋಷೀಬೇಗವೋ ತಿಳಿಯದು. ಬೇಗಮ್ ಎನಿಸಿಕೊಳ್ಳಲು ಯೋಷಿಯು ಒಪ್ಪಳು; ಪತಿಯು ಬಿಡನು ಸಮ್ರಾಟ ಅಕ್ಬರ ಚಕ್ರವರ್ತಿಯೊಂದಿಗೆ ಬಂಧುತ್ವವನ್ನು ಬೆಳಸಿ ತಮ್ಮ ಮತ, ದೇಶ, ಸ್ವಗೌರವಗಳನ್ನು ಮರೆತವರಲ್ಲಿ ಪೃಥ್ವಿರಾಜನೂ ಒಬ್ಬನು. ನಿಜವಾಗಿಯೂ ಸಮ್ರಾಟನು ತಮ್ಮನ್ನು ಪ್ರೇಮದೃಷ್ಟಿಯಿಂದಲೇ ನೋಡುತ್ತಾನೆಂದು ಜಾತಿಗೆಟ್ಟ ಆ ರಜಪೂತರ ತಿಳುವಳಿಕೆ. ಆದರೆ ಸಮ್ರಾಟನ ಅಂತರಂಗವು ಅವರಿಗೆ ಹೇಗೆ ಗೊತ್ತು ? ಸಮ್ರಾಟನು ಕಾಮಾಂಧಪಶು. ರಜಪೂತ ಸ್ತ್ರೀಯರನ್ನು ಪ್ರೀತಿಸುತ್ತಿದ್ದನೇ ವಿನಹಾ ವೀರರನ್ನಲ್ಲ. ಹಿಂದೂದೇಶವುಹಾಳಾದರೇನು ? ಉಳಿದರೇನು ? ತನ್ನ ಕಾಮಾಗ್ನಿಗೆ ರಜಪೂತವನಿತೆಯರ ಆಹುತಿಯು ಸರಿಯಾಗಿ ಬೀಳುತ್ತಿದ್ದರಾಯಿತು. ಬೆಂಕಿಯನ್ನು ಆಹಾರವೆಂದು ಭ್ರಮಿಸಿ ಗರಿಸೀದು ಬೀಳುವ ಪತಂಗದ ಹುಳುಗಳಂತೆ ರಜಪೂತ ಅಧಿನಾಯಕರು ಅಕ್ಬರನ ನಸುನುಡಿಗಳಿಗೆ ಬೆರಗಾಗಿ ಅವನ ಕುಟಿಲಕ್ಕೆ ತುತ್ತಾಗುತ್ತಿದ್ದರು. ತಮ್ಮ ಸ್ವಂತ ಸಹೋದರಿ, ಹೆಣ್ಣುಮಕ್ಕಳು, ಪತ್ನಿಯರನ್ನೇ ಅವನಿಗೆ ಆಹುತಿಯನ್ನಾಗಿ ಕೊಡುತ್ತಿದ್ದರು. ಇಂತಹ ದೇಶದ್ರೋಹಿಗಳಿಗೆ ಧಿಕ್ಕಾರವಿರಲಿ. ಪರದೇಶದರಸು ಎಷ್ಟು ವಿಶ್ವಾಸದಿಂದ ನಮ್ಮನ್ನು ಕಂಡರೂ ಅವನು ನಮ್ಮ ಹಿತಚಿಂತಕನೇ ? ಆದರೂ ಭಾರತಾಂಬೆಯ ಮಾಂಗಲ್ಯದ ರತ್ನಗಳೆಲ್ಲವೂ ಕಪ್ಪುಬಣ್ಣ ತಿರುಗಿರಲಿಲ್ಲ. ಒಂದು ರತ್ನ ಮಾತ್ರ ಒಂದೇ ವಿಧವಾದ, ಅಚ್ಚಳಿಯದ, ಪೂರ್ಣಪ್ರತಾಪದ ದೇಶವಾತ್ಸಲ್ಯದಿಂದ ಕೂಡಿ ವಿಜೃಂಭಿಸುತ್ತಲಿತ್ತು. ಆ ರತ್ನವೇ ಮೇವಾಡದ ರಾಣಾಪ್ರತಾಪಸಿಂಹ! ಪ್ರತಾಪಸಿಂಹನ ಪ್ರತಾಪದ ಬಗ್ಗೆ ಸಮ್ರಾಟನಿಗೆ ಹಳದೀಘಟ್ಟದಲ್ಲಿ ಪೂರ್ಣಪರಿಚಯವಾಗಿತ್ತು. ಶಕ್ತಿಸಿಂಹನ ಪಾದಘಾತದ ಪೆಟ್ಟು ಸಮ್ರಾಟನ ಪ್ರಿಯಕುವರ ಸಲೀಮನ ಬವಡೆಯನ್ನು ಇನ್ನೂ ಬಿಟ್ಟಿರಲಿಲ್ಲ. ಸಮ್ರಾಟನು ವಿಶ್ವಪ್ರಯತ್ನಮಾಡಿದನು, ಸಾಧ್ಯವಾಗಲಿಲ್ಲ. ಇಡೀ ಹಿಂದೂಸ್ಥಾನವನ್ನೇ ಪಾದದಡಿಯಲ್ಲಿ ಧರಿಸಿರುವ ಸಮ್ರಾಟನಿಗೆ ಮೇವಾಡಿನ ಸಿಂಹವೊಂದು ಚಳ್ಳೆಹಣ್ಣು ತಿನ್ನಿಸಿತು. ಸಿಂಹದ ತಲೆ ಸವರಿದನು,

ಸಿಂಹಕ್ಕೆ ಗೋವಿನಮಾಂಸದಾಸೆಯುಟ್ಟಿಸು. ಸಿಂಹಕ್ಕೆ ಉತ್ತಮವಾದ ಆಹಾರ ವಾದ ಪಶುಗಳನ್ನು ತೋರಿಸಿದನು. ಸಿಂಹವು ಎಲ್ಲವನ್ನೂ ನೋಡಿ, "ಮಾಂಸಖಂಡ ಬಾಯಿ, ಅಧಮ! ನೀತಿಗೆಟ್ಟವನೇ!" ಎಂದಿತು. ಸಿಂಹವನ್ನು ಬಲೆಗೆ ಹೇಗೆ ಕೆಡವ ಬೇಕೆಂಬುದೇ ಸಮ್ರಾಟನಿಗೆ ದೊಡ್ಡ ಸಮಸ್ಯೆಯಾಗಿದ್ದಿತು. ಏನುಮಾಡಿಯಾನು? ದೇಶಾಭಿಮಾನವೆಂಬ ಕೊಬ್ಬಿನಿಂದ ತುಂಬಿದ್ದ ಆ ಕೊಬ್ಬಿದ್ದ ಕೇಸರಿಗೆ ಕೇಡನ್ನು ಹೇಗೆ ತಂದಾನು? ಸಿಂಹದ ಸ್ನೇಹ ದೊರೆತರೆ ಸ್ವಂತಮಗಳಾದ ಮೆಹರೆಯುನ್ನು ಕೊಟ್ಟು ಪರಿಣಯಮಾಡಲು ನಿಶ್ಚಯಿಸಿದನು. ಆದರೆ ತನ್ನ ಪತ್ನಿಯಾದ ಲಕ್ಷ್ಮೀ ದೇವಿಯ ಪಾದಪ್ರಕ್ಷಾಳನವಾದ ಜಲವನ್ನು ಪಾನಮಾಡುವ ಯೋಗ್ಯತೆಯನ್ನೂ ಸಹಾ ಪಡೆಯದಿರುವ ಸಮ್ರಾಟನ ಕುವರಿಯ ಮೇಲಣ ಮೋಹಕ್ಕಾಗಿ ಆ ವೀರನು ದೇಶ ವನ್ನು ಮರೆತಾನೆ! ಸಮ್ರಾಟನು ಸಮಯವನ್ನು ಕಾಯುತ್ತಾ ತಾಳ್ಮೆಯ ಸಹನೆ ಯಿಂದ ಸುಮ್ಮನಿದ್ದನು.

೨

ಅರಣ್ಯವಾಸ. ಮಹಾಕಠಿಣ ತಪಸ್ಸು. ಸಿಕ್ಕಿದರೆ ಆಹಾರವನ್ನು ತಿನ್ನುವುದು, ಇಲ್ಲದಿದ್ದರೆ ಉಪವಾಸವಿರುವುದು. ಅಲ್ಪಸ್ವಲ್ಪ ಸಿಕ್ಕಿದರೆ ಮಕ್ಕಳಿಗಿತ್ತು ಉಪವಾಸ ವ್ರತವನ್ನಾಚರಿಸುವುದು. ದೇಶಾಭಿಮಾನಿಗಳ ಪಾಡೆಲ್ಲಾ ಹೀಗೆಯೇ. ತಮ್ಮ ದೇಶವನ್ನು ತಾವು ನಿಷ್ಪಕ್ಷಪಾತದಿಂದ ಪ್ರೀತಿಸುವುದೇ ಅವರ ಶತಾಪರಾಧ. ಇದಕ್ಕೆ ಕಾರಾಗಾರವಾಸ, ಉಪವಾಸವ್ರತ; ಆದರೂ ಈ ಕಷ್ಟಗಳೆಲ್ಲವೂ ನಮ್ಮನ್ನು ಕರೆ ದೊಯ್ಯುವ್ವು ಎಲ್ಲಿಗೆ ಬಿಡುವುದು? ಸ್ವಾತಂತ್ರ್ಯದ ಮುಂಬಾಗಿಲಿಗೆ! ಹೀಗೆಂದೇ ತಿಳಿದು ವೀರನಾದ ರಾಣಾಪ್ರತಾಪಸಿಂಹನು ಬಂದ ಕಷ್ಟಗಳನ್ನೆಲ್ಲಾ ಸಹಿಸುತ್ತಿದ್ದನು. ಸೈನ್ಯವನ್ನು ಪುನಃ ಸೇರಿಸುತ್ತಿದ್ದನು. ಭಿಲ್ಲರ ಸಂಪೂರ್ಣ ಸ್ನೇಹ ವಿಶ್ವಾಸ ಸಹಾಯ ಗಳು ಇದ್ದುವು. ವೀರರಿಗೆ ಯಾರ ಸಹಾಯವು ಬೇಕು? ಅವರು ಸ್ವಾತಂತ್ರ್ಯ ಜೀವಿಗಳು.

ಪ್ರತಾಪಸಿಂಹನ ಜೀವನವು ಬಹುಕಷ್ಟಕರವಾಗಿದ್ದಿತು. ಅರಣ್ಯದ ದುಷ್ಟ ಮೃಗಗಳ ಕಾಟದಿಂದ ಒಂದುಕಡೆಯಿಂದ ಬೇರೊಂದುಕಡೆಗೆ ಪ್ರತಿದಿವಸವೂ ಬದಲಾ ಯಿಸಬೇಕಾಗಿದ್ದಿತು. ಒಂದುಸಲ, ಮೂರುದಿನಗಳವರೆಗೂ ಯಾವ ಆಹಾರವೂ ದೊರೆಯಲಿಲ್ಲ. ನಾಲ್ಕನೆಯದಿವಸ ಸ್ವಲ್ಪ ಕಾಡುಜೋಳವು ದೊರೆಯಿತು. ಲಕ್ಷ್ಮೀ ದೇವಿಯು ಎರಡು ರೊಟ್ಟಿಗಳನ್ನುಮಾಡಿ ಒಂದನ್ನು ಮಕ್ಕಳಿಗೆ ಹಂಚಿ, ರಾತ್ರಿ ಗೋಸುಗ ಒಂದನ್ನು ಒಂದೆಡೆಯಲ್ಲಿ ಇಟ್ಟಿದ್ದಳು. ದೈವೇಚ್ಛೆಯಿಂದ ಬಾಲಕರ ರೊಟ್ಟಿಯನ್ನೂ, ತೆಗೆದಿಟ್ಟಿದ್ದ ರೊಟ್ಟಿಯನ್ನೂ ಒಂದು ಕಾಡುಬೆಕ್ಕು ಅಪಹರಿಸಿ ಕೊಂಡು ಹೋಯಿತು. ಮಕ್ಕಳೆಲ್ಲರೂ ದೀರ್ಘವಾಗಿ ರೋಧಿಸಲಾರಂಭಿಸಿದರು. ಈ ದೃಶ್ಯವು ಉಕ್ಕಿನ ಎದೆಯುಳ್ಳಂತಹ ಪ್ರತಾಪನ ಹೃದಯವನ್ನೇ ಕರಗಿಸಿತು.

ದುಃಖದಿಂದ ನರಗಳುಬ್ಬಿದುವು. ಬಾಯಿಂದ ಮಾತು ಹೊರಡದಂತಾಯಿತು. ಮೇವಾರಿನ ಸೂರ್ಯನ ಪಾಡು ಅರಣ್ಯರೋದನಮಾಡುವ ಹಾಗಾಯಿತೇ? ಅಕಟ ಕಟಾ! ಜಗದೀಶ್ವರಾ! ನಮ್ಮ ಈ ಪ್ರಯಾಸವಾದ ಪ್ರವಾಸವು ಇನ್ನೂ ಎಷ್ಟು ದಿನಗಳವರೆಗೆ? ಮುದ್ದು ಮೇವಾರಿನ ಮುಖವನ್ನು ನಾವು ಯಾವಾಗ ನೋಡುವೆವು? ಎಂಬ ಶೋಕತರಂಗಾವಳಿಗಳು ವೀರಪತ್ನಿಯಾದ ಲಕ್ಷ್ಮೀದೇವಿಯನ್ನು ಬಾಧಿಸತೊಡಗಿದವು. ಅಕ್ಬರನಿಗೆ ಕ್ಷಮೆಯ ಪತ್ರವೊಂದನ್ನು ಬರೆಯಲು ಕಡೆಗೆ ರಾಣನು ನಿಶ್ಚಯಿಸಿದನು ಅಭಿಜ್ಞಶ್ರೇಷ್ಠನಾದ ರಾಣಾಪ್ರತಾಪಸಿಂಹನು ಅಜ್ಞರೊಡೆಯನಾದನು. ಪತ್ನೀಪುತ್ರರನ್ನು ಪೋಷಿಸಲು ತಾನು ಅಶಕ್ತನಾದೆನಲ್ಲಾ ಎಂಬ ಅಂಡಲೆಯಿಂದ ದಿನೇ ದಿನೇ ಕೃಶನಾಗುತ್ತಾ ಬಂದನು. ದುಃಖವು ರಾಣನನ್ನು ಪೂರ್ಣವಾಗಿ ವ್ಯಾಪಿಸುತ್ತ ಬಂದಿತೇವಿನಾ ಮಾಣದಾಯಿತು. ಧೈರ್ಯವನ್ನು ತಳೆದು ಸಮ್ರಾಟನು ತಿರಬಾಗುವ ಲೇಖನವೊಂದನ್ನು ತನ್ನ ಪತ್ನಿಗೆ ತಿಳಿಸದಲೆ ಬರೆದನು. ಪತ್ನಿಯಾದ ಲಕ್ಷ್ಮೀದೇವಿಗೆ ಈ ವಾರ್ತೆಯು ಮುಟ್ಟಿದಲ್ಲಿ ಆಕೆಯು ನಿರಾಶೆಯಿಂದ ಬಸವಳಿದು ಕೂಡಲೆ ಪ್ರಾಣತ್ಯಾಗಮಾಡಿಯಾಳೆಂಬ ಸಂದೇಹದಿಂದ ರಾಣನು ಅತಿಪ್ರಾಮುಖ್ಯವಾದ ಈ ವಿಷಯವನ್ನು ಮರೆಮಾಡಿಟ್ಟನು. ಅಯ್ಯೋ! ಇಂದಿನ ದಿನ ಮೇವಾರಿನ ಕಳಶವು ಕಳಚಿಬಿದ್ದಿತೇ! ರಾಣಾಪ್ರತಾಪಸಿಂಹನೂ ಕೂಡ ಹೂಣರಸನ ಅಡಿಯಾಳಾದನೇ!

ಪತ್ರವು ವೇಳೆಗೆ ಸರಿಯಾಗಿ ರಾಣನ ಹಸ್ತವನ್ನು ಸೇರಿತು. ಶ್ರಮಪಟ್ಟು ಅರಣ್ಯವನ್ನೆಲ್ಲಾ ಒಂದು ಔಷಧದ ಬಳ್ಳಿಗಾಗಿ ಶೋಧಿಸುತ್ತಿರುವವನಿಗೆ ಅದೇ ಬಳ್ಳಿಯು ಕಾಲಿಗೆ ಬಂದು ತೊಡರಿಕೊಂಡರೆ ಎಷ್ಟು ಆನಂದವುಂಟಾಗುವುದೋ ಸಮ್ರಾಟ ಅಕ್ಬರನಿಗೂ ಅದೇ ಬಗೆಯ ಆನಂದವಾಯಿತು. ಹೆಮ್ಮೆಯು ಇಮ್ಮಡಿಸಿತು. ತನ್ನನ್ನು ವಿರೋಧಿಸುವವರಿಲ್ಲ ಎಂಬ ಉಗ್ಗಡಣೆಯುಂಟಾಯಿತು. ತನ್ನನ್ನು ತಾನೇ ಸ್ತುತಿಸಿಕೊಂಡನು. ಈ ಆನಂದ ಸಂಭ್ರಮಕ್ಕೋಸ್ಕರ ದೊಡ್ಡ ಔತಣಕ್ಕೆ ಅಣಿಮಾಡಿದನು. ತನ್ನ ನಿಕರಕ್ಕೆಲ್ಲಾ ಮನಸ್ವೀ ದಾನಮಾಡಿದನು. ರಾಣೀವಾಸದವರ ಹರ್ಷಕ್ಕಾಗಿ ಖುಸರೋಜ್ ಹಬ್ಬವನ್ನು ಮಾಡಹೇಳಿದನು. ಖುಸ್ ರೋಜ್ ಹಬ್ಬವು ಅಕ್ಬರನ ಅರಮನೆಯಲ್ಲಿ ವರ್ಷಂಪ್ರತಿಯಲ್ಲಿಯೂ ಆಗತಕ್ಕ ವಸ್ತುಪ್ರದರ್ಶನ ಮತ್ತು ಔತಣ. ಸಾಮಂತ ಅರಸರ, ಸರದಾರರ ಮನೆಯ ಸ್ತ್ರೀಯರೆಲ್ಲರೂ ತಾವೇ ರಚಿಸತಕ್ಕ ಸಾಮಾನುಗಳನ್ನು ತಂದು ಪ್ರದರ್ಶಿಸುವುದು. ಸಮ್ರಾಟನೂ, ಅವನ ರಾಜ್ಞಿಯರೂ ಅವುಗಳನ್ನು ನೋಡಿ ತಕ್ಕಂತೆ ಬಹುಮಾನ ಮಾಡುವುದು. ಸಮ್ರಾಟನ ಬಹುಮಾನದ ಚಂದವೇ ಚಂದ. ರೂಪವತಿಯಲ್ಲದ ರಮಣಿಯು ವಿಶೇಷ ನಾಜೂಕಾಗಿಯೂ ರಮ್ಯವಾಗಿಯೂ ಇರುವ ಪ್ರದರ್ಶನವನ್ನು ತಂದಿಟ್ಟಿದ್ದರೂ ಅದರಕಡೆಗೇ ಸಮ್ರಾಟನ ದೃಷ್ಟಿಯು ಹೋಗದು. ರಂಭೆ ಊರ್ವಶಿಯರನ್ನೆ ಧಿಕ್ಕರಿಸುವ ರೂಪವತಿಯರಾದ [illegible]

ವಾದ ಸಾಮಾನುಗಳನ್ನು ತಂದಿದ್ದರೂ ಅವುಗಳ ಮೆಚ್ಚಿಗೆಯೋ ಮೆಚ್ಚಿಗೆ! ಅವುಗಳಿಗೆ ಮಾಡುವ ಗೌರವ, ಬಹುಮಾನಗಳೇ ಬೇರೆ! ಈ ಖುಸ್ ರೋಜ್ ಹಬ್ಬಕ್ಕೆ ಸರ್ವರೂ ಬರಬೇಕೆಂದು ಸಮ್ರಾಟನ ಆಜ್ಞೆ.

ಯೋಷಿಯು ಹೋಗಲೊಲ್ಲಳು; ಪೃಥ್ವಿಯು ಬಿಡಲೊಲ್ಲನು. ಯೋಷಿಯು ರೂಪ ಲಾವಣ್ಯಗಳಿಂದ ತನಗೇನಾದರೂ ಸಮ್ರಾಟನ ವಿಶ್ವಾಸವು ಬರಲೆಂದು ಪೃಥ್ವಿಯ ಹಾರೈಕೆ. ಪಶುವಿಗೆ ಮುಖತೋರಿಸಬೇಕಲ್ಲಾ ಎಂದು ಯೋಷಿಗೆ ಸಂಕಟ. ಅಕ್ಬರನ ಸನ್ನಿವೇಶಗಳನ್ನು, ನಡತೆಗಳನ್ನು ಯೋಷಿಯು ಚೆನ್ನಾಗಿ ಬಲ್ಲವಳಾದ್ದರಿಂದ ವಿಶೇಷ ಭಯಕ್ರಾಂತೆಯಾಗಿದ್ದಳು. ತನ್ನ ಜಾಣ್ಮೆಯನ್ನೆಲ್ಲಾ ಪ್ರಯೋಗ ಮಾಡಿದಳು. ಏನುಹೇಳಿದರೂ ಪೃಥ್ವಿಯು ಜಗ್ಗನು. ಕಡೆಗೆ ಪತಿಗಸಲುವಾಗಿ ಖುಸ್‌ರೋಜ್‌ಗೆ ಹೋಗಲು ನಿಶ್ಚಯಿಸಿದಳು.

ಹಬ್ಬದ ಗೊಂದಲವು ಮುಗಿಯಿತು. ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಯೋಷಿಯೂ ಮನೆಗೆ ಬಂದಳು. ಯೋಷಿ ಬಂದವೇಳೆಯಲ್ಲಿ ಆಸ್ಥಾನ ಕವಿಯು ಕವನವನ್ನು ಕಟ್ಟುತ್ತಿದ್ದನು. ಯೋಷಿಯ ಮುಖದಲ್ಲಿ ರಮ್ಯವಿಲ್ಲ, ನಗೆಯಿಲ್ಲ, ಹರ್ಷವಿಲ್ಲ. ಕ್ರೋಧವು ರಾರಾಜಿಸಿತು. ಗೃಹಕ್ಕೆ ಬಂದವಳು ನೇರವಾಗಿ ತನ್ನ ಕೆಲಸಕ್ಕೆ ಹೋಗದೆ ಪತಿಯ ಮುಂದೆ ಕವನವನ್ನು ಈಕ್ಷಿಸುತ್ತ ನಿಂತಿದ್ದಳು.

ಪೃಥ್ವಿ:—ಯೋಷಿ, ಯಾವಾಗ ಬಂದೆ? ಬಾ! ಬಾ! ಕವನದ ರಮ್ಯತೆಯಲ್ಲಿ ನಿನ್ನ ಆಗಮನವು ತಿಳಿಯಲೇ ಇಲ್ಲ. ಯೋಷಿ! ಇಂದಿನ ದಿನ ಕವನವು ಬಹು ಸೊಗಸಾಗಿ ಬಂದಿದೆ. ಪ್ರಾಸವೆಲ್ಲವೂ ಬಹಳ ಚೆನ್ನಾಗಿ ಕೂಡಿದೆ. ಮುಖ್ಯ, ಸಮ್ರಾಟನ ಅದೃಷ್ಟವೆಂದೇ ಹೇಳಬೇಕು.

ಯೋಷಿ:—ಕವನ, ಕವನ! ಕವನವು ಸೊಗಸಲ್ಲವೇ! ಕವನವು ರಮ್ಯವಲ್ಲವೇ! ನಿಮಗೆ ನಿಮ್ಮ ಕವನ! ನಿಮ್ಮ ಸಮ್ರಾಟ ಇವೆರಡೇ ಪೂಜ್ಯವಸ್ತುಗಳಲ್ಲದೆ ನಿಮ್ಮ ಪತ್ನಿಯ ಅಗಾಧವಾದ ಪಾತಿವ್ರತ್ಯವು ಪೂಜ್ಯವಾದುದಲ್ಲ! ನೀಚಸ್ತುತಿಮಾಡುವ ನಿಮ್ಮ ನಾಲಗೆಯು ಸೀಳಿಹೋಗದೇಕೆ?

ಪೃಥ್ವಿ:—ಯೋಷೀ, ಇದೇನು ನಿನ್ನ ಆವೇಶ? ಇದೇನು ನಿನ್ನ ಕೋಪ? ಯೋಷೀ, ಸ್ಥೈರಣೆಯನ್ನು ತಂದುಕೋ, ನಿಧಾನವಾಗಿ ಹೇಳು. ಏನು ಆಯಿತು? ವಿಶೇಷವೇನು? ನಿನಗೆ ಕೋಪಬರಲು ಕಾರಣವೇನು? ಎಲ್ಲವನ್ನೂ ನಿಧಾನವಾಗಿ ಹೇಳು.?

ಯೋಷಿ:— ಏನು! ಸ್ಥೈರಣೆಯೋ! ನಿಧಾನವೇ! ಸ್ವಪತ್ನಿಯ ಮಾನವನ್ನು ಕಾಪಾಡುವ ಶಕ್ತಿಯಿಲ್ಲದಿರುವ ನಪುಂಸಕರಾದ ನಿಮ್ಮಲ್ಲಿ ನಾನು ಹೇಳತಕ್ಕದ್ದೇನಿದ್ದೆ!

ನಾನು ಹೆಂಗಸು; ಆದರೂ ಜಗದಾಂಬೆಯ ಅನುಗ್ರಹವಿದೆ! ನಾನೇ ಸೇಡನ್ನು ತೀರಿಸಿಕೊಳ್ಳುತ್ತೇನೆ. ನಾನೇ ಸಮ್ರಾಟನ ಸಾಮ್ರಾಜ್ಯಕ್ರಾಂತಿಗೆ ಮೂಲದೇವತೆಯಾಗುತ್ತೇನೆ.

ಪೃಥ್ವಿ:— ಯೋಷೀ, ಏನು! ಸಮ್ರಾಟನು ನಿನ್ನನ್ನು ಹಿಂಸಿಸಿದನೇ?

ಯೋಷಿ:—ಹಿಂಸೆಪಡಿಸಿಕೊಳ್ಳಲು ನಾನೇನು ನಿಮ್ಮಂತಹ ಜಿರಳೆಯಲ್ಲ. ಈದಿನ ಈ ಚೂರಿಯು! ಈ ದಿವ್ಯ ಖಡ್ಗವು ನನ್ನ ಬಳಿಯಲ್ಲಿಲ್ಲದಿದ್ದರೆ ನಿಮ್ಮ ಹೆಂಡತಿಯು ಬಲಾತ್ಕಾರದಿಂದ ಸಮ್ರಾಟನ ವೇಶ್ಯೆಯರಲ್ಲಿ ಒಬ್ಬಳಾಗುತ್ತಿದ್ದಳು.

ಪೃಥ್ವಿ:—ಏನಂದೆ ಯೋಷಿ!

ಯೋಷಿ:—ಪ್ರಭೂ! ಏನೂ ಇಲ್ಲ. ನಿಮ್ಮಲ್ಲಿ ಪುಂಸತ್ವವೂ, ಕ್ಷಾತ್ರತೇಜವೂ ಎಳ್ಳಷ್ಟಾದರೂ ಇದ್ದರೆ ಸಮ್ರಾಟನಮೇಲೆ ಪಣಕಟ್ಟಿ ಪ್ರತಾಪನ ಮರೆಹೋಗಿ ಸಮ್ರಾಟನ ಕೊನೆಗಾಲವನ್ನು ಕೂಡಲೆ ತಂದು ನಿಮ್ಮ ಹಿಂದೂಭಗಿನಿಯರ ಅಮೂಲ್ಯವಾದ ಮಾನಗಳನ್ನು ರಕ್ಷಿಸಿ ನಾನು ಸಹಿಸಲಾರೆ; ಇನ್ನೊಂದು ಕ್ಷಣಕಾಲವೂ ಸಹಿಸಲಾರೆ. ಪಾಪಸಂಭರಿತವಾದ ಈ ಭೂಮಿಯಲ್ಲಿ ಇನ್ನೊಂದು ಘಳಿಗೆಯೂ ಇರಲಾರೆ. ನನ್ನ ಕೊನೆಯ ಪ್ರಾರ್ಥನೆಯನ್ನು ನಡೆಸಿಕೊಡಿ. ಸತ್ಯವಾದ ಕಾರ್ಯರಂಗಕ್ಕಿಳಿದು ಪ್ರಾಣವನ್ನು ಒಪ್ಪಿಸಿದರೂ ಶಂಕೆಯಿಲ್ಲ. ಪಾಮರನಾದ ಸಮ್ರಾಟನ ಸೇವೆಮಾಡಿ ಕುನ್ನಿಯಂತೆ ಸಾಯುವುದಕ್ಕಿಂತ ದೇಶಕ್ಕಾಗಿ ಪ್ರಾಣಬಿಟ್ಟರೆ ವೀರವಲಯದಲ್ಲಿ ನಿಮಗೊಂದು ಸ್ಥಾನಸಿಕ್ಕುತ್ತದೆನ್ನುತ್ತಾ ತನ್ನ ಹಸ್ತದಲ್ಲಿದ್ದ ಚೂರಿಯಿಂದ ಇರಿದುಕೊಂಡು ಪತಿಯ ಪಾದಗಳಮೇಲೆ ಉರುಳಿ ಪ್ರಾಣವನ್ನು ತ್ಯಜಿಸಿದಳು. (ಸಶೇಷ)

---

# ಸ್ತ್ರೀಯರೂ ಸಮಾಜ ಸೇವೆಯೂ.



(ಹಿಂದಿನ ಸಂಚಿಕೆಯಿಂದ ಮುಂದರಿಸಿದ್ದು.)

ನಂತರ ಅವರಿಗಾಗಿ ಕಿಂಡರ್‌ಗಾರ್ಟೆನ್ ತರಗತಿಗಳನ್ನಿಡಬಹುದು. ಈ ತರಗತಿಗಳಲ್ಲಿ ಸಕಲವಿಧವಾದ ಅಂತಸ್ತಿನವರೂ ಕಲೆತು ಕೆಲಸಮಾಡಲು ತಕ್ಕುದಾಗಿದ್ದರೆ ಬಹಳ ಉತ್ತಮವಲ್ಲದೆ ದಿನೇ ದಿನೇ ಪರಸ್ಪರ ಸೋದರಭಾವವು ಹೆಚ್ಚಿ ಇಂತಹ ಸಂಘಗಳು ಕ್ರಮೇಣ ಭೂಲೋಕಸ್ವರ್ಗವಾಗಿ ಪರಿಣಮಿಸುವುದರಲ್ಲಾವಸಂಶಯವೂ ಇಲ್ಲ. ಇಂತಹ ಏರ್ಪಾಡು ಪೂನಾಪಟ್ಟಣದ ಸೇವಾಸದನದಲ್ಲಿರುವುದೆಂದು ಕೇಳಿರುವೆನು.

ನಮ್ಮ ಮಹಿಳೆಯರ ಮನಸ್ಸಿನಲ್ಲಿ ಸ್ವಾರ್ಥತ್ಯಾಗ, ಪರಸ್ಪರಪ್ರೇಮ, ಪರಹಿತಾಕಾಂಕ್ಷತ್ವ, ಇತ್ಯಾದಿ ಗುಣಗಳು ಬೇರೂರಿ ತಾವೇ ಸ್ವತಃ ಇಂತಹ ಕೆಲಸ ಮಾಡಲು ಮುಂದರಿಯುವವರೆಗೂ ನಿಸ್ಪೃಹತ್ವದಿಂದ ಕೆಲಸಮಾಡತಕ್ಕವರು ಕೆಲವರು ಅತ್ಯಾವಶ್ಯಕವಾಗಿರಬೇಕು; ಆದರೆ ಪ್ರಕೃತ ಅನೇಕಜನ ಹಿಂದೂಮಹಿಳೆಯರು ಉಪಾಧ್ಯಾಯಿನಿಯರಾಗಿಯೂ ವೈದ್ಯರಾಗಿಯೂ ಸೂಲಗಿತ್ತಿಯರಾಗಿಯೂ ಗ್ರಂಥಕರ್ತ್ರಿಯರಾಗಿಯೂ ಇರುವುದರಿಂದ ಮೇಲ್ಕಂಡರೀತಿ ಕೆಲಸಮಾಡತಕ್ಕವರು ಸಿಕ್ಕುವುದು ಅಷ್ಟುಕಷ್ಟವಲ್ಲ. ಭರತಖಂಡವನ್ನೆಲ್ಲಾ ವ್ಯಾಪಿಸಿರುವ ಚಿಕ್ಕವಯಸ್ಸಿನ ವಿಧವೆಯರ ವಿದ್ಯಾಭ್ಯಾಸಕ್ಕನುಕೂಲಮಾಡಿಕೊಟ್ಟಲ್ಲಿ ಅವರು ಸ್ವಾರ್ಥರಹಿತರಾಗಿ ಸಂಘಸೇವೆ, ಪ್ರಜಾಸೇವೆ, ರಾಷ್ಟ್ರಸೇವೆಗಳನ್ನು ಭಕ್ತಿಶ್ರದ್ಧೆಯಿಂದ ಮಾಡಬಾರದೇ? ಇಂತಹ ಸಂಘಗಳು ಮಾಡುವ ಉತ್ತಮಕಾರ್ಯಗಳನ್ನು ಪತ್ರಿಕೆಗಳಮೂಲಕ ಇತರ ಊರುಗಳ ಮಹಿಳೆಯರು ಅರಿತು ಎಚ್ಚೆತ್ತು ತಮ್ಮ ಸಹೋದರಿಯರಂತೆ ತಾವೂ ದೇಶಸೇವೆಗೆ ಮುಂದರಿಯುವರು. ಅನೇಕರು ಇಂತಹ ಕಾರ್ಯಗಳಲ್ಲಿ ಪ್ರವೇಶಿಸಿದವರು ಮನೆಯಕೆಲಸಕ್ಕೆ ಗಮನಕೊಡಲಾರರೆಂದು ಭಾವಿಸುವರು. ಇದು ತಪ್ಪಭಿಪ್ರಾಯವು. ಮನೆಯಕೆಲಸ ಪೂರೈಸಿಕೊಂಡು ಬಹುಹರಟೆಯಲ್ಲಿ ಕಳೆಯುವ ಸ್ವಲ್ಪವೇಳೆಯನ್ನು ಮೇಲ್ಕಂಡ ವಿಷಯಕ್ಕುಪಯೋಗಿಸಿದರೆ ಕುಟುಂಬಸಂಬಂಧವಾದ ಕಾರ್ಯಕ್ಕೇನೂ ಕುಂದುಕವುಂಟಾಗಲಾರದು. ಐಶ್ವರ್ಯವಂತರಾದ ಮಹಿಳೆಯರಿಗೆ ಮನೆಗೆಲಸಗಳ ತಾಪತ್ರಯವು ವಿಶೇಷವಾಗಿಲ್ಲದ್ದರಿಂದ ಸಂಘಸೇವೆಗೆ ಇವರು ಹೆಚ್ಚು ಕಾಲವನ್ನುಪಯೋಗಿಸಬಹುದು.

## ಹಣದವಿಷಯ.

ಮೇಲೆ ಹೇಳಿದ ವಿಷಯಗಳು ಕ್ರಮವಾಗಿ ನಡೆಯಬೇಕಾದರೆ ದ್ರವ್ಯದ ಸಹಾಯವು ಬಹಳವಾಗಿರಬೇಕು. ಇಲ್ಲದಿದ್ದರೆ ಅಸ್ತಿಭಾರವಿಲ್ಲದಂತಾಗುವುದು. ಇಂತಹ ಕಾರ್ಯಗಳಿಗೆ ಹಣ ಕೂಡಿಸುವ ವಿಷಯದಲ್ಲಿ ಜನರು ನಾನಾವಿಧವಾದ ದೋಷವನ್ನಾರೋಪಿಸುವುದರಿಂದ ಅವೆಲ್ಲವನ್ನೂ ಸಹಿಸಿ, ನಾವು ಮನುಷ್ಯರಲ್ಲ 'ಕಲ್ಲು' ಎಂಬ ಭಾವವನ್ನು ವಹಿಸಿ, ದೋಷಾರೋಪಣೆಗಳನ್ನೆಲ್ಲಾ ಸ್ಥಿರಮನಸ್ಸಿನಿಂದ ಸಹಿಸಬೇಕು. ನಾವು ಮಾಡುವ ಕಾರ್ಯವು ಜನಸಮೂಹದ ಕ್ಷೇಮಾರ್ಥವಾಗಲ್ಲದೆ ಕೇಡಿಗಲ್ಲವೆಂಬುದು ಕ್ರಮೇಣ ಜನರರಿತು ತಾವೇತಾವಾಗಿ ಸಹಾಯಮಾಡಲು ಮುಂದರಿಯುವವರೆಗೂ ಕಷ್ಟನಿಷ್ಠುರಗಳನ್ನು ಸೈರಿಸಿ ಧೈರ್ಯದಿಂದ ಹೋರಾಡಬೇಕು. ನನ್ನ ಅನುಭವದಂತೆ ಈ ಕೆಳಗೆ ಕೊಟ್ಟಿರುವ ಪಟ್ಟಿಯಂತೆ ಅಲ್ಪ ದ್ರವ್ಯಸಹಾಯದಿಂದ ಕೆಲಸವನ್ನು ಪ್ರಾರಂಭಿಸಿದಲ್ಲಿ ಕ್ರಮೇಣ ಇಂತಹ ಸಂಘಗಳೂ ಅವುಗಳಮೂಲಕ ನಡೆಸಲ್ಪಡುವ ತರಗತಿಗಳೂ ಜನಸಮೂಹದವರ ಮತ್ತು ಸರ್ಕಾರದವರ ಸಹಾಯವನ್ನು ಪಡೆದು ಉನ್ನತಸ್ಥಿತಿಗೆ ಬರಬಹುದು.

I ಮೊದಲನೆಯ ವರ್ಷದಲ್ಲಿ ಆಗಬೇಕಾದ ಖರ್ಚಿನಪಟ್ಟಿ:— ರೂ.

1. ಕನಿಷ್ಟಪಕ್ಷ ಎರಡು ಹೊಲಿಯುವ ಯಂತ್ರಗಳು, 2 ಕಾಲು ಚೀಲದ ಯಂತ್ರಗಳು, ಚಿಂಕಿಕೆಲಸಮಾಡುವ ಯಂತ್ರಗಳು 250

2. ಕಟ್ಟಡದ ಬಾಡಿಗೆ, ಸಂಬಳಗಳು, ಪುಸ್ತಕ, ವಾರ, ಮಾಸ ಪತ್ರಿಕೆಗಳು, ಶಿಶುಸಂರಕ್ಷಣಶಾಲೆಗೆ ಬೇಕಾದ ಸಾಮಾನುಗಳು 750

3. ಬೆತ್ತ, ದಾರ, ಸೂಜಿ, ಬಟ್ಟೆ ಮೊದಲಾದುವುಗಳಿಗಾಗಿ 500

II ಉತ್ಪತ್ತಿಯನ್ನು ಈ ಕೆಳಗೆ ಕಂಡುಬರುವ ವಿಧವಾಗಿ ತೆಗೆಯಬಹುದು (ಇವುಗಳಿಂದ ಇಷ್ಟೇ ಉತ್ಪತ್ತಿಯಾಗುವುದೆಂದು ಖಂಡಿತವಾಗಿ ಹೇಳಲಾಗುವುದಿಲ್ಲ):—

1. ಸಂಘದ ಸದಸ್ಯರು ಕೊಡತಕ್ಕ ಮಾಹೆಯಾನ ಚಂದಾ, ಆಟಪಾಟ, ವಾಚಕಶಾಲೆ ಇತ್ಯಾದಿಗಳಿಗಾಗಿ ಕೊಡತಕ್ಕ ಚಂದಾ, ಕೆಲಸ ಕಲಿಯತಕ್ಕವರಲ್ಲಿ ಅನುಕೂಲಸ್ಥರಾದವರು ಕೊಡತಕ್ಕ ಹಣ.

2. ಹೊಲಿದಬಟ್ಟೆಗಳು, ತಯಾರಾದ ಬೆತ್ತದ ಸಾಮಾನುಗಳು, ಕಾಲುಚೀಲ, ಬನಿಯನ್ ಇತ್ಯಾದಿ ವಸ್ತುಗಳ ಮಾರಾಟದಿಂದ ದೊರೆಯುವ ಲಾಭ.

3. ಸರ್ಕಾರದ ಸಹಾಯ ದ್ರವ್ಯ.

4. ಪ್ರಜಾಸಹಾಯದಿಂದ ದೊರೆಯತಕ್ಕ ಸಹಾಯದ್ರವ್ಯ ಮತ್ತು ಚಂದಾಹಣ.

ಅನಾದಿಕಾಲದಿಂದಲೂ ಕುಟುಂಬಕ್ಕೆ ಸಂಬಂಧಿಸಿದ ಸಕಲ ಕಾರ್ಯಗಳನ್ನೂ ಧೈರ್ಯ, ಶ್ರಮಸಹಿಷ್ಣುತೆ, ಚತುರತೆ ಮೊದಲಾದ ಗುಣಗಳಿಂದ ರಾರಾಜಿತರಾದ ಸ್ತ್ರೀಯರು ನಿರ್ವಹಿಸುವುದೂ, ಪುರುಷರು ದುಡಿದು ಕುಟುಂಬ ಪೋಷಣೆಗೆ ಸಹಾಯಮಾಡುವುದೂ ಸ್ಥಿರವಾಗಿ ಇಂದಿನವರೆಗೂ ನಡೆದುಬಂದಿರುವ ಪದ್ಧತಿಯಾಗಿದೆ. ಪ್ರಾಚೀನಾರ್ಯಮಹಿಳೆಯರು ಕುಟುಂಬದಲ್ಲಿನ ಸಕಲ ಸ್ವಾತಂತ್ರ್ಯವನ್ನೂ ವಹಿಸಿ ಗೃಹರಾಜ್ಯಲಕ್ಷ್ಮಿಯರಾಗಿ ಬೆಳಗುತ್ತಿದ್ದರು. ಆದರೆ ಅನೇಕಕಡೆ ಪ್ರಕೃತ ಸ್ತ್ರೀಯರು ಶಿಶು ಉತ್ಪತ್ತಿಯಂತ್ರವಾಗಿ ದಾಸ್ಯವೃತ್ತಿಯಲ್ಲಿರುವುದರಿಂದ ಪುರುಷನ ಸುಖಸೂತ್ರ ಬೊಂಬೆಯಾಗಿರುವುದರಿಂದ, ಈಗ ಅವರಿಗಿರುವ ದಾಸತ್ವವನ್ನು ತಪ್ಪಿಸಿ ಅವರಿಗೆ ಇಂತಹ ಕಾರ್ಯಗಳ ಜವಾಬ್ದಾರಿಯನ್ನು ವಹಿಸಿದರೆ ನಮ್ಮ ಮಹಿಳಾವರ್ಗದಲ್ಲನೇಕರಿಗಿರುವ ಅನೇಕ ವಿಧವಾದ ಕುಂದುಕೊರತೆಗಳು ನೀಗಿ ಸುಖಮಯವಾಗಿ ಪರಿಣಮಿಸುತ್ತದೆ. ಭಾರತರಮಣಿಯರ ವಿಷಯದಲ್ಲಿ ಪ್ರಸಿದ್ಧ ವಂಗಕವಿಯಾದ "ರವೀಂದ್ರನಾಥಟಾಗೋರ್" ಯವರು ಹೇಳಿರುವ ಒಂದು ಪದ್ಯವನ್ನು ಬರೆದು ಈ ಲೇಖನವನ್ನು ಪೂರ್ತಿಮಾಡುವೆನು. ಇದರಿಂದ ನಮ್ಮ

ಮಹಿಳಾವರ್ಗವು ಎಷ್ಟು ಪ್ರಾಶಸ್ತ್ಯವುಳ್ಳದ್ದೆಂದೂ, ಜವಾಬ್ದಾರಿಯನ್ನು ಹೊತ್ತಿರುವುದೆಂದೂ, ಪ್ರಪಂಚ ನಾಟಕದಲ್ಲಿ ಎಷ್ಟು ಮುಖ್ಯಪಾತ್ರವನ್ನು ವಹಿಸಿದೆಯೆಂದೂ ಹೇಳದೆಯೇ ತಿಳಿಯುವದು.

" With a glance of your eyes, could plunder all the
wealth of songs struck from poets, harps fair woman,
But for their praises you have no ear—therefore I
came to praise you,
You could humble at your feet, the proudest heads in
the world,
But it is you Lord ones, unknown to fame, whom you
choose to worship, therefore I worship you,
The perfection of your arms would add glory to kinlgy
splendour with their touch,
But you use them to sweep away the dust and to
make clean your humble home, therefore I am
filled with awe.

ಇಷ್ಟೊಂದು ಗೌರವವಾಗಿ ಭಾವಿಸಲ್ಪಟ್ಟಿರುವ ಮಹಿಳಾವರ್ಗವು ಈಗ ಅಬಲಾ ನಾಮವನ್ನು ಸಾರ್ಥಕಪಡಿಸಿಕೊಂಡು ಕೇವಲ ಪುರುಷನ ಆಟದ ಬೊಂಬೆಯಾಗಿ ಪರಿಣಮಿಸಿರುವುದು ಎಂತಹ ಶೋಚನೀಯವು!

ಮಹಾತ್ಮಾಗಾಂಧಿ, ದೇಶಬಂಧು ಚಿತ್ತರಂಜನದಾಸರು, ಶ್ರೀಯುತ ಪಂಡಿತ ತಾರಾನಾಥರವರು ಮೊದಲಾದವರೂ ಕೂಡ ಇಂತಹ ಸೇವಾಸಂಘಗಳಿಂದ ದೇಶೋನ್ನತಿಯಾಗುವುದೆಂದು ಅಭಿಪ್ರಾಯಪಟ್ಟಿರುವುದರಿಂದ, ಅಂತಹ ಮಹಾನುಭಾವರ ವಾಕ್ಯಗಳನ್ನು ನಿರರ್ಥಕಮಾಡದೆ ನಾವುಗಳೆಲ್ಲರೂ ಕರ್ತವ್ಯವನ್ನರಿತು ನಮ್ಮ ಸಮಾಜಸೇವೆಗೆ ಸಿದ್ಧರಾಗೋಣ. ನಾವೆಲ್ಲರೂ ಸೋದರಭಾವದಿಂದ ಐಕ್ಯರಾಗಿ ದೇಶದ, ಸಮೂಹದ, ಪ್ರಜಾವರ್ಗದ ಸೇವೆಗೆ ತನುಮನಗಳನ್ನು ಧಾರೆಯೆರೆಯೋಣ. ನಾವು ಸೇವೆಯಲ್ಲಿ ಸಂತೋಷಪಟ್ಟು, ಸೇವೆಯಲ್ಲಿ ಕಾಲಕಳೆದು, ಸೇವೆಯಲ್ಲಿಯೇ ಮುಕ್ತರಾಗೋಣ, ನಮ್ಮ ಧ್ಯೇಯ, ಆಶೆ, ಅಭಿಲಾಷೆ, ಉದ್ದೇಶ ಎಲ್ಲವೂ ಸೇವೆಯಲ್ಲಿಯೇ ಲಯಿಸಲಿ.

ಓಂ ಶಾಂತಿಶ್ಶಾಂತಿಶ್ಶಾಂತಿಃ.

(ಬೆಳಗಾಂವಿಯ ಮಹಿಳಾಸಂಘದಲ್ಲಿ ಸಂಪಾದಕಿಯವರು ಮಾಡಿದ ಉಪನ್ಯಾಸ.)



ಈ ಭಾವಚಿತ್ರದಲ್ಲಿ ನಿಂತಿರುವವರೇ

**ಮಿಸ್. ಲೀಲಾವತಿಸಿಂಗ್, ಎಂ. ಎ. ಯವರು**

ಈಕೆಯು ಹಿಂದೂ ಕ್ರೈಸ್ತ ಜಾತಿಯಲ್ಲಿ ಜನಿಸಿದಳು. ಈಕೆಯು ತನ್ನ ಹತ್ತನೆಯ ವಯಸ್ಸಿನಲ್ಲಿ ಲಕ್ನೋಪಟ್ಟಣದಲ್ಲಿರುವ ಇಸಾಬೆಲ್ ತಾಬರ್ನ್ ಬಾಲಿಕಾ ಪಾಠಶಾಲೆಗೆ ವಿದ್ಯಾಭ್ಯಾಸಕ್ಕಾಗಿ ಕಳುಹಲ್ಪಟ್ಟು ಅಂದಿನಿಂದ ಅತಿಮುತುವರ್ಜಿಯಿಂದ ವಿದ್ಯೆಯನ್ನಭ್ಯಸಿಸತೊಡಗಿ ಅಧ್ಯಾಪಕರು ಮೆಚ್ಚುವಂತೆ ಸಕಲ ಪರೀಕ್ಷೆಗಳಲ್ಲಿಯೂ ಉತ್ತೀರ್ಣಳಾಗಿ ಕೆಲವು ಕಾಲಾನಂತರ ತಾನು ಕಲಿತ ಶಾಲೆಯಲ್ಲಿಯೇ ಉಪಾಧ್ಯಾಯಿನಿಯಾದಳು. ತನ್ನ ವಿದ್ಯಾಪ್ರೌಢಿಮೆಗಾಗಿ ದೊರೆತ ಬಹುಮಾನ ದ್ರವ್ಯಗಳನ್ನೆಲ್ಲಾ ಬಡವಿದ್ಯಾರ್ಥಿನಿಯರ ಸಹಾಯಕ್ಕಾಗಿ ಉಪಯೋಗಿಸುತಿದ್ದಳು. ಇವರ

ವಿದ್ಯಾಸಕ್ತಿಯನ್ನು ಕಂಡ ಆ ಕಲಾಶಾಲೆಯ ಪ್ರಿನ್ಸಿಪಾಲರಾದ ಇಸಾಬೆಲ್ ತಾಬೆರ್ನ್ ಮಹಿಳೆಯು 1900 ನೆಯ ಇಸವಿಯಲ್ಲಿ ಈಕೆಯನ್ನು ಉಚ್ಛಶಿಕ್ಷಣಕ್ಕಾಗಿ ಅಮೆರಿಕಾ ಖಂಡಕ್ಕೆ ಕಳುಹಿಸಲು ಈಕೆಯು ಅಲ್ಲಿಯೂ ಶಿಕ್ಷಣಹೊಂದಿ ಅನೇಕ ಬಹುಮಾನಗಳನ್ನು ಪಡೆದು ಮರ್ಯಾದೆ ಗೌರವಗಳನ್ನು ಪಡೆದು ಮರಳಿ ಹಿಂದೂಸ್ಥಾನಕ್ಕೆ ಬಂದು ಲಕ್ನೋ ಶಾಸ್ತ್ರ ಬಾಲಿಕಾಪಾಠಶಾಲೆಯಲ್ಲಿ ಹದಿನೇಳುವರ್ಷಗಳು ಉಪಾಧ್ಯಾಯಿನಿಯಾಗಿ ಕೆಲಸಮಾಡಿದಳು. ಈಕೆಯು ಅನೇಕಕಡೆ ವಿದ್ಯಾಭ್ಯಾಸದ ಬದಲಾವಣೆಯ ವಿಷಯವಾಗಿ ಶ್ರೇಷ್ಟವಾದ ಉಪನ್ಯಾಸಗಳನ್ನು ಕೊಟ್ಟು ಅನೇಕಕಡೆಯ ಶಿಕ್ಷಣ ಸಂಸ್ಥೆಗಳಿಂದ ಬಹುಮಾನಗಳನ್ನು ಪಡೆದಳು. 1907 ನೆಯ ಇಸವಿಯಲ್ಲಿ ಜಪಾನಿನ ರಾಜಧಾನಿಯಾದ ಟೋಕಿಯೋಪಟ್ಟಣದಲ್ಲಿ ಜರಗಿದ ಪ್ರಪಂಚ ಕ್ರೈಸ್ತವ ವಿದ್ಯಾರ್ಥಿ ಸಭೆಗೆ ಈಕೆಯನ್ನು ಹಿಂದೂಸ್ಥಾನದಿಂದ ಪ್ರತಿನಿಧಿಯಾಗಿ ಕಳುಹಿಸಲು, ಈಕೆಯನ್ನು ಆ ಸಭೆಯವರು ಅಧ್ಯಕ್ಷಳನ್ನಾಗಿ ಮಾಡಿ ಗೌರವಿಸಿದರು. ಈಕೆಯು ಆಗ ಕಷ್ಟಪಟ್ಟು ಸ್ಥಾಪಿಸಿದ ಬಾಲಿಕಾ ಪಾಠಶಾಲೆಯು ಈಗ ದೊಡ್ಡ ಕಲಾಶಾಲೆಯಾಗಿ ಪರಿಣಮಿಸಿದೆ ಈಕೆ ತನ್ನ ಕಲಾಶಾಲೆಯ ಸಂಬಂಧವಾಗಿ ಮತ್ತೆ ಎರಡು ಮೂರಾವೃತ್ತಿ ಅಮೆರಿಕಾ ಮೊದಲಾದ ದೇಶಗಳಲ್ಲಿ ಸಂಚರಿಸಿ ಕಲಾಶಾಲೆಗೆ ಸಾಕಾದಷ್ಟು ದ್ರವ್ಯಸಂಚಯ ಮಾಡಿದಳು "ನನ್ನ ಜೀವವೊಂದು ಮಾತ್ರ ಗಟ್ಟಿಯಾಗಿಗಿದ್ದರೆ ಈ ಕಲಾಶಾಲೆಯು ಸ್ಥಿರವಾಗಿ ನಿಲ್ಲುವಂತೆ ಮಾಡಿ ಹಿಂದೂ ಬಾಲಕಿಯರು ವಿದ್ಯಾವೈಭವದಿಂದ ತುಳುಕುವಂತೆ ಮಾಡುವೆನು" ಎಂದು ಸರ್ವದಾ ಹೇಳುತಿದ್ದಳು. ಕಷ್ಟಪಟ್ಟು ಕಲಾಶಾಲೆಯನ್ನೇನೋ ಸ್ಥಿರವಾಗಿ ನಿಲ್ಲಿಸಿದಳು; ಆದರೆ ಜೀವವು ಶಾಶ್ವತವಾಗಿ ನಿಲ್ಲಲಿಲ್ಲ. 1909 ನೆಯ ಇಸವಿ ಮೇ ತಿಂಗಳಿನಲ್ಲಿ ಚಿಕಾಗೋ ಪಟ್ಟಣದಲ್ಲಿ ಅಕಾಲಮರಣವನ್ನು ಹೊಂದಿದಳು. ಈಕೆಯು ನೆಟ್ಟಬೀಜವು ಫಲಿಸಿ ಈಗ ಅದೇ ಶಾಲೆಯೇ ಲಕ್ನೊ ಮಹಿಳಾವಿದ್ಯಾಲಯವಾಗಿದೆ. ಈಕೆಯ ಅಕಾಲ ಮರಣದಿಂದ ಭರತಖಂಡವು ವಿದ್ಯಾಮಾತೆಯೊಬ್ಬಳನ್ನು ಕಳೆದುಕೊಂಡಂತಾಯಿತು. ಭಾರತಪುತ್ರಿಯರಲ್ಲಿ ಕೆಲವರಾದರೂ ಈ ನಾರೀಮಣಿಯಂತೆ ತನ್ನ ಸೋದರಿಯರ ವಿದ್ಯಾಭಿವೃದ್ಧಿಗಾಗಿ ಪಾಡುಪಡುವರಾದರೆ ದೇಶವು ವಿದ್ಯಾವೈಭವದಿಂದ ತುಂಬಿ ತುಳುಕುವುದರಲ್ಲಿ ಸಂಶಯವೇನಿದೆ? ಶಕ್ತಿ ಶ್ರದ್ಧೆಯೂ ಉತ್ಸಾಹವೂ ನಮ್ಮ ಮಹಿಳಾ ವರ್ಗದಲ್ಲಾವಿರ್ಭವಿಸಿ ನಮ್ಮ ರಾಷ್ಟ್ರಸೇವೆಯನ್ನು ಸ್ಥಿರವಾಗಿ ಮಾಡಲಿ. ಅನುಸರಣೀಯವಾದ ಈ ಲಲನಾಮಣಿಯ ಗುಣವನ್ನು ನಾವೂ ಅನುಸರಿಸೋಣ.

ಈಕೆಯ ಆತ್ಮಕ್ಕೆ ಜಗದೀಶ್ವರನು ಶಾಂತಿಯನ್ನುಂಟುಮಾಡಲಿ.

ಓಂ ಶಾಂತಿಶ್ಶಾಂತಿಶ್ಶಾಂತಿಃ.

---

# ಮಾನವ ಸುಬೋಧಾಮೃತ



(ಹಿಂದಿನ ಸಂಚಿಕೆಯಿಂದ ಮುಂದರಿಸಿದ್ದು)

---

## ೨. ಪಂಚೇಂದ್ರಿಯಗಳು.

ಭಾ|| ಮೊದಲೆರಚಿಸಿದ್ದಂಗಗಳತಿ ನೀ |
ಪಡೆದು ಹೆಚ್ಚಳಪಡುವುದೊಳಿತೇಂ |
ಪುದಿದಬುದ್ಧಿಗೆ ಭಾಪುಭಾಪೆಂದೊರೆವುದನುಚಿತವು ||
ಹೃದಯದೊಳಗಾತ್ಮನೆಲಸಿಹನೆಂ |
ಬುದನಂದು ತನುವಿಂಗೆದೇವಂ |
ವಿದಿತಮಹಿಮಾನ್ವಿತನು ಮೆರೆಯುನುಮೆನ್ನುತರಿಯುವುದು ||೧||

ಸಲೆಸುಧಾನ್ಯವ ನಡುವಕಾರ್ಯಕೆ |
ನೆಲವನೊದಲೊಳು ಹಸನಗೈದೊಡೆ |
ಫಲವತಾನತಿಯಾಗಿ ಮಾನನೊಂದುವನು ಮೇಣು ||
ನೆಲದೆಳುಂಬರನಗ್ನಿಕುಂಡವ |
ನಲಸದಲೆ ತಾಜವದೆಸಿದ್ಧವ |
ಗೊಳಿಸಿಕೊಳ್ವುದು ರಚಿಪಸುವರ್ಣಪಾತ್ರೆಗೆ ಮುನ್ನಮೆ ||೨||

ಪವನಪುರುಷನ ಗತಿಯುತೆರದಿಂ |
ಜವದೆಜಲಧಿಯು ವೀಚಿಗಳು ತಾ |
ವವಃಯೊಳು ಮೇರೆಗಳ ಮಾರದೆಸತ್ತ್ವಪರಿವವೊಲು ||
ಸವನಿಪಂತೆಯೆ ಕೇಳಲವ್ರೊ ಮಾ |
ನವಗೆ ತಾಪ್ರೇರಿಸುವ ನಡೆಯಿ.ಪ |
ಹವಣಮರಿಯುತೆ ದೇಹಯಂತ್ರವನಾತ್ಮನೊಲವಿನಲಿ ||೩||

ನೀರವೋಲಣಗುಳ್ಳಿಯುಂದದಿ |
ತೋರುವೀತನುವಿಗೊಡೆಯಾತ್ಮನು |
ಗಾಳುಗೊಳಿಸುವ ವಿಧದಿ ತನುವಿನಮೇಲೆ ಕರಣಗಳ ||

ವಾರಗಳನೆಬ್ಬಿಸದೆ ತಾವ್ಪತ |
ಸಾರಮುಹತನುವಿಂಗೆ ಬಿಡದಾ |
ಧಾರವೆಲುಬುಗಳಾಗಿಹುದೆನುತಲರಿಯೊ ಮಾನವನೆ ||೪||

ಜಲಧಿಯದು ಬಗರಿಗೆಗೆಮೂಲ |
ಸ್ಥಳಮದಾಗುತಲದುವೆನದಿಯಂ |
ತಲಸದೆಪರಿದು ಪಿಂದಿರುಂಗುತುದಧಿಯುಸೇರ್ವವೊಲು ||

ನೆಲದೆಮನುಜನ ನಿಖಿಳಕಶ್ಮವು |
ನಿಲದೆಮೂರ್ಗದಿಂ ಪೊರಟುಜವದಿಂ |
ತಳುವಗೊಳ್ಳದೆ ಪೊರಟಕಾನಕೆ ಬಂದು ಸಾರುವುದು ||೫||

ಮೇಲೆಯೊರೆದಿಹಪೊನಲದೆರಡುಂ |
ಜಾಲಮಾಳುಗಳಲ್ಲ ನೋಡೆ ದ |
ಯಾಲವಾಲನ ನೇಮವೆಂದರಿಯುವುದು ಯೋಚಿಸದೆ ||

ನೀಲಮೇಘಶ್ಯಾಮ ನಂಪ್ರಿಯ |
ಕಾಲನೇಮಿದಿಪಿಡಿದು ಸದ್ಗುಣ |
ಶೀಲನಾಗುತೆ ಜೀವಿಸಿರ್ಪುದೆ ಜನ್ಮಸಾರ್ಥಕವು ||೬||

ಪರಿಮಳದವಾಸನೆಯ ನರಿವುದು |
ಮೆರೆವ ನಾಶಿಕವಲ್ಲವೆ ರಸಗಳ |
ಪರಿಯನರಿವುದು ರಸನೆಯಲ್ಲವೆ ಮಿತಿಯಮೀರ್ದಪರಿ ||

ತರತರದೆ ಸೇವಿಸಿರಲವುಗಳ |
ನರಿಮೆಗೈತರದೆ ಬಹುದುಸ್ಸಹ |
ಎಳುವಳತದಿಂ ಪರಿಣಮಿಸಿ ಕೇಡಿಗೆಡೆಯಾಗಿಪ್ಪುವು ||೭||

ತನಗೆಕೇಡುಗಳೆಂದು ಬಿಡದಲೆ |
ಹನನಕೆಡೆಯಾಗಿಸದೆ ತಾವ್ಪದು |
ಮಿನುಗುವಾನಯನಂಗಳಲ್ಲವೆ ಪೇಳಿರೊ ಮಾನವನೆ ||

ಮನಕೆಗೋಚರವಾಗಲದುವೇ |
ಘನತೆಯೊಂದಿಪ ನಿಜವುದಲ್ಲವು |
ದಿನುತೆ ದಿವೆಗೆಡೆಗೈಸಿ ನಾಶಕೆ ಹೇತುವಾಗಿಪ್ಪವು ||೮||

ಅದರಿನಿಂನಿನ್ನಾತ್ಮನಂ ಸ |
ಮ್ಮುದದೆ ವಿತರಿಸಿಂವಿಡುತೆ ಬೋಧಿಸ |
ಲದಕೆ ಸನ್ಮಾರ್ಗಾವಲಂಬನೆಯನ್ನು ಸಂತತವು ||
ವಿದಿತಮಾದಾಸತ್ಯಮಾರ್ಗದೊ |
ಳದುವೆ ಚರಿಸಲು ಹದನವಾಂತೊಡೆ |
ಮದವಿವರ್ಜಿತನಾಗಿ ಶಾಂತಿಯುವಾಂಛುಬಾಳುವೆಯೊ ||೯||

ಕರವುವಿಕಚಿಪ ಕಾರ್ಯಮಾರಯೆ |
ಧರೆಯೊಳಚ್ಚರಿಯಾಗಿ ತೋರುತ |
ಲಿರಲು ದೇವನಿನಗದನೀಡಿಹನೆಂದು ಭಾವಿಸುತೆ ||
ಪರಿಪರಿಯೊಳಳಲಿಂಧನೊಂದುತೆ |
ಕರಕರೆಯ ಬಡುತಿರ್ಪಜೀವಿಯ |
ಮರೆಯದಲೆ ಪಾಲಿಪುದೆ ಸಂತತಕರಕೆ ಭೂಷಣವು ||೧೦||

ಜಗದಜೀವಿಗಳೊಳಗೆ ನೀನೆಯೆ |
ಬಗೆಯನಾಣೆಂದಿರಲು ಗೈದಿಹ |
ಬಗೆಯದನುಯೋಚಿಸಲು ಸಂತತ ಬಗೆಗೆಬಾರದಿದೆ ||
ಮುಗುದಮಾನವ ! ನಿನ್ನೊಳಿಹುದದ |
ಮೊಗದೆಕಾಣ್ಬುದ ಕಶದೊಳಪವಾ |
ನಗಳ ನಾನುವಕಾರ್ಯವೆಂದಿಗು ರಚಿಸಬಾರದಲೆ ||೧೧||

ವದನಕಡರಿಹ ಕೆಂಪನೀಕ್ಷಿಸ |
ಲೊದಗಿಹಾಭಯದಿಂ ವಿಕಾರವ |
ಸದುವೆಗೈದಿರಿಪರ್ಜಿಸುತೆ ಕಲ್ಮಷದ ಕಾರ್ಯಗಳ ||
ಅದರಿನಿಂತವ ಮೆರೆವ ಹೃದಯದೊ |
ಳದುಬುತದ ಬಯವಿರ್ಪಕತದಿಂ |
ಬುಧರಮತದಿಂದದನುವರ್ಜಿಸೆ ಲೋಕಸನ್ಮತವು ||೧೨||

ಮೆರೆವ ಶೈಯಾಸನದೆ ನಿದ್ರಿಸು |
ತಿರಲು ಸುಖದುಃಖಗಳ ಭಾವವು |
ಧರದೊಳಾತ್ಮಗೆಸೂಚಿಸುವುದದು ಪೂರ್ವಭಾವಿಯೊಳು ||
ಅರಿಮೆಯಿಂ ಯೋಚಿಸುತಲನ್ಯಗಳಿ |
ಗಿಳದೆ ಮನ್ನಣೆಯಾವುದೊಳ್ಳಿತು |
ಗಿರಿಧರನಮುಳದಂತೆಯಾದುದು ಮೆಂದುಭಾವಿಪುದು ||೧೩||

ಮುಂದಣದ ಫಲವರಿಯಲಾರೆಯೊ |
ಪಿಂದೆಗೈದಾವಿವಿಧ ಸುಕೃತಗ |
ಳಿಂದ ಮಾನವಜನ್ಮಕೈದಿಹೆ ವೃದ್ಧಿಗೈತರುವ ||
ಕಂದರಿಗೆ ಸುಜ್ಞಾನಬೋಧೆಗ |
ಳಂದದಿಂ ಬೋಧಿಸುತೆಭಕ್ತರ |
ಬೃಂದವನು ಸೇವಿಸುವಕಾರ್ಯದೆ ಧನ್ಯನಾಗುವುದು ||೧೪||

---

ವಾಡಿಕೆಯಾಗಿ ನಮ್ಮ ಜಾತಿಯೊಳಗೆ ಪ್ರತಿಯೊಬ್ಬನೂ ಒಂದಕ್ಕಿಂತ ಹೆಚ್ಚು ಮದುವೆ ಮಾಡಿಕೊಳ್ಳುತ್ತಿದ್ದು, ನೀನು ಒಂಟಿಗನಾಗಿರುವುದನ್ನು ಕಂಡು ಜನರು ಆಶ್ಚರ್ಯಗೊಂಡು ನನ್ನನ್ನು ಕೇಳುವುದು ಅನ್ಯಾಯವೇ? ಪ್ರತಿಯೊಂದು ಮನೆಯಲ್ಲಿಯೂ ಬೆಳೆಯುವ ಹೆಣ್ಣುಮಕ್ಕಳು ಇರುವುದರಿಂದ ಅವರಿಗೆ ಯೋಗ್ಯರಾದ ಗಂಡಂದಿರನ್ನು ಹುಡುಕುವುದು ಹಿರಿಯರ ಕರ್ತವ್ಯವಲ್ಲವೇ ? ಇನ್ನೊಂದೆರಡು ವರ್ಷಗಳಾದ ಬಳಿಕ ನೀನಾದರೂ ಈ ತರದ ಶೋಧಮಾಡಲಾರಂಭಿಸುವಿ,

ಅಯ್ಯಾಸ—ಹೌದು ; ನನ್ನ ಪುಟ್ಟನೂರಳು ದೊಡ್ಡವಳಾದಳು. ಆಕೆಯ ಬುದ್ಧಿ ಬಹಳ ಚುರುಕು. ಆಕೆಯ ಗ್ರಹಣಶಕ್ತಿಯೂ ಮೇಲ್ಬುದ್ಧಿಯೂ ವಿಚಾರಸರಣಿಯೂ ಅಸಮಾನ್ಯವಾಗಿರುತ್ತವೆ. ಚಿತ್ರಲೇಖನದಲ್ಲಿಯೂ ಕಸೂತಿಯಲ್ಲಿಯೂ ಅಡಿಗೆಯಲ್ಲಿಯೂ ಕವಿತ್ವರಚನೆಯಲ್ಲಿಯೂ ವಿಷಯ ಪ್ರತಿಪಾದನದಲ್ಲಿಯೂ ಆಕೆಯ ಬುದ್ಧಿಯು ಅದ್ವಿತೀಯವಾಗಿರುತ್ತದೆ. ಪಾಪ! ಆಕೆಯ ತಾಯಿಯು ಜೀವಂತಿದ್ದರೆ ಆಕೆಯನ್ನು ನೋಡಿ ಎಷ್ಟು ಹಿಗ್ಗುತ್ತಿದ್ದಳೋ ದೇವರೇ ಬಲ್ಲ! ಆಕೆ ಈಗ ಜೀವಂತಿದ್ದರೆ ನನ್ನ ಸಂಸಾರ ಸುಖಕ್ಕೆ ಪಾರವೇ ಇದ್ದಿಲ್ಲ!

ಗೆಳೆಯ—ನಿನ್ನನ್ನು ನೋಡಿ ನಾನು ಕನಿಕರಪಡುತ್ತೇನೆ. ದುರದೃಷ್ಟದಿಂದ ನಿನ್ನ ಹೆಂಡತಿಯು ಹರೆಯದಲ್ಲಿ ಮಡಿದಳು. ಸಾವು ಬದುಕು ದೈವಾಧೀನವಾದವು. ಅವುಗಳ ವಿಷಯದಲ್ಲಿ ನೀನು ಏನೂ ಮಾಡಲಾರೆ. ನಿನ್ನ ಕಯ್ಯಲ್ಲೇನೂ ಇಲ್ಲ. ದೇವರ ಮುನಿಸನ್ನು ತಡೆಯಲಿಕ್ಕೆ ಮನುಷ್ಯನಲ್ಲಿ ಸಾಮರ್ಥ್ಯವಿಲ್ಲ. ಆದರೆ ಮನುಷ್ಯನು ಮಾಡತಕ್ಕದನ್ನು ನೀನು ಮಾಡದಿರುವುದಕ್ಕೆ ನಾನು ಬಹುಪರಿಯಿಂದ ಹಂಬಲಿಸುತ್ತೇನೆ.

ಅ—ಅದೇನು ? ನಾನು ಮಾಡತಕ್ಕದನ್ನು ಏನು ಮಾಡಲಿಲ್ಲ ? ನನ್ನ ಮುದ್ದು ಮಗಳ ಜೋಕೆತನದ ಬಗ್ಗೆ ನಾನು ಪಟ್ಟ ಕಷ್ಟವನ್ನು ಬಣ್ಣಿಸಲಳವಲ್ಲ. ಆ ಕೂಸನ್ನು ಜೋಕೆಮಾಡಲಿಕ್ಕೆ ತನಗೆ ಕೊಡಬೇಕೆಂದು ಕಂದಹಾರದ ವ್ಯಾಪಾರಿಯ ಹೆಂಡತಿಯು ಅಂಗಲಾಚಿ ಬೇಡಿಕೊಂಡಳು. ಅದಕ್ಕೆ ನಾನು ಒಪ್ಪದೆ ನನ್ನ ಹೆಂಡತಿಗೆ ಮಾತು ಕೊಟ್ಟಂತೆ ನಾನೇ ಆ ಹೊರೆಯನ್ನು ಹೊತ್ತೆನು. ಕಳೆದ ೧೦ ವರುಷ ಅಸ್ಮರಿಬೆಯು

ಪರವೆಯಿಲ್ಲದೆ ಹಗಲಿರುಳು ನನ್ನ ಮುದ್ದು ಮಗಳನ್ನು ಜೋಪಾನಮಾಡಿ ದೆನು. ಆಕೆಯು ನನ್ನ ಪ್ರಾಣಕ್ಕಿಂತ ಹೆಚ್ಚೆಂದು ಈಗಲಾದರೂ ತಿಳಿಯು ತ್ತೇನೆ. ವಸ್ತುಸ್ಥಿತಿಯು ಹೀಗಿದ್ದು ನಾನು ಕರ್ತವ್ಯಪರಾಙ್ಮುಖನೆಂದು ಹೇಳಿದ್ದನ್ನು ಕೇಳಿ ನಾನು ಬಹಳ ನೊಂದುಕೊಂಡೆನು.

ಗೆಳೆಯ—ಅಯ್ಯಾಸ ಜೀವ ! ನೀನು ನಿನ್ನ ಮಗಳಿಗೆ ಮಾಡಲಿಲ್ಲೆಂ ದೆನೇ ? ಎಂದೂ ಇಲ್ಲ. ನೀನು ಮಗಳಿಗೆ ಪರಿಪರಿಯಿಂದ ಮಾಡುವು ದನ್ನು ಕಣ್ಣಾರೆ ಕಂಡು ಹಾಗೆಂದಾದರೂ ಅನ್ನಬಹುದೇ ? ಸರ್ವಥಾ ಇಲ್ಲ. ನೀನು ನಿನ್ನ ಸಂಬಂಧದಿಂದಲೆ ಕರ್ತವ್ಯಮಾಡಲಿಲ್ಲೆಂಬುದೇ ನನ್ನ ಅಭಿಪ್ರಾಯವು. ನಿನ್ನ ಕರ್ತವ್ಯವನ್ನು ನೀನು ಮಾಡಿದ್ದರೆ ನಿನ್ನ ಸಂಸಾ ರವು ಇದಕ್ಕೂ ಹೆಚ್ಚು ಸುಖಕರವಾಗುತ್ತಿತ್ತೆಂದು ನನ್ನ ನಂಬಿಕೆ.

ಅ—ನಾನಾವ ಕರ್ತವ್ಯ ಮಾಡಿಲ್ಲ ? ಅದನ್ನಾದರೂ ಹೇಳು ?

ಗೆಳೆ—ನೀನು ೫-೬ ವರ್ಷಗಳ ಹಿಂದೆ ೨ನೆಯ ಮದುವೆ ಮಾಡಿ ಕೊಳ್ಳಬೇಕಾಗಿತ್ತೆಂದು ನನ್ನ ಅಭಿಪ್ರಾಯವು. ಹಾಗೆ ಮಾಡಿದ್ದರೆ ನೀನು ನಿನ್ನ ಕರ್ತವ್ಯ ಮಾಡಿದಂತಾಗುತ್ತಿತ್ತು. ಹಾಗೆ ಮಾಡದಿದ್ದುದೇ ನಿನ್ನ ಕರ್ತವ್ಯಪರಾಙ್ಮುಖತೆ.

ಅ—ನನ್ನ ಹೆಂಡತಿಯು ಸಾಯುವಾಗ ಈ ಕೂಸನ್ನು ಜೋಕೆ ಮಾಡಬೇಕೆಂದು ಮಾತು ತೆಗೆದುಕೊಂಡಿದ್ದಳು. ನಾನು ೨ನೆಯ ಮದುವೆ ಯನ್ನು ನೀನು ಹೇಳಿದಂತೆ ಮಾಡಿಕೊಂಡಿದ್ದರೆ ಆ ಹೊಸ ಸಂಸಾರದಲ್ಲಿ ತೊಡಗಿ, ನನ್ನ ಮುದ್ದುಮಗಳ ಬಗ್ಗೆ ನನ್ನ ಲಕ್ಷ್ಯವು ಕಡಮೆಯಾಗ ಬಹುದಾಗಿತ್ತು. ಹಾಗಾಗಿದ್ದರೆ ನಾನು ವಚನಭ್ರಷ್ಟನಾಗುತ್ತಿದ್ದೆನು !

ಗೆಳೆಯ—ನೀನು ಮದುವೆ ಮಾಡಿಕೊಳ್ಳದ್ದರಿಂದ ಕೆಲಮಟ್ಟಿಗೆ ವಚನಭ್ರಷ್ಟನಾದಿ ಎಂದು ನನಗೆ ತೋರುತ್ತದೆ.

ಅ—ಅದು ಹೇಗೆ ? ನಿನ್ನಭಿಪ್ರಾಯವು ತೀರ ವಿಪರೀತವಾಗಿ ತೋರುತ್ತದೆ !

ಗೆಳೆಯ—ಅಯ್ಯಾಸ [illegible] [illegible] ಬೇಡ, [illegible] [illegible] [illegible]. ನಾನು ಹೇಳುವುದನ್ನು ಸಮಾಧಾನ [illegible]

ಕೇಳು. ನನ್ನ ಮಾತಿನಲ್ಲಿ ಏನಾದರೂ ತಪ್ಪಿದ್ದರೆ ಹೇಳು. ಹೆಣ್ಣು ಹುಡುಗಿಯರ ಜೋಪಾನವನ್ನು ಹೆಂಗಸರು ಮಾಡಿದಷ್ಟು ಗಂಡಸರು ಮಾಡಲಾರರು ಅವರಿಗೆ ಉಣಿಸುವುದು, ತಿನಿಸುವುದು, ಉಡಿಸುವುದು, ತೊಡಿಸುವುದು, ಅಲಂಕರಿಸುವುದು, ಕಲಿಸುವುದು, ರೀತಿ ನಡತೆ ತಿಳಿಸುವುದು, ಎರೆಯುವುದು ಎಣ್ಣೆ ಹೂಸುವುದು, ಬೇನೆ ಬೇಸರಿಕೆಯಲ್ಲಿ ಆರೈಕೆ ಮಾಡುವುದು ಇವುಗಳನ್ನೆಲ್ಲ ಹೆಂಗಸರು ಎಷ್ಟು ಚೆನ್ನಾಗಿ ಮಾಡಬಲ್ಲರು. ಆದ್ದರಿಂದ ನೀನು ದೊಡ್ಡಮನೆತನದ ಒಳ್ಳೆಯ ಹುಡುಗಿಯನ್ನು ಆರಿಸಿ ಮದುವೆಮಾಡಿಕೊಂಡಿದ್ದರೆ, ನೀನು ನಿನ್ನ ಸತ್ತ ಹೆಂಡತಿಯ ಮಾತನ್ನು ಸರಿಯಾಗಿ ನಡಿಸಿದಂತೆ ಆಗುತ್ತಿತ್ತು. ನಾನು ಹೇಳುವುದು ಸಟೆಯೋ ದಿಟವೋ ನೀನೇ ಹೇಳು.

ಈ ಮಾತನ್ನು ಕೇಳಿ ಅಯ್ಯಾಸನು ಬೆರಗಾದನು. ಈ ತರದ ಎಣಿಕೆಗಳು ಅವನ ಕನಸುಮನಸಿನಲ್ಲಿ ಬಂದಿದ್ದಿಲ್ಲ. ಅವನು ಬೆಚ್ಚಿಬಿದ್ದು ಸುಮ್ಮನೆ ಕುಳಿತನು. ಅವನ ಬಾಯಿಂದ ಮಾತೇ ಹೊರಡಲಿಲ್ಲ. ಕೆಲಹೊತ್ತಿನ ಮೇಲೆ ಅವನು ಎಚ್ಚರಾಗಿ ನಾನು ನನ್ನ ಮುದ್ದುಮಗಳಿಗೆ ಮಾಡಬೇಕಾದ್ದನ್ನೆಲ್ಲ ಮಾಡಿರುತ್ತೇನೆ. ಹೆಂಗಸರು ಮಾಡತಕ್ಕ ಕೆಲಸವನ್ನೆಲ್ಲ ಹೆಣ್ಣಾಳಿನಿಂದ ಮಾಡಿಸಿರುತ್ತೇನೆ. ನನ್ನ ಮಗಳನ್ನು ಬೆಳೆಸಲಿಕ್ಕೆ ದುಡ್ಡನ್ನು ನೀರಿನಂತೆ ವೆಚ್ಚಮಾಡಿರುತ್ತೇನೆ" ಎಂದುಸುರಿದನು.

ಗೆ—ಗೆಳೆಯನೇ ಹಂಬಲಿಸಬೇಡ. ನೀನು ಕರ್ತವ್ಯಮಾಡಲಿಲ್ಲೆಂದು ನಾನೆಂದೂ ನೆನಿಸಲಿಲ್ಲ. ಅದನ್ನು ಸರಿಯಾದ ಕ್ರಮದಲ್ಲಿ ಮಾಡಲಿಲ್ಲೆಂಬುದೇ ನನ್ನ ಆಕ್ಷೇಪವು. ಅದು ನಿನ್ನ ಅಂತಃಕರಣದ ತಪ್ಪಲ್ಲ; ನಿನ್ನ ತಿಳಿವಳಿಕೆಯ ತಪ್ಪು ಮಾತ್ರ ಆಗಿರುತ್ತದೆ. ಅಜ್ಞಾತದೋಷವು ಅಪರಾಧವಲ್ಲೆಂದು ಶಾಸ್ತ್ರಗಳು ಸಾರುತ್ತವೆ. ತಿಳಿದು ಮಾಡಿದ ತಪ್ಪುಗಳಿಗೆ ಮಾತ್ರ ದೋಷವಿರುತ್ತದೆ. ಈಗ ನಾನು ನಿನಗೆ ತಿಳಿಹೇಳಿರುತ್ತೇನೆ. ಇನ್ನು ತಿಳಿದೂ ತಿಳಿದೂ ನೀನು ನಿನ್ನ ಕರ್ತವ್ಯವನ್ನು ಮಾಡದಿದ್ದರೆ ನಿನಗೆ ಪಾಪ ತಟ್ಟುವುದು. ಆದ್ದರಿಂದ ನಾನು ಹೇಳಿದಂತೆ ಬೇಗನೆ ಮದುವೆ ಮಾಡಿಕೊ. ಅಂದರೆ ನಿನ್ನ ಸಂಸಾರವು ಹೆಚ್ಚು ಸುಖಕರವಾಗುವುದಲ್ಲದೆ ನಿನ್ನ ಕರ್ತವ್ಯವು ಸರಿಯಾಗಿ ನಡೆಯುವುದು.

ಅಯ್ಯಾಸ—ನನಗೆ ನನ್ನ ಸುಖಕ್ಕಿಂತ ನನ್ನ ಕರ್ತವ್ಯವೇ ಮೇಲಾದುದು. ಆ ಕರ್ತವ್ಯವನ್ನು ದಕ್ಷತೆಯಿಂದ ಮಾಡಬೇಕೆಂತಲೇ ಮದುವೆಮಾಡಿಕೊಳ್ಳುವುದನ್ನು ಬಿಟ್ಟಿರುತ್ತೇನೆ. ನನ್ನ ೨ನೆಯ ಹೆಂಡತಿಯು ಶರೀರಸಂಬಂಧದಿಂದ ತಾಯಿಯಾದರೂ ನೆಕ್ಕರದಿಂದ ತಾಯಿಯಾಗಲಾರಳು. ಮಲತಾಯಿಯು ಮಲೆಮಕ್ಕಳ ವೈರಿಯೆಂದು ಜನರೊಳಗೆ ಪ್ರಸಿದ್ಧಿಯುಂಟು. ಆಕೆಯಲ್ಲಿ ಆ ಮಕ್ಕಳ ಬಗ್ಗೆ ಹೊಟ್ಟೆಕಿಚ್ಚು ಹುಟ್ಟುವ ಸಂಭವವಿದ್ದಷ್ಟು ಅಂತಃಕರಣ ಹುಟ್ಟುವ ಸಂಭವವಿಲ್ಲ. ನನ್ನ ೨ನೆಯ ಹೆಂಡತಿಯು ನನ್ನ ವುದ್ದು ಮಗಳನ್ನು ಗೋಳಾಡಿಸತೊಡಗಿದರೆ ನನ್ನ ನೋವಿಗೆ ತಡೆಯೇ ಇಲ್ಲ. ನಾನು ಆಕೆಯ ಬಲೆಗೆ ಸಿಕ್ಕರಂತೂ ತೀರ ಕರ್ತವ್ಯವಿಮುಖನಾಗುವೆನು. ಆದ್ದರಿಂದ ನನ್ನ ಮಗಳು ಮದುವೆ ಮಾಡಿಕೊಂಡು ಗಂಡನ ಮನೆಗೆ ಹೋಗುವವರೆಗೆ ನಾನು ೨ನೆಯವಳನ್ನು ಮದುವೆಯಾಗಲಾರೆನು.

ಗೆ—ಅಯ್ಯಾಸಬೇಗ, ನೀನು ಹೇಳುವ ಮಾತಿನಲ್ಲಿ ತುಸುತಥ್ಯಾಂಶವುಂಟು. ಆದರೆ ಶಾಂತವೃತ್ತಿಯಿಂದ ವಿಚಾರಮಾಡು. ನಿನ್ನ ಸ್ಥಿತಿಗತಿಯಲ್ಲಿದ್ದ ಮನೆತನಗಳೊಳಗೆ ಎಷ್ಟೋ ಮಂದಿ ಮಲತಾಯಿಗಳೂ ಮಲಮಕ್ಕಳೂ ಇರುತ್ತಾರೆ ಅವರೊಳಗೆ ಬಡಿದಾಡುವವರು ಹೆಚ್ಚೋ ಪ್ರೀತಿಯಿಂದಿರುವವರು ಹೆಚ್ಚೋ ?

ಅ—ನನ್ನ ಗೊತ್ತಿನವರೊಳಗೆ ಪ್ರೀತಿಯಿಂದಿರುವವರೇ ಹೆಚ್ಚಿರುತ್ತಾರೆ; ಆದರೆ ನನ್ನ ಹೊಸಹೆಂಡತಿಯು ಹಾಗಿರುವುಳೆಂಬ ಬಗ್ಗೆ ಪ್ರಮಾಣವೇನು ? ಆಕೆಯು ಕೆಟ್ಟವಳಾಗಿ ನನ್ನ ಮಗಳನ್ನು ದ್ವೇಷಿಸಬಹುದು.

ಗೆಳೆಯ—ಅಯ್ಯಾಸಬೇಗ, ಈ ಪ್ರಪಂಚದಲ್ಲಿ ನಿಶ್ಚಯಾತ್ಮಕವಾದ್ದು ಯಾವುದೂ ಇಲ್ಲ. ನಮ್ಮ ಎಲ್ಲ ವ್ಯವಹಾರಗಳೂ ಅತಿಸಂಭವ (probability) ದ ವಿಚಾರವನ್ನು ಅವಲಂಬಿಸಿ ಅನುಭವದಿಂದ ಇದು ಬಹುಶಃ ಹೀಗಾಗಬಹುದು ಅದು ಬಹುಶಃ ಹಾಗಾಗಬಹುದೆಂಬ ಎಣಿಕೆಯಿಂದಲೇ ನಮ್ಮ ಎಲ್ಲ ವ್ಯವಹಾರವೂ ನಡೆಯುತ್ತದೆ. ಸಾಧಾರಣವಾಗಿ ತಾಯಿಯ ಗುಣಗಳು ಮಗಳಲ್ಲಿರುತ್ತವೆಂದು ನಾವು ನಂಬಿ ನಡೆ

(ಸಶೇಷ)

ಓಂ

# ಸಾರಸ್ವತಿ

ಸಂಪುಟ ೫ | ಕ್ರೋಧನ ವರ್ಷ - ಭಾದ್ರಪದ ಮಾಸ | ಸಂಚಿಕೆ ೫

## ಭೂದೇವೀಸ್ತವ



(ಲೇಖಕ:—ಶ್ರೀಯುತ ಪಿ ಎಲ್. ಫ್ರಾನ್ಸಿಸ್ ಚತ್ತಯ್ಯ, ಮಂಗಳೂರು.)

**ವಂದೇ ಮಾತರಂ ಎಂಬಂತೆ.**

ರಾಗ—ದೇಶ, ತಾಳ—ತ್ರಿವಟ.

ದೇವಿ ಮಂಗಲಂ ॥
ಜಗತಿ । ಸುಗತಿ । ಭಗವತಿ ಭಾರತಿ ।
ಧಾತ್ರಿ । ಭಾಸ್ವತಿ ॥ ಮಂಗಲಂ ॥ ದೇವಿ ಮಂಗಲಂ ॥
ಸಸ್ಯಪರ್ಣ । ಸಮುದಯರಂಜಿಸಿ ।
ಪುಷ್ಪಸಲಿಲ । ಫಲತರುಭೂಷಿಣಿ ।
ಸುಹಾಸಿನಿ । ಧವಳಶರೀರಿಣಿ ।
ಧರಣಿ । ಜನನಿ ॥ ಮಂಗಲಂ ॥ ದೇವಿ ಮಂಗಲಂ ॥

ಬ್ರಹ್ಮಪುತ್ರಸಿಂಧು ಮಂದಾಕಿನೀಸುತೀರ್ಥೇ ।
ಕೈಲಾಸವಿಂಧ್ಯಾಚಲೇಂದ್ರಾಭಿಸ್ತಬ್ಧಭೂತೇ ।
ಸಕಲಸುಖಾ । ಪ್ರದೇ ವರದೇ । ವಿವಿಧಫಲಪ್ರದೇ ।

ಪ್ರಸನ್ನದೇವತೇ । ಶಶಿರವಿರಾಜಿತೇ ॥ಮಂಗಲಂ॥ ದೇವಿ ಮಂಗಲಂ॥

ಜಯಶೀಲೇ । ನೃಪಲೋಲೇ ॥ ಜಯಜಲಧಿ ದುಕೂಲೇ ॥

ಸ್ವರ್ಗಾಪವರ್ಗದಾತೇ ।

ಸರ್ವಪ್ರಾಣಿವರ್ಗಾಧಾರೇ । ಅಹಿತಶತಧಾರೇ ।

ಚತುರ್ದಶಭುವನಾಧಿನಾಯಿಕೇ ನಾಯಿಕೇ ।

ಆದಿಯಜ್ಞವರಾಹ ಹೃದಯಮೋದಿನಿ । ಮೇದಿನಿ ।

ಕರುಣಿತಶರಣಶ್ರೇಣಿ । ಕ್ಷೋಣಿ ।

ರತ್ನಗರ್ಭಿಣಿ ॥ ಪ್ರಣಾಮಿತ್ವಾಂ ॥

ಸುಕಳಾಂ । ಸಕಳಾಂ । ಸುಬಲಾಂ ॥ಮಂಗಲಂ॥ ದೇವಿ ಮಂಗಲಂ॥

ಅಜೇಯೇ ವಿಜಯೇ । ವಾಙ್ಮಯಿ ಚಿನ್ಮಯಿ ।

ಅವನಿ । ಜನನಿ ॥ ಮಂಗಲಂ ॥ ದೇವಿ ಮಂಗಲಂ ॥

---

# ಹಿಂದೂ ಸ್ತ್ರೀರತ್ನಗಳು.

---

ನಮ್ಮೀ ಆರ್ಯಾವರ್ತದಲ್ಲಿದ್ದ ಪ್ರಾಚೀನ ಮಹಿಳೆಯರ ವಿಷಯವಾಗಿ ನಾವು ತಿಳಿದುಕೊಳ್ಳಬೇಕಾದ ಮುಖ್ಯ ವಿಷಯಗಳೆಷ್ಟೋ ಇವೆ. ಅವರು ಹೇಗೆ ಜೀವಿಸು ತಿದ್ದರು, ತಮ್ಮ ಕರ್ತವ್ಯಗಳನ್ನು ಹೇಗೆ ನಡೆಸುತ್ತಿದ್ದರು, ಅವರ ಮುಖ್ಯವಾದ ಧ್ಯೇಯಗಳಾವುವು, ಪುರುಷರು ಸ್ತ್ರೀಯರ ವಿಷಯದಲ್ಲಿ ಹೇಗೆ ನಡೆದುಕೊಳ್ಳು ತ್ತಿದ್ದರು, ಸ್ತ್ರೀಯರಿಂದ ಕುಟುಂಬ-ಗ್ರಾಮ-ದೇಶ-ನಗರ ಮೊದಲಾದವುಗಳು ಹೇಗೆ ಪ್ರಯೋಜನ ಹೊಂದಿ ಅಭಿವೃದ್ಧಿಯಾಗುತಿದ್ದವು, ಇತ್ಯಾದಿ ವಿಷಯಗ ಳನ್ನೂ ಈಗ ನಾವಿರುವ ಸ್ಥಿತಿಯಲ್ಲಿದ್ದರೋ ಅಥವಾ ಇನ್ನೂ ಅಭಿವೃದ್ಧಿಸ್ಥಿತಿ ಯಲ್ಲಿಯೇ ಇದ್ದರೋ ಎನ್ನುವ ವಿಷಯವಾಗಿ ನಾವು ಸ್ವಲ್ಪ ಯೋಚಿಸ ಬೇಕಾಗಿರುವುದು ನಾವು ಯಾವ ಅಲ್ಪ ವಿಷಯಗಳನ್ನೂ ಅಲಕ್ಷ್ಯವಾಗಿ ಭಾವಿಸಬಾರದು. ನಾವು ಕಲಿಯತಕ್ಕ ವಿಷಯಗಳೆಷ್ಟೋ ಇವೆ. ಪ್ರಪಂ ಚದ ಎಲ್ಲಾ ಭಾಗಗಳಲ್ಲಿಯೂ "ವಿದ್ಯಾವಂತರು, ಅವಿದ್ಯಾವಂತರು" ಎಂದೆರಡು

ಪಂಗಡದವರಿರುವರು. ವಿದ್ಯಾವಂತರಿಗಿಂತ ಅವಿದ್ಯಾವಂತರೇ ಹೆಚ್ಚು ಸಂಖ್ಯೆಯುಳ್ಳವರಾಗಿರುವರು. ಅದರಲ್ಲೂ ನಮ್ಮ ಭರತಖಂಡದಲ್ಲಿ ಎರಡನೆಯ ವರ್ಗದವರೇ ಹೆಚ್ಚಾಗಿರುವರು. ವಿದ್ಯಾವಂತರ ಸಂಖ್ಯೆಯನ್ನು ತೆಗೆದುಕೊಂಡರೂ ಕೂಡ ಅವರಲ್ಲೂ ಸಂಪೂರ್ಣ ವಿದ್ಯಾವಂತರು ತೀರ ಕಡಮೆ. ಆ ಅಲ್ಪ ಸಂಖ್ಯೆಯಲ್ಲಿ ಸಂಪೂರ್ಣ ವಿದ್ಯಾವಂತರು ಮತ್ತೂ ಕಡಮೆ. ಎಷ್ಟೇ ಕಲಿತವರೂ ಕೂಡ ಇನ್ನೂ ಹೆಚ್ಚಾಗಿ ಕಲಿಯತಕ್ಕವರೂ ಎಷ್ಟೋ ಜನರಿರುವರು. ಆದುದರಿಂದಲೇ ನಮ್ಮ ಹಿರಿಯರ "ಕಲಿತಿರುವುದು ಕೈ ಹಿಡಿಯಷ್ಟು, ಇನ್ನೂ ಕಲಿಯಬೇಕಾದದ್ದು ಸಮುದ್ರದಷ್ಟು" ಎಂದು ಹೇಳಿರುವರು. ಕಲಾಭಿಮಾನಿಯಾದ ಭಾರತಿಯೇ ಇನ್ನೂ ಕಲಿಯುತ್ತಿರುವಳೆಂದರೆ ಕೇವಲ ಮಾನವರಾದ ನಮ್ಮ ಪಾಡೇನು. ಅನೇಕರು "ರಾಮಾಯಣ, ಮಹಾಭಾರತಾದಿ ಗ್ರಂಥಗಳನ್ನೋದುವುದರಿಂದೇನು ಪ್ರಯೋಜನ? ಈ ಹಳೇ ಕಂತೆ ಪುರಾಣಗಳನ್ನೋದುವುದರಿಂದ ಹೊತ್ತು ಹಾಳೇ ಹೊರತು ಪ್ರಯೋಜನವೇನೂ ಇಲ್ಲ" ಎಂತಲೂ, ಮತ್ತೆ ಕೆಲವರು "ನಮ್ಮ ಹಿರಿಯರಲ್ಲನೇಕರಿಗೆ ಮಾಡಲು ಕೆಲಸವೇನೂ ಇಲ್ಲದ್ದರಿಂದ ಹೊತ್ತು ಕಳೆಯುವುದಕ್ಕಾಗಿ ರಾಮಾಯಣಾದಿ ಗ್ರಂಥಗಳನ್ನು ಬರೆದೂ ಓದಿಯೂ ಕಾಲ ಕಳೆಯುತ್ತಿದ್ದರು. ಅವರ ಊಟಕ್ಕೇನೂ ಕಷ್ಟವಾಗಿರಲಿಲ್ಲ. ನಮಗೂ ಹಾಗೆಯೇ ಇದ್ದರೆ ಎಷ್ಟೋ ಮಾಡಬಹುದು. ಬೇಗಾದರೆ ಆ ಚಿಂತೆ-ಈ ಚಿಂತೆ ತೊಂಭತ್ತೆಂಟು ತಾಪತ್ರಯಗಳಿವೆಯಲ್ಲ," ಎನ್ನುವರು. ಹೀಗೆ ಇವರುಗಳು ಹೇಳುವುದು ನ್ಯಾಯವೋ ಅನ್ಯಾಯವೋ ಎನ್ನುವ ವಿಷಯವನ್ನಿಲ್ಲಿ ವಿವರಿಸುವುದು ಅನಾವಶ್ಯವಾದುದರಿಂದ ಅದನ್ನಿಷ್ಟಕ್ಕೆ ನಿಲ್ಲಿಸೋಣ.

ಈ ಭರತಖಂಡವು ಮತ್ಯಾವದೇಶವೂ ಪಡೆಯದ ದೇವದತ್ತವಾದುದೊಂದು ಮಹಿಮೆಯನ್ನು ಹೊಂದಿದೆ. ಕೆಲವು ದಿನಗಳ ಕೆಳಗೆ ಪಾಶ್ಚಾತ್ಯ ಶ್ರೇಷ್ಠನೊಬ್ಬನು "ಭಕ್ತಿಯ ಶ್ರೇಷ್ಠತ್ವವನ್ನೂ, ಮತ ವಿಷಯವನ್ನೂ, ಆತ್ಮತತ್ವ ವಿಚಾರಣೆಯನ್ನೂ ಪ್ರಪಂಚವು ಅರಿಯಬೇಕಾಗಿದ್ದರೆ ಕಲಿಯಬೇಕಾಗಿದ್ದರೆ ಹಿಂದೂಸ್ಥಾನವೇ ನಮಗೆ ಕಲಿಸಬೇಕು. ಈ ಸಹಾಯಕ್ಕೆ ಮತ್ಯಾವ ದೇಶವನ್ನೂ ಎದುರುನೋಡುವುದಕ್ಕಾಗುವುದಿಲ್ಲ" ಎಂದು ಹೇಳಿರುವನು. ಇದು ಎಷ್ಟರ ಮಟ್ಟಿಗೆ ನಿಶ್ಚಯವೆನ್ನುವುದನ್ನು ಇಲ್ಲಿ ವಿವರಿಸಬೇಕಾಗಿಲ್ಲ. ಆತನು ಹಾಗೆ ಹೇಳುವುದಕ್ಕೂ ಇತರ ಪಾಶ್ಚಾತ್ಯ ವಿಜ್ಞಾನಿಗಳು ಮೇಲ್ಕಂಡ ವಿಷಯವನ್ನೊಪ್ಪಿಕೊಳ್ಳುವುದಕ್ಕೂ ಕಾರಣವೇನೆಂಬುದನ್ನು ನಾವಿಲ್ಲಿ ಯೋಚಿಸಬೇಕಾಗಿದೆ. ಇದಕ್ಕೆ ಮುಖ್ಯಕಾರಣವು ನಮ್ಮ ದೇಶದ ನಾಶವಾಗದ ಆಪದ್ಧನವಾದ ಮೂರು ಗ್ರಂಥಗಳೇ. ಇಂತಹ ಸದ್ಗ್ರಂಥಗಳು ಮತ್ಯಾವ ದೇಶದಲ್ಲಿಯೂ ದೊರೆಯದು. ಎಷ್ಟೊಂದು ಹಣ ಖರ್ಚುಮಾಡಿದರೂ ಸಿಗಲಾರದು. ಅವು ಯಾವುವೆಂದರೆ? 1. ಶ್ರೀಮದ್ರಾಮಾಯಣ, ೨. ಶ್ರೀಮನ್ಮಹಾಭಾರತ, ೩. ಶ್ರೀಮದ್ಭಗವದ್ಗೀತೆ, ಇವು ಮೂರೂ [illegible]

ನಿನ್ನೆ ಬರೆಯಲ್ಪಟ್ಟವುಗಳಲ್ಲ. ಎಷ್ಟೋ ವರ್ಷಗಳ ಹಿಂದೆ ಮಹರ್ಷಿಗಳಿಂದ ಬರೆಯಲ್ಪಟ್ಟವುಗಳು. ರಾಮಾಯಣವು ವಾಲ್ಮೀಕಿ ಮುನಿಯಿಂದ ಬರೆಯಲ್ಪಟ್ಟದ್ದು. ಮತ್ತೆರಡು ಗ್ರಂಥಗಳೂ ಶ್ರೀ ಕೃಷ್ಣಪರಮಾತ್ಮನ ಕಾಲದಲ್ಲಿ ಬರೆಯಲ್ಪಟ್ಟವುಗಳು. ಶ್ರೀ ರಾಮಕೃಷ್ಣಾದ್ಯವತಾರಗಳುಂಟಾಗಿ ಎಷ್ಟೊಂದು ವರ್ಷಗಳಾದವು? ನಮಗೆ ಮೊದಲು ಈ ಭೂಲೋಕದಲ್ಲಿ ಜನ್ಮವೆತ್ತಿದ್ದ ಮಹಾಪುರುಷರೆಷ್ಟೋ ಜನ, ವಿದ್ಯಾವೈಖರಿಯಿಂದ ವಿರಾಜಿಸುತ್ತಿದ್ದವರೆಷ್ಟೋ ಜನ, ಆಶ್ಚರ್ಯಪಡತಕ್ಕಂಥಾ ಎಷ್ಟೋ ಮಹತ್ಕಾರ್ಯಗಳನ್ನು ಸ್ತ್ರೀಯರು ಮಾಡಿರುವರು. ಇಷ್ಟಾದರೂ ಇವರಲ್ಯಾರೂ ಮೇಲೆ ಹೇಳಿದ ಮೂರು ಗ್ರಂಥಗಳನ್ನು ನಾವು ಪೂರ್ತಿಯಾಗಿ ಕಲಿತೆವೆಂದು ಎದೆ ತಟ್ಟಿ ಹೇಳುವದಿಲ್ಲ. ಈಗಲೂ ವಿದ್ಯಾವಂತರಾದವರೆಷ್ಟೋ ಜನರಿರುವರು. ಶ್ರೀಮದ್ಭಗವದ್ಗೀತೆಗೆ ತ್ರಿಮತಾಚಾರ್ಯರೂ ಭಾಷ್ಯಸೂತ್ರಗಳನ್ನು ರಚಿಸಿರುವರು. ಆಗ್ರಂಥಗಳನ್ನು ನಾವೆಷ್ಟು ಸಲ ಓದಿದರೂ ಅವುಗಳ ಅಂತರಂಗವನ್ನರಿಯಲು ಶಕ್ತರಾಗೆವು. ಓದುತ್ತಾ ಓದುತ್ತಾ ಒಂದೊಂದು ಸಲವೂ ಹೊಸ ಹೊಸ ಅರ್ಥವು ತೋರುವುದು. ನಾವು ಕಲಿಯತಕ್ಕದ್ದೆಷ್ಟೋ ಇರುವುದು. ಗ್ರಂಥದಲ್ಲಿ ಎಂತಹ ಅತ್ಯುತ್ತಮ ವಿಷಯಗಳು ಅಡಕವಾಗಿರುವುದೆನ್ನುವುದನ್ನು ನಾವು ಮರೆಯುತ್ತೇವೆ. ಹಿಂದೂ ದೇಶದ ಅಭಿವೃದ್ಧಿಗೂ ನಾಗರೀಕತೆಗೂ ಮುಖ್ಯಾಧಾರವಾಗಿರತಕ್ಕವರು ಪುರುಷರೇ ಎಂದು ಹೇಳಲಾಗುವುದಿಲ್ಲ. ಎಷ್ಟೋ ಮಹತ್ಕಾರ್ಯಗಳನ್ನು ಪುರುಷರು ಮಾಡಿರುವರೆನ್ನುವುದನ್ನು ನಾವು ಒಪ್ಪಿಕೊಳ್ಳಬೇಕಾದರೂ ಸ್ತ್ರೀಯರೂ ಕೂಡ ಎಷ್ಟೋ ಸಾಹಸಕೃತ್ಯಗಳನ್ನಾಚರಿಸಿ ಕೀರ್ತಿಹೊಂದಿರುವರು. ಸ್ತ್ರೀಯರ ಆಶ್ಚರ್ಯ ಕಾರ್ಯಗಳೂ ತಮ್ಮ ಪಾತಿವ್ರತ್ಯ ರಕ್ಷಣೆಗಾಗಿ ಅವರು ತೋರ್ಪಡಿಸಿದ ಸಾಹಸವೂ, ಕರ್ತವ್ಯ ದಕ್ಷತೆಯೂ ಈ ಭರತಖಂಡಕ್ಕೆ " ಪುಣ್ಯಭೂಮಿ " ಯೆಂಬ ಅನ್ವರ್ಥನಾಮವನ್ನುಂಟು ಮಾಡಿದವು. ಸ್ತ್ರೀಯರ ಮಹಿಮೆಯನ್ನು ಕೊಂಡಾಡದ ಶಾಸ್ತ್ರವಾಗಲಿ ಗ್ರಂಥವಾಗಲಿ ಇಲ್ಲವೇ ಇಲ್ಲವೆಂದು ಹೇಳಬಹುದಾಗಿದೆ. ಹಿಂದೂ ರಮಣಿಯರು ಅತಿ ಪತಿವ್ರತೆಯರು, ಪಾತಿವ್ರತ್ಯವೇ ಅವರ ಮುಖ್ಯಾಭರಣ, ಪ್ರಾಣವು ಎಷ್ಟು ಮುಖ್ಯವಾದುದೆಂದೆಣಿಸುವೆವೋ ಅದಕ್ಕಿಂತಲೂ ಪಾತಿವ್ರತ್ಯವೇ ಹೆಚ್ಚಿನದೆಂದು ಭಾವಿಸತಕ್ಕವರು, ಪಾತಿವ್ರತ್ಯದ ಪವಿತ್ರ ಮಹಿಮೆಯನ್ನು ಜಗತ್ತಿಗೆ ವಿಶದಪಡಿಸಿದವರು ಭಾರತರಮಣಿಯರೇ. ಪಾತಿವ್ರತ್ಯಕ್ಕೆ ಭಂಗ ಬರುವುದೆಂಬುದು ತಿಳಿದಕೂಡಲೇ ತಮ್ಮ ಪ್ರಾಣವನ್ನೇ ತ್ಯಜಿಸುವರು, ಐಶ್ವರ್ಯ, ಆಭರಣ, ಅಲಂಕಾರಾದಿಗಳೆಲ್ಲವೂ ಪಾತಿವ್ರತ್ಯಕ್ಕೂ ಪತಿಗೂ ಅನಂತರವೇ. ಪತಿಯೇ ದೇವರು, ಪತಿಯೇ ಪರದೈವ, ಆದುದರಿಂದ ನಮ್ಮ ದೇಶದಲ್ಲಿ ಜೀವಿಸಿದ್ದ ಸ್ತ್ರೀಯರ ಔನ್ನತ್ಯವನ್ನೂ ಅವರ ಚರಿತ್ರೆಯಿಂದ ನಾವು ಕಲಿಯಬೇಕಾದ ನೀತಿಗಳನ್ನೂ ಈ " ಸರಸ್ವತಿ " ಯಲ್ಲಿ ಆಗಾಗ್ಗೆ ಪ್ರಕಟಿಸಲಾಗುವುದು. ಹಿಂದೂ ಮಹಿಳೆಯರ ಗುಣ ವಿಶೇಷಗಳನ್ನು ಇಂತಹುದೇ ಎಂದು ವಿವರಿಸುವುದಕ್ಕೆ

ಮಾಡುದರಿಂದ ಈ ಲೇಖನಕ್ಕೆ "ಹಿಂದೂ ಸ್ತ್ರೀ ರತ್ನಗಳು" ಎಂದೇ ಹೆಸರಿಡಲಾಯಿತು. ಮುಂದಿನ ಸಂಚಿಕೆಯಲ್ಲಿ "ಸೀತೆ" ಯ ಚರಿತ್ರೆಯನ್ನು ಸಂಕ್ಷೇಪವಾಗಿ ವಿವರಿಸಲಾಗುವುದು.

---

## ಭಕ್ತಸುಮಾಂಜಲಿ.

---

(ಹಿಂದಿನ ಸಂಚಿಕೆಯಿಂದ ಮುಂದರಿಸಿದ್ದು)

|| ಏ ||

ಏ! ಸುಳ್ಳೇ!! ಮಾನವರಲ್ಲಿ ಸೇರಿಕೊಂಡು ನೀನು ಆಧಿಪತ್ಯಮಾಡಿ ಅವರನ್ನು ನಿನ್ನ ಮೋಹಕರವಾದ ಮಾತುಗಳಿಗೆ ಬೆರಗಾಗುವಂತೆ ವಶಮಾಡಿಕೊಳ್ಳಲು ಅನುವಾಗಿ ಅವರನ್ನು ಸತ್ಯಮಾರ್ಗದಲ್ಲಿಡದೆ ಪಾಪರೀತಿಯಿಂದ ಪತಿತರಾಗುವಂತೆ ಮಾಡುವೆ? ನಿನ್ನ ಮಹಿಮೆ ಎಂತಹುದೋ? ಆಹಾ! ನಿನ್ನನ್ನು ಹೊಂದುವಾತನಿಗೆ ಯಾವ ಸುಖವೂ ಇಲ್ಲ! ತನ್ನನ್ನು ತಾನೇ ಹಾಳುಮಾಡಿಕೊಳ್ಳುವನಲ್ಲವೆ? ನೀನು ಸರ್ವರ ನಾಲಿಗೆಯಲ್ಲಿಯೂ, ಮನಸ್ಸಿನಲ್ಲಿಯೂ ಇದ್ದು ಗಂಭೀರವಾದ ನಿರ್ಮಲದಂತಿರುವ ಮನೋಸಾಗರವನ್ನು ಕಲಕಿ, ಕೆಸರಾಗುವಂತೆ ಮಾಡಿ ಹೀ! ಹೀ! ಎಂದು ನಗುತ್ತಾ ನಲಿಯುತ್ತಿರುವೆಯಲ್ಲವೆ? ನಿನ್ನಿಂದಲೇ ಅಲ್ಲವೆ ಅನೇಕರು ತಮ್ಮ ಅಪ್ರುತ್ವವನ್ನು 'ಖುಲಾಯಿಸಿ' ಕೊಂಡು ಈ ನಶ್ವರವಾದ ಪ್ರಪಂಚದಲ್ಲಿ ಬಾಳುತ್ತಿರುವರು?

ಅನೇಕಾನೇಕ ದುರ್ಗುಣಗಳು ಆವರಿಸಿದರೂ, ಉಪಾಯದಿಂದ ಗೆದ್ದು ನೀನೇ ಧ್ವಜಪತಾಕೆಯನ್ನು ಎತ್ತಿ ಜಯಭೇರಿಯನ್ನು ಹೊಡೆಯುವೆ? ನಿನ್ನ ಕಲ್ಯಾಣ ಗುಣ ಚರಿತ್ರೆಯನ್ನು ಹೇಳಲಾರಂಭಿಸಿದರೆ ವರ್ಷಗಳೇ ಕಳೆದು ಯುಗವೇ ಮುಗಿಯುವುದು. ನಿನ್ನಿಂದ ಎಷ್ಟು ಜನರು ಉದ್ಧಾರವಾಗಿಯೋ, ನೆಲಸಮನರಾಗಿಯೋ ಇರುವ ವಿಷಯವು ಭಕ್ತವತ್ಸಲನಾದ ಶ್ರೀ ಲಕ್ಷ್ಮೀವೆಂಕಟೇಶಸ್ವಾಮಿಗೇ ಗೊತ್ತು! ಎಲ್ಲರಲ್ಲಿಯೂ ನೀನಿದ್ದು, ಸಮಯದಲ್ಲಿ ಅವರ ಮಾನ ಪ್ರಾಣಾದಿಗಳನ್ನು ಕಾಪಾಡುವ ನಿನ್ನನ್ನು ಎಷ್ಟು ಹೊಗಳಿದರೂ ತೀರದು. ನಿನ್ನ ಚಾತುರ್ಯವು ಬಹು ಪ್ರಶಂಸನೀಯವಾದುದೇ ಸರಿ! (ಸಶೇಷ)

---

# ಆಶ್ವಾಸನೆ

---

ಇಂದೆನ್ನ ನಂದನರು ಬಡತನದೊಳಿಹರೆಂದು
ಕಂದಿ ಕುಂದುವ ತೆರವಿದೇತಕಮ್ಮ
ಅಂದು ಲಕ್ಷ್ಮೀಧವನ ದಯದ ನೀನಿರ್ಪಾಗ
ನಿಂದು ನಿನ್ನನು ಬೇಡದಿರ್ದನಾಡುಂಟೆ
ನಿಖಿಳಭಾಗ್ಯವನೀವ ನಿಧಿಯೆ ನೀನು

ಎನ್ನ ಕುವರಿಯರಿಂದು ಬಿಜ್ಜೆಯರಿತರಲ್ಲೆಂದು
ಖಿನ್ನತೆಯ ತಾಳುವೆ ಯೇತಕಮ್ಮ
ಮುನ್ನ ನೀಂ ಪಡೆದಿರ್ದ ಸೀತಾದಿ ಸತಿಯರ್ಗೆ
ಅನ್ಯದೇಶಾಂಗನೆಯರೆಣೆಯೆನಿಪರೆ
ಕುಲಕಾಮಿನೀ ಜನಕೆ ಜನನಿ ನೀನು

ಇವರಖಿಲ ಕಲೆಗಳಲಿ ಚತುರರಲ್ಲೆಂದೆಂಬ
ಬವಣೆಯಿಂ ಮರುಗುವೆ ಯೇತಕಮ್ಮ
ಅವನಿಯೊಳ್ ನಿನ್ನಿಂದ ಕಲಿಯದಿಹ ಕಲೆಗಳಿಂ
ನಿಬಿಡವಾಗಿಹ ನಾಡದಾವುದುಂಟು
ಸಕಲ ಕಲೆಗಳನಾಳ್ದ ನಾಥೆ ನೀನು

ಎನಗಿನ್ನು ಮುನ್ನಿನ ಘನತೆ ಬಾರದೆಂಬೀ
ಘನಶೋಕದಿಂ ತಪಿಪೆ ಯೇತಕಮ್ಮ
ವಿನಯದಲಿ ವಿದ್ಯದಲಿ ಸಾತ್ವಿಕದ ಶಕ್ತಿಯಲಿ
ನಿನಗೆ ಸಾಟಿಯೆನಿಪ್ಪ ನಾಡುಮುಂಟೆ
ವಿಷಯ ವೈರಾಗ್ಯದ ವಸತಿ ನೀನು

ಮುನ್ನ ನಾನೆಲ್ಲರಿಗೆ ಮಾರ್ಗದರ್ಶಕಳಾಗಿ
ಎನ್ನ ದಾರಿಯ ನರಿಯೆ ನೀಗಲೆಂಬ
ಬಿನ್ನಣದ ನುಡಿ ಸಾಕು ನೋಡಖಿಲ ಲೋಕಮುಂ
ನಿನ್ನ ಸಾತ್ವಿಕಪಥದ ಬೆಂನೊಳಿಹುದು
ಸಕಲ ತತ್ವಾರ್ಥಕಾದರ್ಶೆ ನೀನು

"ಭಾರತೀ ಸುತ"

# ಸ್ತ್ರೀಯರ ರೂಪ.

## ಸೊಬಗಿನ ಗೆಳೆಯನಿಂದ

ಯಾಕೋ ಕಾಲವು ಕೆಟ್ಟುಹೋಯಿತು. ಮೊನ್ನೆ ನಮ್ಮ ಹುಡುಗನು ಒಂದು ಪುಸ್ತಕವನ್ನು ಕೈಲಿಟ್ಟುಕೊಂಡು ಓದುತ್ತಿದ್ದನು—ಏನೆಂದು ನೋಡಲಾಗಿ

ಎಲ್ಲಿದೆ ಸ್ತ್ರೀಯರಿಗೆ ರೂಪವು ಎಂದಿತ್ತು.

ನಾರಿಯರ ರೂಪವು ಪುರುಷರ ಕಲ್ಪನೆಯಲ್ಲಿ, ಕಾಮುಕರ ಕಣ್ಣಿನಲ್ಲಿ, ಪ್ರಿಯಜನರ ಹೃದಯದಲ್ಲಿ, ಹಾಗೂ ಕವಿಗಳ ಕಾವ್ಯದಲ್ಲಿ. ಇವುಗಳನ್ನು ಬಿಟ್ಟು ಅದು ಮತ್ತೆಲ್ಲಿ ಹೋದೀತು. ನಾಲ್ಕಾರು ಪುಟಗಳ ಆ ಸಣ್ಣ ಪುಸ್ತಕದಲ್ಲಿ ಅದಕ್ಕೆ ಖಂಡಿತ ಸ್ಥಳವಿರಲಾರದು. ಆದರೂ ಕುತೂಹಲದಿಂದ ಅದನ್ನು ತೆಗೆದುಕೊಂಡು ಓದಿದೆನು.

ಸ್ತ್ರೀಯರ ರೂಪವೇನು ಒಂದು ಸಾಮಾನ್ಯ ಯಃಕಿಂಚಿತ್ ವಸ್ತುವೇ! ಅದರ ಸಲವಾಗಿ ಎಷ್ಟೊಂದು ರಾಜಾಧಿರಾಜರ ರಾಜ್ಯಗಳು ಹಾಳಾಗಿ ಹೋದವು? ಎಷ್ಟೊಂದು ಹಣಾಹಣಿ, ಮಾರಾಮಾರಿ, ಕೇಶಾಕೇಶಿಗಳಾಗಿ ಹೋದವು. ಲಂಕೇಶ್ವರನು ಹಾಳಾದನು; ಚಿತ್ತೂರು ನಾಶವಾಯಿತು. ಕೃಷ್ಣಾರ್ಜುನರಂತ ಎಷ್ಟೋ ಜನ ವೀರಾಗ್ರೇಸರರು ಕಾಡುಪಾಲಾದರು, ವ್ಯಾಸ ವಾಲ್ಮೀಕಿಗಳಂತ ಮಹರ್ಷಿಗಳೂ, ಹೋಮರ್ (Homer) ವರ್ಜಿಲ್ (Virgil) ರಂತ ಕವಿಗಳೂ ಎಷ್ಟೋ ಕಾವ್ಯಗಳನ್ನು ಬರೆದರು. ಒಟ್ಟಿಗೆ ನಾರಿಯರ ಕೋರೆನೋಟದ ಸಲವಾಗಿ ಭಾರತವರ್ಷದ ಇತಿಹಾಸದಲ್ಲಿ ಎಷ್ಟೊಂದು ಅನಾಹುತಗಳು ನಡೆಯಿತೆಂಬ ವಿಷಯದಲ್ಲಿ, ಕೇವಲ ನಮ್ಮ ಪುರಾಣಕಾರರು ಮಾತ್ರವಲ್ಲ, ಅಲಗ್ಜಾಂಡರನ ಬೆನ್ನು ಹತ್ತಿ ಬಂದಿದ್ದ ಗ್ರೀಕ್ ಚರಿತ್ರಕಾರರು ಮೊದಲುಗೊಂಡು, ಪಕೃತ ಪ್ರಭುಗಳಾದ ಕೆಂಪುಮುಖದ ದೊರೆ ದೊರೆಸಾನಿಯರ ಸೆರಗಿಗೆ ಗಂಟುಬಿದ್ದ (Rudyard Kippling) ರಡ್ಯಾರ್ಡ ಕಿಪ್ಲಿಂಗ್‌ರಂತ ಬಚ್ಚ ಆಂಗ್ಲೇಯಕವಿಗಳವರಿಗೂ ಸಕಲರೂ ಸೌಖ್ಯವನ್ನು ಕೊಟ್ಟಿರುವರು. "ರೂಪವತೀ ಭಾರ್ಯಾ ಶತ್ರು" ಎಂಬ ಅವ್ಯಾಕ್ಷೋಪ ಮಂತ್ರದಲ್ಲಿ, ಸಂಸಾರದ ಸಮಸ್ತ ರಹಸ್ಯವನ್ನೂ ಕಂಡು ಕೃತಾರ್ಥರಾದ ಸ್ಮೃತಿಕಾರರ ಅಸಂಸ್ಕೃತ ಹೃದಯವೂ (Woman) ಶಬ್ದಕ್ಕೆ (Woe-man) ಎಂದು ಪದ ವಿಭಾಗಮಾಡಿ (Woe to man) "ಮನುಷ್ಯನ ಕೊರಳಿಗೆ ಗಂಟುಬಿದ್ದ ಗುದೆ" ಎಂದು ಅರ್ಥಮಾಡಿದ ಆಂಗ್ಲೇಯ

ಜಾನಿಯು (Jhonny) ಸಂಸ್ಕೃತವಾದ ಮೆದುಳೂ ಒಂದೇ ವಿಧವಾದ ಮಣ್ಣಿ ನಿಂದ ಮಾಡಲ್ಪಟ್ಟಿರಬೇಕೆಂದು ತೋರುತ್ತೆ. ಇಷ್ಟೊಂದು ದೊಡ್ಡ ದೊಡ್ಡವರ ಸಹವಾಸವು ದೊರೆತಮೇಲೆ ನಮ್ಮ ಗ್ರಂಥಕಾರನಿಗೇನು, ಮೊದಲೇ ಅಂದರೆ ಅನೇ ಕಾನೇಕ ಶತಮಾನಗಳ ಹಿಂದೆಯೇ ನಿರ್ದಿಷ್ಟವಾದ ಗುರಿಯನ್ನು ಕಣ್ಣಿದುರಿಗಿಟ್ಟು ಕೊಂಡು, ನಮ್ಮ ಅಜ್ಜಂದಿರ ಕಾಲದ ಹಳೆಯವಾದಗಳನ್ನು ತಂಡೋಪ ತಂಡ ವಾಗಿ ಉದಹರಿಸುತ್ತಾ ಕೊನೆಗೆ, ಸ್ತ್ರೀಯರ ರೂಪವೇ ಪುರುಷರ ಸರ್ವನಾಶಕ್ಕೆ ಕಾರಣವೆಂದು ಸಿದ್ಧಾಂತಮಾಡಿ ಮಹಾಕಾಳದಂತ (ರಘುವಂಶ, ಮಯೂರನವಿಗ-) ದೊಡ್ಡದೊಂದು ಪ್ರಪಾತಕ್ಕೆ ತಾನೂ ಬಿದ್ದುದಲ್ಲದೆ ನಮ್ಮ ತಾಯಂದಿರನ್ನು ಕೆಡವು ದರಲ್ಲಿದ್ದನು ಓದಿ ನನ್ನ ಮನಸ್ಸು ಕರಗಿ ನೀರಾಯಿತು. ಅಸಹಾಯ ಸ್ತ್ರೀ ಜಾತಿಯೆಂದು ಇಷ್ಟೊಂದು ಅತ್ಯಾಚಾರವೆ! ಈ ರೀತಿ ಕಂಡ ಕಂಡವರನ್ನು ಕಡಿ ಯುವ ಶೌನಕೋಪದಿಷ್ಟವಾದ(ಶುನ, ಶುನಕ, ಶೌನಕ, ಎಂದು latest deriva-tion) ಕೆಟ್ಟ ಹುಚ್ಚು, ಒಮ್ಮೆ ಸ್ತ್ರೀಯರ ತಲೆಗೆ ಹತ್ತಿತೆಂದರೆ ; ಆಗೀ ಮೆದುಳಿಲ್ಲಿ ತಿರುಳಿಲ್ಲದ ಪುರುಷ ಜಾತಿಯ ಪಾಡೇನು ? ನಾಲ್ಕು ಗೋಡೆಗಳ ಮಧ್ಯೆ ಕಂಡೂ ಕಾಣದಂತೆ ಪರೋಕ್ಷದಲ್ಲಿ ನಡೆಯುತ್ತಿರುವ ಮುಖಕ್ಕೆ ಮಂಗಳಾರತಿ, ನೈವೇದ್ಯ ಮುಂತಾದ ಎಷ್ಟೋ ಸ್ವಾರಸ್ಯವಾದ ಸಾಂಪ್ರದಾಯಗಳು ನಿತ್ಯಗಟ್ಟಿಯ ಬೀದಿಯ ನೋಟಗಳಾಗಿ ಪರಿಣಮಿಸುವವು,

ನಾನು ಸ್ವಲ್ಪ ಅಸಮಾಧಾನಗೊಂಡವನಾಗಿ ಹುಡುಗನನ್ನು ಕುರಿತು, "ಇದನ್ನು ನಿನಗಾರೋ ಕೊಟ್ಟರು ? ಎಂದು ಕೇಳಿದೆನು.

ಅವನೇನು ರಾವಣನ ಕುಮಾರ ಇಂದ್ರಜಿತು. ಗಾಳಿಯು ಹೇಗೆ ಬೀಸುತ್ತ ದೆಂಬುದನ್ನು ತಿಳಿದುಕೊಂಡು, ನಿರಪರಾಧ ಸಜ್ಜನನಂತೆ ಸರಳ ಭಾವದಿಂದ "ಸ್ಕೂಲ್ ಲೈಬ್ರರಿಯಿಂದ ತಂದೆ" ಎಂದು ಹೇಳಿದನು.

ಈಗ ಸರಿಯಾಯಿತು ; ಕಳ್ಳತನಕ್ಕೆ ಪೋಲೀಸಿನವರು ಸಂಗಡ ಹೋದಂತೆ. ಇಂತ ಅಡನಾಡಿ ಪುಸ್ತಕಗಳನ್ನೆಲ್ಲಾ ಸರಳ ಹೃದಯದ ಹುಡುಗರಿಗೆ ಓದಕೊಡುವ ಸ್ಕೂಲ್ ಎಂತಾದ್ದೋ ದೇವರೇ ಬಲ್ಲ. ಅವರಿಗೆ ತಮ್ಮ ತಾಯಂದಿರನ್ನು ಪ್ರೀತಿಸಿ ಸನ್ಮಾನಿಸುವುದನ್ನು ಹೇಳಿಕೊಡುವ ಬದಲು, ಸ್ತ್ರೀಜಾತಿಯಲ್ಲಿ ಅಸಡ್ಡೆಯನ್ನು, ಅಮರ್ಯಾದೆಯನ್ನೂ ಹುಟ್ಟಿಸುವ ಇಂತಹ ಪುಸ್ತಕಗಳೆ! ಬಾಲ್ಯದಿಂದ ಇಂತ ರೂಪದ್ವೇಷದ ಹಾಗೋ ಕುರೂಪಸತ್ಕಾರದ ವಿಚಿತ್ರವಾತಾವರಣದಲ್ಲಿ ಬೆಳೆದ ಮಕ್ಕಳು ಮುಂದೇನಾಗುವರು. ಅವರ ಸಂಕುಚಿತಹೃದಯವು ಮನೆಯಲ್ಲಿ ಹೆಣ್ಣುಮಕ್ಕಳು ಅರಿತಿನ ಹಚ್ಚಿಕೊಳ್ಳುವುದನ್ನು ನಿಷೇಧಿಸಿ ; ಇದ್ದಲನ್ನು ಅರೆದು ಬಳೆದುಕೊಳ್ಳುವ ಹೊಸಪದ್ಧತಿಯನ್ನು ಪ್ರಚಾರಮಾಡಲು, ಒಂದು ಸಮಾಜಸಂಸ್ಕಾರಕಸಂಘವನ್ನೇ ಸ್ಥಾಪಿಸುವ ಪ್ರಯತ್ನಮಾಡಬಹುದೋ ? ಹೂ ಗಂಧಗಳನ್ನು ಹಚಿಕೊಳ್ಳುವ

ಬದಲು ಧಾರ್ಮಿಕ ಹಾಗೂ ಸ್ವಾಸ್ಥ್ಯರಕ್ಷಕ (Sanitary) ದೃಷ್ಟಿಯಿಂದ ಹಸು ವಿನ ಸಗಣಿ, ಗಂಜಳವು ಹೆಚ್ಚು ಉತ್ತಮವೆಂದು ನಿರ್ಧರಿಸುವರೇನೋ? ಪ್ರಕೃತ ಪಾಶ್ಚಾತ್ಯ ಸಮಾಜದಲ್ಲಿ (Student population) ಬಳಕೆಯಲ್ಲಿರುವ "ಜಾಡರ ಹುಳ, ಕೋಳಿಕಾಲು" ಇತ್ಯಾದಿ ಭಾವ ಪೂರ್ಣ ಸಂಬೋಧನೆಗಳು, ಅಭಿಮಾನಾಸ್ಪದವಾದ ಉಪನಾಮಗಳಾಗಿ ಪರಿಣಮಿಸುವವೋ? ಎಂಬಿನೇ ಮೊದಲಾದ ಭವಿಷ್ಯದ ಸಂಭವನೀಯ ದುರ್ಘಟನೆಗಳನ್ನು ಚಿಂತಿಸುತ್ತಾ ಮನಸ್ಸು ತಲ್ಲಣಗೊಂಡಿತು. ಧರ್ಮಪ್ರಿಯ ಆಂಗ್ಲ ಸರಕಾರದ ನಾಗರಿಕನಾಗಿ ಈ ವಿಧವಾದ ಕ್ರೂರ ಪ್ರೋತ್ತೇಜಕ ಬೊಲ್ಶೆವಿಕ್ (Bolshevic) ಚಳವಳಿಯನ್ನು ಎದುರಿಸುವುದು ನನ್ನ ಮುಖ್ಯಕರ್ತವ್ಯವೆಂದು ತಿಳಿದುಕೊಂಡು ಅಂದೇ ಸ್ತ್ರೀಯರ ರೂಪವನ್ನು ಹೊಗಳಿ ಒಂದು ಲೇಖನವನ್ನು ಬರೆಯಬೇಕೆಂದು ಸ್ಥಿರನಮಾಡಿಕೊಂಡೆನು. ನನ್ನಾ ಪ್ರತಿಜ್ಞೆಯ ಸುಖಾನುಭವವು ಇಂದು ವಾಚಕರ ಪಾಲಿಗೆ ಬಂದುಗೂಡಿರುವುದು.

ಇಷ್ಟೊಂದು ದೊಡ್ಡಪೀಠಿಕೆಯನ್ನು ಹಾಕಿಕೊಂಡು ಪ್ರಬಂಧವನ್ನು ಪ್ರಾರಂಭಮಾಡಿದಮೇಲೆ, ನಮ್ಮ ಅಷ್ಟಾವಧಾನ - ಶತಾವಧಾನ ಗ್ರಂಥಕಾರರಂತೆ ಮೊಟ್ಟಮೊದಲು ಧರ್ಮಶಾಸ್ತ್ರವನ್ನು ಉದಹರಿಸುವನು ನೆಟ್ಟಗೆ, ಸ್ಮೃತಿಕಾರನಾದ ಮನುವು ಹೇಳಿರುವನು,

> ಯತ್ರನಾರ್ಯಸ್ತು ಪೂಜ್ಯಂತೇ ರಮಂತೇ ತತ್ರದೇವತಾಃ|
> ಯತ್ರೈತಾಸ್ತು ನಪೂಜ್ಯಂತೇ ಸರ್ವಾಸ್ತತ್ರಾಫಲಾಃಕ್ರಿಯಾಃ ||

ಎಂದು ಈ ಶ್ಲೋಕದ ವಿಧಿ ರೂಪವಾದ ಪೂರ್ವಾರ್ಧದ ಅರ್ಥವನ್ನು "ಸರಸ್ವತಿ" ಯ ಓದುಗರೆಲ್ಲರೂ ಬಲ್ಲರು. ಕೋಣೆಯ ಪೆಟ್ಟಿನಂತೆ ಕರ್ಕಶವಾದ ನಿಷೇಧಾತ್ಮಕ ಉತ್ತರಾರ್ಧದ ಅರ್ಥವು:— ಎಲ್ಲಿ ಸ್ತ್ರೀಯರಿಗೆ ಸನ್ಮಾನವಿಲ್ಲವೋ ಅಲ್ಲಿ ಸಮಸ್ತ ಕಾರ್ಯಗಳೂ ನಿಷ್ಫಲವಾಗುವವು ಎಂದು ನಮ್ಮ ಪುರಾತನರ ಮತವಾದರೂ ಹೀಗೆ. ಅವರ ಗೋತ್ರೋತ್ಪನ್ನರಾದ ನಮ್ಮಗಳ ಮತವೇನೆಂಬುದನ್ನು ನಿರ್ದೇಶಿಸುವ ಮೊದಲು ಆಧುನಿಕ ಪದ್ಧತಿಯಂತೆ, ಪಾಶ್ಚಾತ್ಯರ ಹಾಗೂ ಆಂಗ್ಲೇಯರ ಮತವೇನೆಂಬುದನ್ನು ಒಮ್ಮೆ ವಿಚಾರಮಾಡುವ. ಆಂಗ್ಲರಮಣಿಯರ ವಿಚಾರವಾಗಿ ಭಾರತವರ್ಷದ ಕವಿ ಸಮ್ರಾಟ್ ರಬೀಂದ್ರನಾಥ ಠಾಗೂರರವರು ಹೀಗೆ ಹೇಳಿರುವರು:

" ಈ ಸ್ಥಳದ (ಲಂಡನದ) ಬೀದಿಗಳಲ್ಲಿ ತಿರುಗಾಡುವುದೂ ಸಂತೋಷವೇ. ಎತ್ತ ನೋಡಿದರೂ ಸುಂದರವಾದ ಮುಖಗಳೇ ಕಾಣಬರುವವು ............ ನನ್ನ ನಂಬುಗೆಯೇನೆಂದರೆ, ಆಂಗ್ಲನಾರಿಯರಂತಹ ಸುಂದರಿಯರು ಪ್ರಪಂಚದಲ್ಲಿ ಮತ್ತಾರೂ ಇಲ್ಲ. ನವನೀತದಂತೆ ಕೋಮಲವಾದ ಶುಭ್ರ ಶ್ವೇತವರ್ಣದ ಮುಖದಮೇಲೆ ಗುಂಗುರು ಗುಂಗುರಾದ ಕೇಶರಾಶಿ, ಸುಘಟಿತವಾದ ನಾಸಿಕ, ಭಾವ

ಪೂರ್ಣವಾದ ನೀಲವರ್ಣದ ನೇತ್ರಗಳು, ನೋಡಿದೊಡನೆ ದಾರಿಯು ಕಷ್ಟವೆಲ್ಲಾ ಕಳೆದುಹೋಗುವುದು " ಎಂದು.

ಗಾರ್ಹಸ್ಥ್ಯ ಜೀವನದ ಏಕಮಾತ್ರ ಅವಲಂಬನವೆಂದರೆ ನಾರಿಯರೆ. ಸ್ತ್ರೀಯರ ಹೊರತು ಪುರುಷನು ಅರ್ಧ ಸತ್ತಹಾಗೆ. ಹಾಗಿಲ್ಲದಿದ್ದರೆ ಮಹಾದೇವನೊಡನೆ ಶಕ್ತಿಯು ಸರ್ವಕಾಲದಲ್ಲಿಯೂ ಇರುವಳೆಂದು ಸಕಲ ದೇವತೆಗಳೂ ಭಯಪಡಬೇಕಾದ ಕಾರಣವೇನು ? ಅಷ್ಟೇ ಅಲ್ಲ; ಎಷ್ಟೋಜನ ಯೋಗಿಗಳೂ, ಋಷಿಗಳೂ ನೂರಾರು ವರ್ಷಗಳು ಕಠೋರವಾದ ತಪಸ್ಸನ್ನು ಮಾಡಿ ಕಟ್ಟಕಡೆಗೆ ನಾರಿಯರ ನಿರ್ಮಲ ಕಟಾಕ್ಷದಿಂದ ಬಂಧಿತರಾಗಿ ಅವರ ರೂಪದಲ್ಲಿ ಮೋಹಿತರಾಗಿಲ್ಲ ? ಸ್ತ್ರೀವ್ಯಾಮೋಹದಿಂದ ಈ ರೀತಿ ಹುಚ್ಚರಾಗಿಹೋದವರು ಕೇವಲ ಇಂದ್ರ ಚಂದ್ರರು ಮಾತ್ರವಲ್ಲ. ಯೋಗಿಶ್ರೇಷ್ಠನಾದ ಪರಶಿವನೂ ಮೋಹಿನಿಯಲ್ಲನುರಕ್ತನಾಗಿ ಅವಳ ಹಿಂದೆ ಹಿಂದೆ ತಿರುಗುತ್ತಿದ್ದನು. ಇಂತಹ ಸ್ತ್ರೀಜಾತಿಯನ್ನು ಸ್ಕಾಟ್ ಸಾಹೇಬರು (Scot) ಈ ಕೆಳಗೆ ಹೇಳಿರುವಂತೆ ವರ್ಣಿಸಿರುವರು:

"O women, in our hours of ease
Uncertain coy and hard to please
And variable as the shade.
By the light quireving aspen made ;
When pain and anguish wring the brow
A ministering angle thou."

" ರಮಣಿ ನಮ್ಮ ವಿರಾಮ ಕಾಲದೊಳ್ ನೀನು
ಲಜ್ಜೆ, ಗೌರವ, ಬಿಂಕ, ಬಿನ್ನಾಣಗಳಲಿ
ಗಾಳಿಗಿಟ್ಟಹ ಸಣ್ಣದೀವಿಗೆಯ ಶಿಖಿಯು
ನೆಳಲಿನಂದದೆ ಚಪಲೆಯಾಗಿ ತೋರುವೆಯು !
ಬಂದ ದುಗುಡದೊಳೆಮ್ಮ ತಲೆ ಸಿಡಿಯುತಿರಲು
ಉಪಚರಿಸೆ ಕುಳಿತ ದೇವತೆಯಂತೆ ತೋರ್ಪೆ. "

ಬೈರನನು ಹೇಳಿರುವನು.—

"Man's love is of man's life a thing apart
T is woman's whole existence."

ಪುರುಷನ ಪ್ರೇಮವು ಅವನ ಜೀವನದ ಒಂದು ವಿಶಿಷ್ಟ ವಸ್ತುಮಾತ್ರ.
ಆ ಪ್ರೇಮವೇ ನಾರಿಯ ಸಮಸ್ತ ಜೀವನದ ತಳಹದಿಯು.

(ಸಶೇಷ)

# ಪುನರುಜ್ಜೀವನ

(ಹಿಂದಿನ ಸಂಚಿಕೆಯಿಂದ ಮುಂದುವರಿದುದು)

---

ಪ್ರತಾಪನಲ್ಲಿ ಹುದುಗಿದ್ದ ವೀರರಕ್ತವು ಮೇಲಕ್ಕೆ ಉಕ್ಕಿತು. ಯೋಷಿಯ ಶವದಮೇಲೆ ಹಸ್ತವನ್ನಿಟ್ಟು ಪ್ರತಾಪನಿಗೆ ಸಹಾಯಮಾಡುವೆನೆಂದು ಪ್ರಮಾಣ ಮಾಡಿದನು. ಪ್ರಮಾಣವು ಕೂಡಲೆ ಫಲಿಸಲೆಂದು ಅಕ್ಬರನ ಸೇವೆಗೆ ನಮಸ್ಕರಿಸಿ ಪ್ರತಾಪನೆಡೆಗೆ ಪ್ರಯಾಣಮಾಡಿದನು. ರಾಣನ ಕೋಮಲೆಯಾದ ತಾರೆಯು ಮೃತಳಾಗಿದ್ದಳು. ಪ್ರತಾಪನು ಪೃಥ್ವಿಗೆ ಆದರದಿಂದ ಸ್ವಾಗತವನ್ನು ಕೊಟ್ಟನು. ಇಬ್ಬರೂ ನೊಂದವರು. ಒಬ್ಬನು ದೇಶಕ್ಕಾಗಿ ತನ್ನ ಪತ್ನಿಯನ್ನೂ, ಮತ್ತೊಬ್ಬನು ದೇಶಕ್ಕಾಗಿ ತನ್ನ ಪ್ರಾಣಪದಕವಾದ ಪ್ರಿಯಕುವರಿಯನ್ನೂ ಕಳೆದುಕೊಂಡಿದ್ದರು.

ಪ್ರತಾಪ:—ಪೃಥ್ವೀರಾಜರೇ, ಏನು! ತಾವಿಲ್ಲಿ ದಯಮಾಡಿಸಿದುದು?

ಪೃಥ್ವಿ:—ರಾಣಾಜೀ, ಅಕ್ಬರನಿಗೆ ಶರಣಾಗತನಾಗುವೆನೆಂದು ನೀವು ಪತ್ರವನ್ನು ಬರೆದುದು ನಿಜವೇ?

ಪ್ರತಾಪ:—ಹೌದು, ನಾನೇ ಬರದೆ. ದೇವಿಗೆ ತಿಳಿಸದೇ ಬರದೆ.

ಪೃಥ್ವಿ:—ರಾಣಾಜೀ, ತಮ್ಮ ಪತ್ರದ ತಾತ್ಪರ್ಯವನ್ನು ಮರೆಯಿರಿ. ಹಿಂದೂಸ್ಥಾನವೇ ಈಗ ನಿಮ್ಮ ಕಡೆಗೆ ಪೂರ್ಣವಾಗಿ ಅಗಲಿಸಿದ ದೃಷ್ಟಿಯಿಂದ ನೋಡುತ್ತಲಿದೆ. ಸನಾತನವಾದ, ಪರಮಪೂಜ್ಯವಾದ ಆರ್ಯಮಹಿಳೆಯರ ಪಾತಿವ್ರತ್ಯಕ್ಕೆ ಕೊಡಲಿಯಪೆಟ್ಟು ಬೀಳಲಾರಂಭಿಸಿದೆ. ಅನೇಕ ಮಹಿಳೆಯರು ಪೆಟ್ಟುತಿಂದು ನರಳುತ್ತಿರುವರು; ಆದರೆ ಯೋಷಿ! ಆ ನನ್ನಯೋಷಿ! ಯೋಷಿಯೊಬ್ಬಳು ಆರ್ಯಸಂಸ್ಕೃತಿಗೋಸ್ಕರ ಪ್ರಾಣವನ್ನೊಪ್ಪಿಸಿದಳು.

ಪ್ರತಾಪ:—ಅರಸರೇ, ನಿಮ್ಮ ನುಡಿಗಳೊಂದೂ ನನಗೆ ಅರ್ಥವಾಗುತ್ತಿಲ್ಲ. ಪೂಜ್ಯಳಾದ ಯೋಷಿದೇವಿಯು ಮೃತಳಾದಳೇ?

ಪೃಥ್ವಿ:—ಸಹಜ, ಯೋಷಿಯು ಮೃತಳಾದಳು. ಖುಸ್‌ರೋಜ್ ಹಬ್ಬಕ್ಕೆ ನಾನೇ ಬಲವಂತದಿಂದ ಕಳುಹಿಸಿದೆ. ಪೈಶಾಚಿಕ ಆಶೆಯಿಂದ ಸಮ್ರಾಟನು ಯೋಷಿಯಮೇಲೆ ಕೈಹಾಕಲು ಮೊನೆಯಾದ ತನ್ನ ಚೂರಿಯಿಂದ ತನ್ನ ಅಮೂಲ್ಯವಾದ ಮಾನವನ್ನು ಕಾಪಾಡಿಕೊಂಡಳು. ನಿನ್ನೆಯದಿವಸ ನನಗೆ ತನ್ನ ಸಂದೇಶವನ್ನಿತ್ತು ಆತ್ಮಹತ್ಯಮಾಡಿಕೊಂಡಳು.

ಪ್ರತಾಪ:—ಏನು! ಪೂಜ್ಯಳು ಆತ್ಮಹತ್ಯಮಾಡಿಕೊಂಡಳೇ! ಏನು! ಹೀನಸಾಹಸಿಯಾದ ಅಕ್ಬರನು ಭಾರತವೀರರಮೇಲೆ ಕೈಹಾಕಿದ್ದನ್ನು ಮುಗಿಸ್ಯ

ಭಾರತರಮಣಿಯರ ಮೇಲೆ ಕೈಹಾಕತೊಡಗಿದನೇ! ಇರಲಿ; ಇದಕೆ ಪ್ರತಿಶೋಧನೆಯನ್ನು ನಾನು ಮಾಡುವೆನು. ನನ್ನ ಜನ್ಮವಿರುವವರೆಗೂ ಅಕ್ಬರನಿಗೆ ಶರಣು ಹೋಗೆನು. ಇದಕ್ಕೆ ಲೋಕಮಾತೆಯಾದ ಭಾರತಾಂಬೆಯೇ ಸಾಕ್ಷಿ. ಪೃಥ್ವಿರಾಜರೇ! ದೃಢಪಟುತ್ವದಿಂದ ನನಗೆ ಸಹಾಯಮಾಡಿ, ಸಮ್ರಾಟನ ಸಾಮರ್ಥ್ಯವನ್ನು ನೋಡುವ.

೩

ದೃಢವಾದ ಪ್ರತಿಜ್ಞೆಯೊಂದೇ ಬೇಕಾಗಿದ್ದುದು. ದೈವಬಲವು ಹಿಂದೆಯೇ ಇತ್ತು. ಪ್ರತಾಪನ ಸಹೋದರನಾದ ಶಕ್ತಸಿಂಹನು ತನ್ನ ಭಿಲ್ಲರೊಡನೆ ಅಣ್ಣನಿಗಾಗಿ ಕಾದಲು ಸಿದ್ಧನಾದನು. ರಾಣನ ಮಂತ್ರಿಯಾದ ಭೀಮನು ತಾನು ಇದುವರೆಗೆ ಗಳಿಸಿದ ಹಣವನ್ನೆಲ್ಲಾ ನಿರ್ವಂಚನೆಯಾಗಿ ರಾಣನ ಪಾದಪದ್ಮಗಳಮೇಲೆ ಸುರಿದನು. ಪೃಥ್ವಿರಾಜನಲ್ಲಿ ಅಡಗಿದ್ದ ಕ್ಷಾತ್ರಧರ್ಮ, ಕ್ಷಾತ್ರತೇಜವೆಲ್ಲಾ ಪುನರುಜ್ಜೀವನವಾಗುತ್ತ ಬಂದಿತು. ಭಾಪು! ಭಾಪು! ಆರ್ಯಾವರ್ತಕ್ಕಾಗಿ ಪ್ರಾಣ ಕೊಡಲು ಸಿದ್ಧರಾಗುವ ವೀರಾಗ್ರಣಿಗಳಿಗೆಲ್ಲಾ ಸಹಾಯವು ಹೇಗೆ ಒಂದರ ಮೇಲೊಂದು ಬರುವುದು. ಮುಖ್ಯ ಮಾತೆಯ ಸೇವೆಯಲ್ಲಿ ಆ ವೀರರ ಅನಿರ್ವಚನೀಯವಾದ ಪ್ರೇಮವೇ ಇದಕ್ಕೆ ಕಾರಣ.

ಯುದ್ಧವೂ ಕೈಗೂಡಿತು. ಕೈಬಿಟ್ಟುಹೋಗಿದ್ದ ದುರ್ಗಗಳೆಲ್ಲಾ ಒಂದೊಂದಾಗಿ ಕೈಸೇರತೊಡಗಿದುವು. ಕಮಲಮೇರುವೂ ಕೈಸೇರಿತು. ಮಹಬತ್‌ಖಾನ್ ಮೊದಲಾದ ಸಮ್ರಾಟನ ಕಡೆಯ ಅತಿರಥ, ಮಹಾರಥರೆಲ್ಲರೂ ಸೆರೆಸಿಕ್ಕಿದರು. ಮಹಬತ್‌ಖಾನನ ಸೈನ್ಯವನ್ನು ರಾಣನು ಬಿರುಗಾಳಿಯಂತೆ ಎಬ್ಬಿಸಿಕೊಂಡು ಹೋದನು. ಹೇಡಿಯಾದ ಮಾನಸಿಂಹನು ಹಳದೀಘಟ್ಟದ ಸಮರದ ಪರಿಚಯವನ್ನು ತಂದುಕೊಂಡು ಯುದ್ಧಕ್ಕೆ ಬರದೆ ಸುಮ್ಮನಿದ್ದನು. ದಯಾಳುವಾದ ರಾಣನು ಮಹಬತ್ತನನ್ನು ಸೆರೆಯಿಂದ ಬಿಡಿಸಿ ಮಾನಸಿಂಹನನ್ನು ರಣರಂಗಕ್ಕೆ ಕಳುಹುವಂತೆ ಹೇಳಿಕಳುಹಿಸಿದನು. ಅತ್ಯಲ್ಪಕಾಲದಲ್ಲಿಯೇ ಉದಯಪುರವು ರಾಣನ ವಶವಾಯಿತು. ಉಳಿದಿರುವುದಾವುವು? ಚಿತ್ತೂರು, ಅಜಮೀರ್, ಮಂಗಳಗಡ.

ಇಷ್ಟರಲ್ಲಿಯೇ ರಾಣನ ಶಿಬಿರದಲ್ಲಿ ಕಪ್ಪುಮೋಡಗಳು ಕೂಡಲಾರಂಭಿಸಿದುವು. ಸಮ್ರಾಟನ ಮಗಳಾದ ದೌಲತ್ ಉನ್ನೀಸಳನ್ನು ಶಕ್ತಸಿಂಹನು ಪ್ರೀತಿಸುತ್ತಿದ್ದನು. ಸಮರವನ್ನು ನೋಡಲು ಬಂದಿದ್ದ ದೌಲತ್ತಳಿಗೆ ಪೆಟ್ಟುಬಿದ್ದು ಆಕೆಯು ಮೃತಳಾದಳು. ಶಕ್ತಸಿಂಹನ ಜೀವನ ಸರ್ವಸ್ವವೇ ಹೋದಂತಾಯಿತು. ಕರ್ಮಭ್ರಷ್ಟನಾದವನು ಷೋಲ್ಲವಾದ ಒಬ್ಬ ಮೊಗಲರವಳ ವ್ಯಾಮೋಹಕ್ಕಾಗಿ ದೇಶವನ್ನೂ, ದೇಶಬಂಧುವನ್ನೂ ಧಿಕ್ಕರಿಸಿ ಹೊರಟುಹೋದನು. ರಾಣನ ಬಲ ತೋಳು ಮುರಿದಂತಾಯಿತು. ಸುರಾಪಾನನಿರತನಾದ ರಾಣನ ಕುವರನಾದ ಅಮರಸಿಂಹನು ಮೋಹರುನ್ನೀಸಾ ಎಂಬ ಬಾಲಿಕೆಯ ಮಾನಾಪಹರಣಮಾಡಬೇಕೆಂದಿ

ಲುವವೇಳೆಗೆ ರಾಣನೂ ಮತ್ತು ಲಕ್ಷ್ಮೀದೇವಿಯರೂ ಅಲ್ಲಿಗೆ ಬಂದರು. ರಾಣನಿಗೆ ಪರಮಾಗ್ರಹವಾಯಿತು. ಅಮುರನ ಶಿರಚ್ಛೇದನಮಾಡಲು ಬೀಸಿದ ರಸಿಯು, ಮಗನನ್ನು ಕಾಪಾಡಲು ತಲೆಕೊಟ್ಟ ಸಾಧ್ವೀಮಣಿಯಾದ ಲಕ್ಷ್ಮೀದೇವಿಗೆ ಬಿದ್ದಿತು. ಪತಿಯ ಪಾದಗಳಮೇಲೆ ತಲೆಯಿಟ್ಟು ಮಗನಿಗಾಗಿ ಕ್ಷಮೆಯನ್ನು ಬೇಡಿ ವೀರ ಲಕ್ಷ್ಮೀದೇವಿಯು ಪರಲೋಕಪ್ರವಾಸಕ್ಕೆ ತೆರಳಿದಳು.

ಈ ಎರಡು ದೃಶ್ಯಗಳು ರಾಣನ ತೋಳುಗಳನ್ನು ಮುರಿದಂತಾದುವು. ರಾಣನಿಗೆ ಮನೋರೋಗವು ವ್ಯಾಪಿಸಿತು. ''ಕಡೆಗೂ ಚಿತ್ತೂರನ್ನು ಶತ್ರುಗಳ ಕೈಯಿಂದ ಬಿಡಿಸಲಿಲ್ಲವಲ್ಲಾ'' ಎಂಬ ಅಂಡಲೆಯು ರಾಜಿಸಿತು. ಸನ್ನಿತ ವೈದ್ಯರೆಲ್ಲರೂ ತಮ್ಮ ವಿಶ್ವಪ್ರಯತ್ನಗಳನ್ನು ಮಾಡಿದರು. ರಾಣನಿಗಾಗಿ ತಮ್ಮ ದೇಹಗಳನ್ನು ಮೃತ್ಯುದೇವಿಗೆ ಬಲಿಕೊಡಲು ಸಿದ್ಧರಾದರು. ತಮ್ಮ ಎರೆಯನನ್ನುಳಿಸಲು ಬಹುಕಷ್ಟಪಟ್ಟರು. ಆದರೇನು? ಮಾನವ ಪ್ರಯತ್ನಕ್ಕಿಂತಲೂ ದೈವಪ್ರಯತ್ನವೇ ಹೆಚ್ಚಲ್ಲವೇ? ಫಲಿತಾಂಶಗಳು ಮಾನವರ ಅಧೀನವೇ?

ಒಂದುದಿನ ಮೇವಾರಿನ ಸೂರ್ಯನು ತನ್ನ ನಕ್ಷತ್ರಮಂಡಲಕ್ಕೆಲ್ಲಾ ಒಂದು ಸಂದೇಶವನ್ನಿತ್ತು ಪರಲೋಕಯಾತ್ರೆಗೆ ತೆರಳಿದನು. ಮೇವಾರಿನ ಆ ದಿವ್ಯಜ್ಯೋತಿಯು ಪರದಾಸ್ಯದ ಬಂಧನದಲ್ಲಿ ಸಿಲುಕಿದ ಭಾರತಾಂಬೆಯ ದುಃಖವನ್ನು ಉಪಶಮನ ಮಾಡುವುದಕ್ಕಾಗಿ ತೆರಳಿತು. ಆ ಅಪೂರ್ವವ್ಯಕ್ತಿಯ ದಿವ್ಯಸಂದೇಶವು ಇಂದಿಗೂ ಪ್ರತಿಯೊಬ್ಬ ಆರ್ಯಾವರ್ತದ ನಿಜ ಪುತ್ರ, ಪುತ್ರಿಯರ ಹೃದಯದಲ್ಲಿಯೂ ಇರತಕ್ಕುದಾಗಿದೆ.

''ನನ್ನ ಜೀವನಯಾತ್ರೆಯ ಕಾರ್ಯವನ್ನು ಸಂಪೂರ್ಣವಾಗಿ ಮಾಡಲಿಲ್ಲವೆಂಬುದೇ ನನ್ನ ದುಃಖ. ಅಯ್ಯೋ! ಅಶಕ್ತನಾದ ಮಗನನ್ನೂ, ಮಾತೆಯ ಮಾನವನ್ನು ಕಾಪಾಡಲಾರದಂತಹ ಪಾಮರನನ್ನೂ ಹಿಂದುಬಿಟ್ಟು ಹೋಗುತ್ತೇನಲ್ಲಾ ಎಂಬುದೇ ನನ್ನ ಪರಿತಾಪ. ವೀರ ಸರದಾರರೇ! ಅಮುರನನ್ನು ಹುರಿದುಂಬಿಸಿ, ಮಾತೃಸೇವೆಯ ವಿಶ್ವಾಸವನ್ನು ಅವನಲ್ಲಿ ಉದ್ರೇಗಿಸಿ! ದೇಶಕ್ಕಾಗಿಯೇ ಸಾಯುತ್ತೇವೆಂದು ನಿರ್ಧರಮಾಡಿಕೊಳ್ಳಿರಿ. ನಿಮ್ಮ ನಿಮ್ಮ ವಂಶೀಯರ ಹೃದಯಗಳಲ್ಲಿ ಆರ್ಯಾವರ್ತದ ರಕ್ತವು ಹರಿಯುತ್ತಲಿರುವವರೆಗೆ ತುಚ್ಛನಾದ ಆ ಹೂಣನಿಗೆ ದಾಸರಾಗಬೇಡಿರಿ. ಅಮ್ಮನ ಮಾನದಕಡೆಗೆ ಲಕ್ಷ್ಯವಿಡಿರಿ. ಪ್ರಾಣಗಳಮೇಲಿನ ಆಶೆಯನ್ನು ತೊರೆಯಿರಿ.''

ಇದೇ ರಾಣನ ಸಂದೇಶ. ಭ್ರಾತೃಭಗಿನಿಯರೇ! ನೀವೂ ಸ್ವಲ್ಪ ಈ ಸಂದೇಶಕ್ಕೆ ನಿಮ್ಮ ಹೃದಯಗಳಲ್ಲಿ ಸ್ಥಳವನ್ನು ಕೊಡುವಿರಾ?

ಓಂ ತತ್ಸತ್.

# ಮಾನವ ಸುಖಬೋಧಾಮೃತ

(ಹಿಂದಿನ ಸಂಚಿಕೆಯಿಂದ ಮುಂದರಿಸಿದ್ದು)

## ೩. ಪಿತನ ಕರ್ತವ್ಯ.

---

ಮಾನವನ ಸಂಸ್ಕೃತಿಯೊಳು ಪಿತನ |
ತಾನವದುವೇ ಮುಖ್ಯಮೆನಿಸಿರೆ |
ನೀನುಧರೆಯೊಳು ಗೌರವಂಗಳನಾಂತುರಾಜಿಪೊಡೆ ||
ಮಾನಿತರೆನಿಪ ಸುತರನಾಂತಸ |
ಮಾನಪುಣ್ಯಕೆಬಿಡದೆ ನೀಸು |
ಮ್ಮಾನದೊಳವರಕಾರ್ಯಭಾರವು ನಿನ್ನದಾಗಿಹುದು ||೧||

ಜನಿಸಿದಾತ್ಮಜನುಗುಣಿದುರ್ಗುಣಿ |
ಯೆನಿಸಿಬಾಳಲು ನೀನೆಕಾರಣ |
ನೆನುತಪೇಳ್ವರುನೀತಿವಿದರೀತೆರದಕಾರಣದೆ ||
ಘನತರದಸಂಸಾರದೊಳಸಮ |
ತನುಜರಕ್ಷ್ಣಮದೆಂದುಭಾವಿಸ |
ಲನುದಿನದೆನೀನಡೆವಮಾರ್ಗವುಯೋಗ್ಯಮೆನಿಸಿರಲಿ || ೨ ||

ಕಲಿಪಕಾಲವವ್ಯರ್ಥಗೈಸದೆ |
ಕಲಿಸುವುದುಸತ್ಕಲೆಗಳೊಲವಿಂ |
ವಿಲಸಿತನಿಜದಜಿಲೆಯನರಿಯಲುಸುತನಿಗೊರೆಯುವುದು ||
ಕಲಿಯಲಿಷ್ಟವುದೆಂದುತೋರ್ಪ |
ಕಲೆಯಕಲಿಯುತೆಹರೆಯದೊಳ್ಬರಿ |
ಗೆಲುವಿಗಾಳರಮಾದವರ್ತನೆಯುಳಿಯೆಬೋಧಿಪುದು || ೩ ||

ಬಳಿವನಿತುದುರ್ಗುಣನಿಚಯುವಂ |
ತಳಿಯುತಭ್ಯಾಸವೆನೆಮಾರ್ಗದ |
ಳುಕವುತಾನಾಂಕುರದಕೆಡೆಯಕ್ಕುಡದಂತೆನೋಡುವುದು ||

ಅಳುಕಿಕೋವಿದರೊಳಗೆಸಡಕೆಯು |
ತಿಳಿವನರಿಯುತೆಒಳಿದೊಡವನೇ |
ಇಳೆಯೊಳಗೆತಾವಿಟಪಿತರುವಂತಿರುತೆಥಾಬಿಪನು || ೪ ||

ದುರುಳತನದಿಂದಿಡಿದತನುಜಂ |
ದುರ್ಕಶವತಾಪಿತಗಮುಚ್ಛರ್ವ |
ತೆಳದೆವರ್ತ್ತಿಪನೆಂಬುದಕೆಸಂದೆಗವಿನಿತಿಲ್ಲವು ||
ಮೆರೆವಸದ್ಗುಣಸಾರದಿಂತಾ |
ನಿರುತಿರೆಯುಜನಕಂಗೊದವಿದಾ |
ಜರೆಯೊಳಗೆಮುನ್ನಣೆಯುನೊಂದಿಪಪುತ್ರನವನಲ್ತೆ || ೫ ||

ನಿನ್ನಿದೈದಿಹದೇಹಪೊಲವಂ |
ಮುನ್ನಮೆಯುದೆಂತಿಪ್ಪರ್ದೆಂಬುದ |
ನನ್ನಿಯಿಂದರಿದಿರುವೆಯುದರಿಂಬೀಜವಾಪೆಯಿನೆ ||
ಸನ್ನುತಫಲಂಗಳೊದವಿಸಂ |
ಪನ್ನನೆಂಬುವಜನವದಕೆಫಲ |
ವೆನ್ನುವತೆರದೆತನುಜನತಿದೀರ್ಘಬಾಳ್ಕೆಯೊಂದಿಪುದು || ೬ ||

ಮೆರೆವವಿನಯುವನರುಪೆತೋಷಿಪ |
ಸರಸದಿಂಮರ್ಯಾದೆಯಾಂಪುವ |
ತೆರದೆನಡೆಯುಲುನಾಣ್ಣದಾಪದಿವರ್ತಿಪಾತ್ಮಜಗೆ ||
ಪರರುಪಕೃತಿಯುಮರೆಯುದಿರ್ಪ |
ತೆರವಬಿಡದೆಕೃತಜ್ಞತಾಗುಣ |
ವರುಹುತಿರೆಪರರಿಂಫಲವಧರ್ಮದಿನೆನಲವಾಂಪ || ೭ ||

ಮಿತದೊಳಿರ್ಪುದಮುಗ್ಮವರುಹಲು |
ಜತನದೊಳಗಾರೋಗ್ಯವಾಂಪನು |
ನುತವಿನೇಕದೊಳ್ಥೆಯಿಂಜಸವಾಂತುಮೆರೆಯುವನು ||
ಅತಿಶಯುದಸತ್ಯದಿರವನರುಪೆ |
ಮತಿಯುವಂತರಪಿರಿಯುರಕಸಂ |
ಸ್ತುತಿಗೆಪಾತ್ರನೆನಿಸುತಲತಿಶಯಸೌಖ್ಯವಾಂತಿಹನು || ೮ ||

ಚತುರಮತಿಯುತನಾಗಲೆಡೆಗುಡ |
ಅತುಳಭಾಗ್ಯವವೃದ್ಧಿಗೈವನು |
ಹಿತವನೆಸಗುವಸಾಹಿತ್ಯವೆಸೆಯಲುದಾರನಾಗುವನು ||

ಕ್ಷಿತಿಯೊಳಂಪ್ರಾಕೃತಿಕಶಾಸ್ತ್ರವ |
ಹಿತದೆಕಲಿಸುತಲಿದೋರ್ಡಂಜೇ |
ಏತವುಯೋಗ್ಯಮುದಾಗಿಲೋಕದೆಮಾನ್ಯನಾಗುವನು || ೯ ||

ದೇವನಿತ್ತಾತ್ರಿಶಿರವನುವಿಂ |
ಭಾವದೊಳವಗಾಹನೆಗೆಬರ |
ಲಾವಕಾಲದೆವರ್ಷಿಪಂಕ್ತಿಯುಮತವಬೋಧಿಪೊಡೆ ||

ಭೂವಲಯವಿದುಮಥ್ಯೆಯೆಂಬಾ |
ಭಾವವಂಕುರಿಸುತ್ತಿಸಂತತ |
ದೇವನಡಿದಾವರೆಯನಂಬಲುಬಳುತಿಪುಟ್ಟುವುದು || ೧೦ ||

ಪಿತನುವಸುಮತಿಯೊಳಗೆಪೂತನು |
ಪಿತನುತನುಜನದೇಹದಾಯಕ |
ಪಿತನುಧರೆಯೊಳುನೇತ್ರಯುಗ್ಮಕೆಕಾಣ್ಬದೇವನಲೆ ||

ಪಿತನುಸದ್ಗತಿಮಾರ್ಗದರ್ಶಕ |
ಪಿತನುಪುತ್ರನಜೀವರತ್ನವು |
ಪಿತನುಸರ್ವೋತ್ತಮನುನೆನ್ನುವರಿವನುಬೋಧಿಪುದು || ೧೧ ||

---

# ಜನಾನಾ (Zenana)

## (ಲೇಖಕರು—ಶ್ರೀಯುತ ಪಂಡಿತ ತಾರಾನಾಥರವರು)

ಮುಸಲ್ಮಾನ ಹೆಂಗಸರು ಇರುವ ಅಂತಃಪುರಕ್ಕೆ 'ಜನಾನಾ' ಎಂದು ಹೆಸರು. ಜನ್ ಅಂದರೆ ಹೆಂಗಸು. ಜನಾನಾ ಅಂದರೆ ಹೆಂಗಸರು ವಾಸಮಾಡುವಸ್ಥಳ. ಗಂಡಸರಿಗೂ ಹೆಂಗಸರಿಗೂ ಬೇರೆಬೇರೆ ಸ್ಥಳಗಳ ಏರ್ಪಾಡು ಮಾಡುವದಕ್ಕೇನು ಕಾರಣನೆಂಬುದನ್ನು ವಿಚಾರಿಸಬೇಕು. ಉಚ್ಚ ನೀಚಭಾವದಿಂದ ಈ ಏರ್ಪಾಡು ಉಂಟಾಯಿತೋ ಅಥವಾ ಗಂಡಸರಿಗೂ ಹೆಂಗಸರಿಗೂ ಹಿತವಾಗುವಂತೆ ಅದು ಮಾಡಲ್ಪಟ್ಟಿತೋ? ಮುಸಲ್ಮಾನರ ಧರ್ಮಸ್ಥಾಪಕನಾದ ಮುಹಮ್ಮದನ ವಾಕ್ಯಗಳನ್ನೇ ಪರಿಶೀಲಿಸಿ ನೋಡೋಣ. ಹೆಂಗಸರನ್ನು ಅವನು ನೀಚರೆಂದು ಭಾವಿಸುತ್ತಿದ್ದನೋ ಇಲ್ಲವೋ ಎಂಬ ಸಂಗತಿಯು ಒಡೆದು ಕಾಣುವದು. ಅನುವಾದಿಸಲ್ಪಟ್ಟ ಈ ವಾಕ್ಯಾರ್ಥವನ್ನು ನೋಡಿ ವಾಚಕರು ತಾವೇ ತಿಳಿದುಕೊಳ್ಳುವದು ಉತ್ತಮ:—

1. "ಪವಿತ್ರನಾಗಿ ಪರಮಾತ್ಮನನ್ನು ಕಾಣಲು ಇಚ್ಛಿಸುವವನು ಯೋಗ್ಯಳಾದ ಮತ್ತು ಸ್ವತಂತ್ರಳಾದ ಸ್ತ್ರೀಯನ್ನು ಮದುವೆಮಾಡಿಕೊಳ್ಳಬೇಕು".
2. "ಮುಸಲ್ಮಾನನು ತನ್ನ ಹೆಂಡತಿಯನ್ನು ದ್ವೇಷಿಸಬಾರದು".
3. "ನಿಮ್ಮ ಹೆಂಡಂದಿರನ್ನು ನೀವು ಹೊಡೆಯಬಾರದು".
4. "ತನ್ನ ಹೆಂಡತಿಯೊಡನೆ ಅತ್ಯುತ್ತಮವಾಗಿ ವರ್ತಿಸುವವನೇ ಉತ್ತಮನು".

ಇಂತಹ ಅನೇಕ ಉಪದೇಶಗಳನ್ನು ಮುಸಲ್ಮಾನ ಧರ್ಮಗ್ರಂಥಗಳಲ್ಲಿ ಕಾಣಬಹುದು. ಇಲ್ಲಿ ಅವತರಿಸಿದ ಕೆಲವು ವಾಕ್ಯಗಳಿಂದ ಹೆಂಗಸರಿಗೆ ಸನ್ಮಾನವು ಆ ಮತದಲ್ಲಿ ಧಾರಾಳವಾಗಿದೆ ಎಂಬುದು ಸ್ಪಷ್ಟವಾಗುವದಿಲ್ಲವೋ?

ಆದರೆ ಕೆಲವರು ಮುಸಲ್ಮಾನ ಹೆಂಗಸರ 'ಘೋಷಾ' ಪದ್ಧತಿಯನ್ನು ಕಂಡು ಘೋಷಾ ಮತ್ತು 'ಜನನಾ' ಎರಡೂ ಒಂದೇ ಎಂದು ತಿಳಿದುಕೊಂಡು ತಪ್ಪಿಹೋಗಿ "ಮುಸಲ್ಮಾನರು ಹೆಂಗಸರನ್ನು ಮುಚ್ಚಿಡುತ್ತಾರೆ" ಎಂದು ಹೇಳುತ್ತಾರೆ. ಇದು ಕೆಟ್ಟ ತಪ್ಪು. ಮನೆಯಲ್ಲಿ ಜನಾನಾ ಯಾವಕಾಲಕ್ಕೂ ಯೋಗ್ಯವೇ ಮತ್ತು ಹೊರಗೆ ಘೋಷಾಪದ್ಧತಿಯು ಮತಸ್ಥಾಪನೆಯ ಕಾಲದಲ್ಲಿ ಯೋಗ್ಯ ಮತ್ತು ಅಗತ್ಯವೇ ಆಗಿತ್ತು ಎಂಬುದೂ ವಿಚಾರಿಸಿನೋಡಿದರೆ ತಿಳಿದುಬರುವದು. ಮೊದಲು

ಗೋಷಾ ಪದ್ಧತಿಯ ವಿಷಯ ಚರ್ಚಿಸೋಣ: ಅದನ್ನು ಮಹಮ್ಮದನು ಸ್ಥಾಪಿಸಲಿಲ್ಲ. ಅದು ಆತನ ದೇಶದಲ್ಲಿಯ ಒಂದು ರೂಢಿ. ಆತನು ಇಸ್ಲಾಮ ಧರ್ಮವನ್ನು ಸ್ಥಾಪಿಸುವದಕ್ಕೆ ಮೊದಲು ಅರಬಸ್ಥಾನದ ಸ್ಥಿತಿಯು ಹ್ಯಾಗಿತ್ತು ಎಂಬುದನ್ನು ಇತಿಹಾಸಮೂಲಕವಾಗಿ ತಿಳಿದುಕೊಳ್ಳಬೇಕು. ಆಗಿನ ಅರಬರಿಗೆ ನ್ಯಾಯನೀತಿಗಳ ವಾಸನೆಯು ಸಹ ಇರಲಿಲ್ಲ. ಹೆಂಗಸರನ್ನು ಇತರ ವಸ್ತುಗಳಂತೆಯೇ ಭೋಗ ಸಾಮಗ್ರಿಗಳೆಂದು ಅವರು ತಿಳಿದುಕೊಂಡಿದ್ದರು. ಬೇಕಾದಷ್ಟು ಹೆಂಡಂದಿರನ್ನು ಬೇಕಾದ ರೀತಿಯಿಂದ ಮಾಡಿಕೊಳ್ಳುವದೂ ಬಿಟ್ಟುಬಿಡುವದೂ ಅವರ ಸ್ವಚ್ಛಂದ ವೃತ್ತಿಯನ್ನವಲಂಬಿಸಿತ್ತು. ಇಲ್ಲಿಯೂ ರಾಕ್ಷಸ, ಪೈಶಾಚ್ಯ ವಿವಾಹಗಳು ಒಂದು ಕಾಲದಲ್ಲಿದ್ದವಷ್ಟೆ. "ಜನತೆಯು ವಿಚಾರದಿಂದಲೇ ಪ್ರಗತಿಯನ್ನೈದಿ ಸುಖಪಡುತ್ತದೆ". ಅಂತಹ ಕೆಟ್ಟಕಾಲದಲ್ಲಿ ಹೆಂಗಸರು ತಮ್ಮ ರೂಪವನ್ನು ಮರೆಮಾಚಿಕೊಂಡು ತಮ್ಮನ್ನು ಕಾಪಾಡಿಕೊಳ್ಳುವ ಪ್ರಯತ್ನವನ್ನು ಮಾಡುತ್ತಿದ್ದರು. ಮಹಮ್ಮದನು ಧರ್ಮತತ್ವಗಳನ್ನೇನೋ ಸಾರಿದನು; ಆದರೆ ತತ್ವಗಳು ಜನರ ಆಚರಣೆಯಲ್ಲಿ ಬರಬೇಕಲ್ಲವೇ? ಅದಾದಮೇಲಲ್ಲವೇ ಹೆಂಗಸರಿಗೆ ಸ್ವಾತಂತ್ರ್ಯವು ತಾನೇಬರುವದು? ಗಂಡಸರ ನಡತೆಯು ಹತೋಟಿಗೆ ಬರುವವರೆಗಾದರೂ 'ಘೋಷಾ' ಇರಲೇಬೇಕಷ್ಟೆ? ಇವೇ ಮೊದಲಾದ ವಿಚಾರಗಳನ್ನು ಮಾಡುತ್ತ ಒಳ್ಳೇ ಕಾಲವು ಬರುವವರೆಗೂ ಆ ಗೋಷಾ ಇದ್ದಂತಿರಲಿಯೆಂದು ಆತನು ಅದನ್ನು ಕುರಿತು ಮಾರ್ಪಾಡುಗಳನ್ನು ಮಾಡಲಿಲ್ಲ. ಇದರಿಂದ ಮುಸಲ್ಮಾನ ಹೆಂಗಸರಿಗೆ ಸ್ವಾತಂತ್ರ್ಯವಿಲ್ಲವೆಂದು ತಿಳಿದುಕೊಳ್ಳುವದು ಮೂರ್ಖತನ. ತಮ್ಮ ಮಾನವನ್ನು ಕಾಪಾಡುವದಕ್ಕಾಗಿ ಒಂದು ಮುಸುಕನ್ನು ಹಾಕಿಕೊಂಡರೆ, ಆ ಮುಸುಕು ಬಂಧನವಾಗುವದೆಂತು? ೧ನೆಯ ಅವತರಣದಲ್ಲಿ ಸ್ವತಂತ್ರ ಎಂಬ ಶಬ್ದವನ್ನು ನೋಡಿರಿ. ಅವಳ ತನು ಮನಸ್ಸುಗಳಿಗೂ ಸ್ವಾತಂತ್ರ್ಯವಿದೆ. ಅವಳು ಲೌಕಿಕ ವಿದ್ಯೆ, ಪಾರಮಾರ್ಥಿಕವಿದ್ಯೆ, ಧನ, ಇವುಗಳೆಲ್ಲವನ್ನೂ ಸಂಪಾದಿಸಬಹುದು. ಇಷ್ಟುಮಾತ್ರವೇ ಅಲ್ಲದೆ ಅತ್ಯುಚ್ಚವಾದ ಧರ್ಮೋಪದೇಶವನ್ನು ಇತರರಿಗೆ ಮಾಡುವ ಅಧಿಕಾರವು ಸಹ ಅವಳಿಗಿದೆ. ಮಹಮ್ಮದನ ಹೆಂಡತಿಯಾದ ಆಶಾಬೀಯು ಇಪ್ಪತ್ತು ಸಾವಿರ ಸಿಪಾಯಿಗಳ ಸೈನ್ಯವನ್ನು ಧರ್ಮಯುದ್ಧಕ್ಕಾಗಿ ರಣರಂಗಕ್ಕೆ ಕರೆದುಕೊಂಡುಹೋದಳು. ಮತ್ತು ಯಾರೊಡನೆ ಯುದ್ಧವನ್ಮಾಡಲಿಕ್ಕೆ? ತನ್ನ ಅಳಿಯನೊಡನೆಯೇ. ಅವನು ಅಧರ್ಮವನ್ನು ಮಾಡಿದನು ಎಂಬ ಒಂದು ತಪ್ಪುತಿಳುವಳಿಕೆಯು ಅವಳಿಗಿತ್ತು. ಮುಂದೆ ನೈಜವು ತಿಳಿದಮೇಲೆ ಯುದ್ಧವು ಪ್ರಾರಂಭವಾಗಲಿಲ್ಲ. ಆಮಾತು ಬೇರೆ. ಆದರೂ ಇಪ್ಪತ್ತು ಸಾವಿರ ಸಿಪಾಯಿಗಳನ್ನೊಟ್ಟುಗೂಡಿಸಿ ಅವರನ್ನು ತನ್ನ ಆಜ್ಞೆಗೊಳಪಡಿಸುವದು ಸಾಮಾನ್ಯವಾದ ಕೆಲಸವೇ? ಇಂತಹ ಎಷ್ಟೋ ದೃಷ್ಟಾಂತಗಳು ಮುಸಲ್ಮಾನಸ್ತ್ರೀಯರ ಇತಿಹಾಸದಲ್ಲಿ ಕಂಡುಬರುತ್ತವೆ. ರೋಶನ್ ಆರಾ, ಜೈಬುನ್ನಿಸಾ—ಔರಂಗಜೇಬನ ತಂಗಿ ಮತ್ತು ಮಗಳು. ಇವರ

ಟ್ಟರು, ಪಾಂಡಿತ್ಯದಲ್ಲಿಯೂ, ಕಾವ್ಯದಲ್ಲಿಯೂ, ರಾಜಕಾರಣದಲ್ಲಿಯೂ, ಕ್ಷಾತ್ರವೀರ್ಯದಲ್ಲಿಯೂ ಇವರ ಯೋಗ್ಯತೆಯನ್ನು ಎಷ್ಟು ವರ್ಣಿಸಿದರೂ ಕಡಿಮೆಯೇ! ಇವರಿಗೆ 'ಗೋಷಾ' ಇರಲಿಲ್ಲವೋ ? ಅದು ಅವರು ತಾವೇ ಆಗಿ ಅವಲಂಬಿಸಿಕೊಂಡದ್ದು. ಅಲ್ಲದೆ ಅವರಿಗೆ ಸ್ವಾತಂತ್ರ್ಯವು ಇಲ್ಲದೆ ಎಂದಿಗೂ ಹೋಗಲಿಲ್ಲ. ಈಗಲೂ ಅವರ ಮಧ್ಯಮ ತರಗತಿಯ ಸ್ತ್ರೀಯರಲ್ಲಿದ್ದಷ್ಟು ಧರ್ಮಜ್ಞಾನ ವಿನಯಸಂಪನ್ನರು ಉತ್ತಮತರಗತಿಯವರಾದ ಹಿಂದೂಸ್ತ್ರೀಯರಲ್ಲಿಲ್ಲವೆಂದು, ನಿಶ್ಚಯವಾಗಿ ಹೇಳಬಹುದು. ಉರ್ದು, ಫಾರ್ಸಿ ಭಾಷೆಗಳಲ್ಲಿ ಅದ್ಭುತವಾದ ಪದ್ಯಗದ್ಯಗಳನ್ನು ಬರೆಯುವವರು ಅವರಲ್ಲಿ ಷೋಕ್ಯೇಮಂದಿ ಇದ್ದಾರೆ. 'ಹಾಫಿಜಾ' ಆದರೆ ಸ್ವಧರ್ಮ ಗ್ರಂಥಗಳನ್ನು ಮುಖೋದ್ಗತವಾಗಿಟ್ಟುಕೊಂಡ ಹೆಂಗಸರು, ಹತ್ತು ಹನ್ನೆರಡು ವರ್ಷದೊಳಗಣ ಹುಡುಗಿಯರು ಅವರಲ್ಲಿ ಷೋಕ್ಯೇಮಂದಿ 'ಹಾಫಿಜಾ' ಇದ್ದಾರೆ. ಧರ್ಮವೆಂದರೆ ಮಡಿಮೈಲಿಗೆಯ ಗೊಂದಲ ಒಂದೇ ಅಲ್ಲ. ಆ ಶಂಖ ಘಂಟಾನಾದಗಳು ಮಾತ್ರವಲ್ಲ. ವಿನಯ ವಿಜ್ಞಾನಗಳು ಅದರ ಮುಖ್ಯಾಂಗಗಳು. ಗೃಹಕೃತ್ಯಗಳಲ್ಲಿಯೂ ಸಮಾಜಸೇವೆಯಲ್ಲಿಯೂ ಆಚಾರವಿಚಾರಗಳೆರಡರಲ್ಲಿಯೂ ಅಮೃತವಾಗಿರುವದೇ ಧರ್ಮ. ಈ ದೃಷ್ಟಿಯಿಂದ ನೋಡಿದರೆ ಅಸಹಕಾರದ ದಿನಗಳಲ್ಲಿ ಮುಸಲ್ಮಾನಹೆಂಗಸರು ಮಾಡಿದ ಸಾಹಸವು ಎಷ್ಟು ಅದ್ಭುತವಾಗಿತ್ತು ಎಂಬದು ಕಂಡುಬರುವದು. ಉತ್ತರ ಹಿಂದೂಸ್ಥಾನಕ್ಕೆ ಸೇರಿದ ಮೌಲಾನಾ ಫಾಕಿರ್ ಎಂಬ ಒಬ್ಬ ಸ್ನೇಹಿತರ ಹೆಂಡತಿಯನ್ನು ಕುರಿತು ಕೆಲವು ವಿಷಯಗಳನ್ನು ಹೇಳಬೇಕಾಗಿದೆ. ಮೌಲಾನಾಯವರ ಪಾಂಡಿತ್ಯ, ವಾಗ್ಧೋರಣೆ, ಧೈರ್ಯ ಮುಂತಾದವುಗಳನ್ನು ಅನೇಕರು ಬಲ್ಲರು. ಅವರನ್ನು ಖಿಲಾಫತ್ ವ್ಯಾಖ್ಯಾನಗಳಿಗಾಗಿ ಸೆರೆಹಿಡಿದಕಾಲದಲ್ಲಿ ಅವರ ಹೆಂಡತಿಯು ತನ್ನ ಧರ್ಮದ ರೂಢಿಯ ಪ್ರಕಾರ ಆನಂದದಿಂದ ಅವರ ಕಣ್ಣಿಗೆ ಸುರ್ಮಾ (ಪುಡಿಕಾಡಿಗೆ) ಹಚ್ಚಿದಳು. ಹೀಗೆ ಹಚ್ಚುವದು ಆನಂದದ ಚಿನ್ಹೆ. ಮೇಲೆ ಸೆರೆಮನೆಯ ಬಾಗಿಲಿನ ಹತ್ತರ 'ನೀವೀಗ ಧರ್ಮಕ್ಕಾಗಿ ಸುನ್ನತೆ-ಜೈನ-ಲಾಬುದೀನ್ ಮಾಡುತ್ತಿದ್ದೀರಿ. ಸುನ್ನತೆ-ಅಲಿಯನ್ನು ಮಾಡಿ ತೋರಿಸಿದರೆ ನನಗೆ ಯೋಗ್ಯನಾದಗಂಡನೆಂದು ನಾನು ತಿಳಿದುಕೊಳ್ಳುವೆನು' ಎಂದು ಅಲ್ಲಿ ಕೂಡಿದ ಜನಸಮೂಹದಲ್ಲಿ ಹೇಳಿದಳು. ಜೈನುಲಾಬುದೀನ ಎಂಬುವನು ಪೂರ್ವದಲ್ಲಿ ಧರ್ಮಕ್ಕಾಗಿ ಬಂಧಿಸಲ್ಪಟ್ಟನು. ಅಲಿಯು ಧರ್ಮಕ್ಕಾಗಿ ಕೊಲ್ಲಲ್ಪಟ್ಟನು. ಅವಳು ಗಂಡನಿಗೆ ಹೇಳಿದುದರ ಅರ್ಥವೇನೆಂದರೆ:— "ನಿಮಗೀಗ ಧರ್ಮಕ್ಕಾಗಿ ಬಂಧನವು ಮಾತ್ರ ಪ್ರಾಪ್ತವಾಗುತ್ತಿದೆ. ಧರ್ಮಕ್ಕಾಗಿ ನನ್ನ ಪತಿಗೆ ಮರಣ ಪ್ರಾಪ್ತವಾದಾಗಲೇ ನನ್ನ ಜನ್ಮ ಸಾರ್ಥಕವಾಯಿತು ಎಂದು ನಾನು ತಿಳಿದುಕೊಂಡೇನು" ಎಂಬದೇ! ಅಲಿ ಬಂಧುಗಳ ತಾಯಿ, ಮಹಮ್ಮದಲಿಯ ಹೆಂಡತಿ ಮಾಡಿದ ಧೈರ್ಯಯುತ ತ್ಯಾಗ ಸಾಹಸಗಳು ಸಾಧಾರಣವೋ ? ಮೌಲಾನಾ ಅಬ್ದುಲ್ ಮಜೀದ್ ಶರರ್ ಎಂಬುವರು ಮದ್ರಾಸ್ ಕೌಮಿ ರಿಪೋರ್ಟ್ ಎಂಬ ಪತ್ರಿಕೆಯ ಸಂಪಾದಕರಾಗಿದ್ದರು. ಅವರ ನಿರ್ಭಯುಕ್ತ

ಯೋಗ್ಯತೆಗಳನ್ನು ಅರಿಯದ ಮುಸಲ್ಮಾನರು ಬಹಳ ಕಡಿಮೆ. ಅವರು ನನ್ನ ಪರಮ ಸ್ನೇಹಿತರಾಗಿದ್ದುದರಿಂದ ಅವರ ಸ್ಥಿತಿಯನ್ನು ನಾನು ಚನ್ನಾಗಿ ಬಲ್ಲೆನು. ಅವರು ಖಿಲಾಫತಿಗಾಗಿ ಮತ್ತು ಮಹಾತ್ಮರಲ್ಲಿ ತಮಗಿದ್ದ ಗೌರವಕ್ಕಾಗಿ ಮಾಡಿದ ತ್ಯಾಗವು ಎಂತಹದು! ಅವರು ಟ್ರಿಪ್ಲಿಕೇನಿನಿಂದ ಸೆಂಟ್ ಥಾಮಸ್ ಮೌಂಟಿಗೆ ವಾರಕ್ಕೊಂದು ಸಲ ತನ್ನ ಹೆಂಡತಿ ಮಕ್ಕಳನ್ನು ನೋಡಲಿಕ್ಕೆ ಹೋಗುತ್ತಿದ್ದರು. ಉಳಿಕೆಯ ಕಾಲವೆಲ್ಲ ಬರೆಯುವದರಲ್ಲಿಯೂ, ವ್ಯಾಖ್ಯಾನವನ್ನು ಕೊಡುವದರಲ್ಲಿಯೂ ಹೋಗುತ್ತಿತ್ತು. ಅಹೋರಾತ್ರಿ ಕೆಲಸಮಾಡುತ್ತಿರುವದರಿಂದ ದೇಹವು ಕೆಟ್ಟುಹೋಗಿ ರಕ್ತವಾಂತಿಯು ಪ್ರಾರಂಭವಾಯಿತು. ಆವಾಗಲೂ ವ್ಯಾಖ್ಯಾನಗಳನ್ನು ಬಿಡಲಿಲ್ಲ. ಎಂಟೊಂಭತ್ತು ದಿನಗಳಾದ ಮೇಲೆ ನನಗೆ ಈ ಸುದ್ದಿಯು ತಿಳಿಯಿತು. ಅವರಿಗೆ ನನ್ನಲ್ಲಿರುವ ವಾತ್ಸಲ್ಯದಿಂದ ಧೈರ್ಯಪಟ್ಟು ನಾನವರನ್ನು ವಿಶ್ರಾಂತಿಗೊಳ್ಳುವಂತೆ ಕೇಳಿಕೊಂಡೆನು. “ದೇಶ ಧರ್ಮಸ್ವಾತಂತ್ರ್ಯಕ್ಕಿಂತ ಈ ದೇಹವು ಹೆಚ್ಚೋ?” ಎಂದು ನಗುತ್ತ ಕೆಮ್ಮುತ್ತ ಹೇಳಿದರು. “ನಿಮ್ಮ ಜವಾಬ್ದಾರಿಯನ್ನು ನಾನು ವಹಿಸಿಕೊಂಡು ಎಲ್ಲ ವ್ಯಾಖ್ಯಾನಗಳನ್ನೂ ನಾನು ಕೊಡುತ್ತೇನೆ. ನಿಮ್ಮ ಆಶೀರ್ವಾದ ಬಂದಿದ್ದರೆ ಸಾಕು. ಅಲ್ಲದೆ ನೀವು ಇನ್ನು ದೇಹವನ್ನು ಕೆಡಿಸಿಕೊಂಡರೆ ನಾನು ಸತ್ಯಾಗ್ರಹವನ್ನು ಮಾಡುತ್ತೇನೆ” ಎಂದು ಹೇಳಿದೆನು. ಹೀಗೆ ಹೇಳಿ ಅವರ ಕರ್ತವ್ಯವನ್ನು ನಾನು ವಹಿಸಿ ಸಾಗಿಸಲುಪಕ್ರಮಿಸಿದ ಮೇಲೆ ತಾವು ವಿಶ್ರಾಂತಿಯನ್ನು ತಕ್ಕೊಂಡರು. ಮುಂದೆ ಅವರ ಮಗನಿಗೆ ಬಹಳ ಖಾಯಿಲೆ ಆಯಿತು. ಆದರೆ ತಮ್ಮ ಕೆಲಸವನ್ನು ಬಿಟ್ಟು ಅವರು ಸೆಂಟ್ ಥಾಮಸ್ ಮೌಂಟಿಗೆ ಹೋಗಲೇ ಇಲ್ಲ. ಬಹಳ ಅಪಾಯವು ಕಂಡುಬಂದಮೇಲೆ ಅವರ ಪತ್ನಿಯು ಹುಡುಗನನ್ನು ಬಂಡಿಯಲ್ಲಿ ಕರೆದುಕೊಂಡು ಟ್ರಿಪ್ಲಿಕೇನಿಗೆ ಬಂದಳು. ಆಗ ಒಂದು ಅಗತ್ಯವಾದ ಲೇಖನವು ಪ್ರೆಸ್ಸಿಗೆ ಹೋಗಬೇಕಾಗಿತ್ತು. ಅದನ್ನು ಬರೆಯುವಾಗ ಕೆಳಗಿನಿಂದ ಸುದ್ದಿಯನ್ನು ತಿಳಿಸಲಿಕ್ಕೆ ಒಬ್ಬನು ಮಾಳಿಗೆ ಮೇಲಿರುವ ಆಫೀಸಿಗೆ ಬಂದನು. ಪ್ರೆಸ್ಸಿಗೆ ಹೋಗುವ ಹೊತ್ತು ಹತ್ತಿರಕ್ಕೆ ಬಂದಿತ್ತು. ಲೇಖನವನ್ನು ಮುಗಿಸಿ ಬರುತ್ತೇನೆಂದು ಹೇಳು, ಎಂದು ಮನುಷ್ಯನನ್ನು ವಾಪಸು ಕಳುಹಿಸಿಕೊಟ್ಟರು. ಇಪ್ಪತ್ತು ನಿಮಿಷಗಳೊಳಗೆ ಮುಗಿಸಿ ಕೆಳಕ್ಕೆ ಬಂದರು. ತಾಯಿಯು ಗಂಡನಿಗೆ ಸಲಾಂ ಮಾಡಿ ರೋಗಿಯ ತಲೆಯಮೇಲಿನ ಬಟ್ಟೆಯನ್ನು ತೆಗೆಯುತ್ತಾಳೆ. ಅಯ್ಯೋ! ಹುಡುಗನ ಪ್ರಾಣವು ಹೋಗಿದ್ದಿತು. ಈ ಮಹಾತ್ಮನ ಕಣ್ಣಿನಲ್ಲಿ ನೀರಿಲ್ಲ. ತಾಯಿಯು ಶಾಂತಳಾಗಿ ಗಂಡನನ್ನೂ ಮಗನನ್ನೂ ನೋಡುತ್ತಿದ್ದಾಳೆ. “ದೈವ ಇಚ್ಛೆ. ಅನೇಕ ವಿಧಗಳಿಂದ ನಮ್ಮನ್ನು ಆಡಿಸುತ್ತಾನೆ. ಆದರೂ ಅವನು ಪರಮದಯಾಳು. ನಾವು ಶಾಂತರಾಗಿರಬೇಕು. ಅಳುವದು ಅಧರ್ಮ. ಮಗನನ್ನು ಸಮಾಧಿಯಲ್ಲಿಡುವುದಕ್ಕೆ ಬರಲು ನನಗೆ ಅವಕಾಶವಿಲ್ಲ. ಇಗೋ! ಈ ಐದು ರೂಪಾಯಿಗಳ ನೋಟು. ಇದರಿಂದ ಅವನನ್ನು

ನೀನು ಹೋಗಿ ದಫನಾಯಿಸು (ಹೊಂಡದಲ್ಲಿಡು) '' ಎಂದು ಹೆಂಡತಿಗೆ ಹೇಳಿ ತನ್ನ ವೆಸ್ಟ್‌ಕೋಟ್ ಪಾಕೆಟ್ಟಿನಿಂದ ನೋಟು ತೆಗೆದುಕೊಟ್ಟು ಮಾಳಿಗೆಯನ್ನೇರಿದರು. ಆ ದಿವ್ಯ ಲಲನಾಮಣಿಯೋ ಹೆಣದೊಡನೆ ದೈವಧ್ಯಾನ ಮಾಡುತ್ತ ಶಾಂತಳಾಗಿ ಹಿಂತಿರಿಗಿದಳು. ಇಂತಹ ಹೆಂಗಸರು ಹಿಂದೂಸಮಾಜದಲ್ಲೀಗ ಎಷ್ಟುಮಂದಿ ಕಂಡುಬರುತ್ತಾರೆ ? ತಮ್ಮ ತಮ್ಮ ಸಂಸಾರದಲ್ಲಿ ಸ್ವಾನುಕೂಲತೆಗೆ ಎಷ್ಟು ಬೇಕೋ ಅಷ್ಟೇ ವಿದ್ಯೆ ಅಲ್ಲ, ಕೆಲಸವನ್ನು ಹೆಂಡಂದಿರಿಗೆ ಕಲಿಸುತ್ತಾರಷ್ಟೇ ಅಲ್ಲದೆ ಇತರ ವಿಷಯಗಳ ಸುದ್ದಿಯೇ ಅವಳಿಗೆ ತಿಳಿಸುವದಿಲ್ಲ. ಮೇಲೆ ಪ್ರಪಂಚದ ಅನುಭವವು ಎಷ್ಟು ಕಡಿಮೆ ಇರುತ್ತದೋ ಅಷ್ಟು ಕೀರ್ತಿ ಅವಳಿಗೆ ಗಂಡನಕಡೆಯಿಂದ. “ನನ್ನ ಹೆಂಡತಿ ಒಳ್ಳೇ ಸಾಧ್ವಿ ; ಪಾಪ ! ಪ್ರಪಂಚದ ವಿಷಯ ಏನೇನೂ ಅರಿಯಳು '' ಎಂದು ದೊಡ್ಡ ದೊಡ್ಡ ವಕೀಲರಾದ, ಪ್ರೊಫೆಸರರಾದ ನನ್ನ ಸ್ನೇಹಿತರೆಷ್ಟೋ ಮಂದಿ ತಮ್ಮ ಹೆಂಡಂದಿರನ್ನು ಕುರಿತು ನನ್ನೊಡನೆ ಹೇಗೆ ಮಾತನಾಡಿದ್ದಾರೆ ! ಇದಕ್ಕಿಂತ ಹೀನ ದುರ್ದಶೆಯು ಉಂಟೇ ! ಅಜ್ಞಾನವನ್ನೂ ಮೌಢ್ಯವನ್ನೂ ಭೂಷಣವೆಂದು ವಿದ್ಯಾವಂತರೆನಿಸಿಕೊಳ್ಳುವವರು ತಿಳಿದುಕೊಂಡಮೇಲೆ ದೇಶದ ದುರ್ಗತಿಯನ್ನು ಯಾರೂ ಊಹಿಸಬಹುದು.

ಜನಾನಾ ಎಂದರೆ ಸೆರೆಮನೆಯೆಂದು ಅನೇಕರ ಭಾವ. ಇದು ತಪ್ಪು ಹೆಂಗಸರಿಗೆ ಬೇಕಾದಷ್ಟು ಸ್ವಾತಂತ್ರ್ಯವನ್ನೊದಗಿಸಿಕೊಡುವದಕ್ಕಾಗಿ ಅದು ಏರ್ಪಟ್ಟಿದೆ. ಅಲ್ಲಿ ಹೆಂಗಸರು ಮಾತ್ರ ಅಪ್ಪಣೆಯಿಲ್ಲದೆ ಪ್ರವೇಶಿಸಬಹುದಲ್ಲದೆ ಮನೆಯ ಯಜಮಾನನೂ ಅಪ್ಪಣೆಯಿಲ್ಲದೆ ಪ್ರವೇಶಿಸಲಾರನು. ಹೆಂಗಸರಿಗೆ ಆಯಾಸವಿಲ್ಲವೋ ? ಆಗ ಅವರು ಅಲ್ಲಿ ಮನಸ್ಸಿಗೆ ಬಂದಂತೆ ಹೊರಳಾಡಬಹುದು. ಅವರಿಗೆ ಆಟಪಾಟಗಳಿಲ್ಲವೋ ? ಜನಾನಾದೊಳಗೆ ಅವರು ಲಜ್ಜೆಯನ್ನು ಬಿಟ್ಟು ಸಂತೋಷವಾಗಿರಬಹುದು. “ ಉಲ್ಲಾಸವೇ ಆಗಲಿ, ಆಯಾಸವೇ ಆಗಲಿ ಹೆಚ್ಚಾದ ಕಾಲದಲ್ಲಿ ಲಜ್ಜೆಯನ್ನಿಟ್ಟುಕೊಳ್ಳುವದು ಪ್ರಕೃತಿಗೇ ವಿರುದ್ಧವಾದದ್ದು. '' ಆಹೋರಾತ್ರಿ ಗಂಡಸರಿಗಾಗಿ ಮುದುರಿಕೊಂಡು ಮುಚ್ಚಿಕೊಂಡು ಕೂತುಕೊಳ್ಳಬೇಕೆಂದರೆ ಒಂದು ಆಜನ್ಮಶಿಕ್ಷೆಯೇ. ಸಾಮಾನ್ಯವಾಗಿ ಹಿಂದೂ ಜನರಲ್ಲಿ ಹೆಂಗಸರಿಗೆ ಪೂರ್ವಕಾಲದಲ್ಲಿದ್ದಂತೆ ಅಂತಃಪುರವು ಇಲ್ಲವೇ ಇಲ್ಲ. ಪ್ರಕೃತಿ ಗುಣ ಸ್ಥಿತಿಗತಿಗಳಿಗನುಕೂಲವಾಗುವಂತೆ ಪ್ರಶಸ್ತವಾಗಿರುವುದಕ್ಕಾಗಿ ಜಾಗೆಯೇ ಇಲ್ಲ. ದೇವರಮನೆಯಲ್ಲ ಏಕಾಂತವಿದೆ; ಆದರೆ ಅಲ್ಲಿ ಮಲಗಬಾರದು. ಮತ್ತೆ ಅಡಿಗೆಮನೆಯ ನೆಲವೇ ಗತಿ. ಯಾಕೆಂದರೆ ಹಾಸಿಗೆ, ಚಾಪೆ ಅಲ್ಲಿ ತೆಗೆದುಕೊಂಡುಹೋದರೆ ಮೈಲಿಗೆ, ಬೇರೆಕಡೆಯಲ್ಲಿ ಗಂಡಸರಿದ್ದಾರೆ ! ಅವರಿದಿರಿನಲ್ಲಿ ಮಲಗುವದು ಅಧರ್ಮ ! ಅವರ ಒಳಗಿರುವ ಮರ್ಯಾದೆಗೆ ಕಮ್ಮಿ ! ಇಂಥ ಹಿಂಸೆಯು ಕುಲೀನರ ಹೆಂಗಸರಿಗೆ ಬಹಳ ಅಪರೂಪ. ಸ್ತ್ರೀಸ್ವಭಾವಕ್ಕನುಸಾರವಾಗಿ ಅವರು ತಮ್ಮ ಜನಾನಾದೊಳಗೆ ಬೇಕಾದಂತಿರಬಹುದು. ಅಲ್ಲಿ ಶವ, ಇಲ್ಲಿ ಸ್ವಚ್ಛತೆಯಿಲ್ಲ ಎಂಬುವದು

ತಿಳುವಳಿಕೆಯಿಲ್ಲದವರ ಮಾತು. ನಾನು ವೈದ್ಯನಾಗಿ ಎಷ್ಟೋ ಜನಾನಾಗಳನ್ನು ನೋಡಿದ್ದೇನೆ. ಮುಸಲ್ಮಾನರಲ್ಲಿ ಗಂಡಸರಲ್ಲಿಯೂ ಹೆಂಗಸರಲ್ಲಿಯೂ ಸ್ವಚ್ಛತೆಯು ಕಡಿಮೆಯೆಂಬುದು ನಿಜ. ಆದರೆ ಹೆಂಗಸರನ್ನು ಮಾತ್ರ ಗಾಳಿಯಿಲ್ಲದ ಜಾಗೆಯಲ್ಲಿಡುತ್ತಾರೆ ಎಂಬ ಮಾತು ಸುಳ್ಳು. ಹಾಗೆಲ್ಲಿಯಾದರೂ ಇದ್ದರೆ ಮಧ್ಯಸ್ಥಿತಿಯವರ ಕೆಲವು ಮನೆಗಳಲ್ಲಿ ಮಾತ್ರ ಇವೆ. ಬಡವರಿಗೆ 'ಗೋಷಾ' 'ಜನಾನಾ' ಸಾಧಾರಣವಾಗಿ ಇಲ್ಲವೇ ಇಲ್ಲ. ದೊಡ್ಡವರಲ್ಲಿ ವಿಶಾಲವಾದ ಸುಖತರವಾದ ಜನಾನಾಗಳಿವೆ. ಮತ್ತು ಅಲ್ಲಿ ಅವರಿಗೆ ಬೇಕಾದಷ್ಟು ಸ್ವಾತಂತ್ರ್ಯವಿದೆ.

"ಅವರಲ್ಲಿ ಈಗಲೂ ಅನುಕೂಲತೆ ಇಲ್ಲದಿದ್ದರೆ ಮಾತ್ರ ಹುಡುಗಿಯರಿಗೆ ವಿದ್ಯೆ ಕಲಿಸುವದಿಲ್ಲ. ಅಲ್ಲದೆ ಸಾಧಾರಣವಾಗಿ ಮಧ್ಯಮ ಉಚ್ಚ ತರಗತಿಯ ಎಲ್ಲ ಹುಡುಗಿಯರಿಗೂ ಓದು ಬರಹಗಳನ್ನು ಧರ್ಮವೆಂದಂತು ಕಲಿಸಿಯೇ ತೀರುತ್ತಾರೆ." ಹಿಂದೂ ಜನರಲ್ಲಿ ಹುಡುಗಿಯು ಹುಟ್ಟುವದು ವಿವಾಹಕ್ಕಾಗಿಯೇ; ಹುಡುಗನ ಗುಲಾಮಗಿರಿ ಒಂದನ್ನು ಮಾಡುವುದಕ್ಕಾಗಿಯೇ. ದೊಡ್ಡ ದೊಡ್ಡ ಪಂಡಿತರ ಮನೆಯ ಹೆಂಗಸರೂ ನಿರಕ್ಷರಕುಕ್ಷಿಗಳೇ. ಅಡಿಗೇಮನೆಯ, ದೇವರಮನೆಯ ಸಾಂಪ್ರದಾಯಗಳನ್ನು ಗಂಡಸರಿಗೆ ತೊಂದರೆ ಇಲ್ಲದಂತೆ ನಡೆಸುವಮಟ್ಟಿಗೆ ಯೋಗ್ಯತೆ ಇದ್ದರೆ ಸಾಕು. ಆ ಹೆಂಗಸು ಉತ್ತಮತರಗತಿಗೇ ಸೇರಿಬಿಡುತ್ತಾಳೆ. ಸ್ವಾನುಕೂಲ್ಯ ದೇವತೆಯ ಉಪಾಸಕರಾದ ಗಂಡಸರ ಆಶೀರ್ವಾದದಿಂದ ಇನ್ನೇನು ಕಡಿಮೆ? ಗಂಡನಿಗೆ ಸುಖ, ಹೆಂಡತಿಗೆ ಸಂತೋಷ! ಧರ್ಮ ಮುಗಿಯಿತು!

'ನಸ್ತ್ರೀಣಾಂಸ್ವಾತಂತ್ರ್ಯಮರ್ಹತಿ'. ಹೆಂಗಸರು ಸ್ವಾತಂತ್ರ್ಯಕ್ಕೆ ಅರ್ಹರಲ್ಲ ಎಂಬ ಮುಖ್ಯ ನಿರ್ಧಾರವು ಮನುಧರ್ಮಶಾಸ್ತ್ರದೊಳಗೆ ಯಾರೋ ತೋರಿಸುವದಕ್ಕೆ ಮೊದಲು ಹಿಂದೂ ಸ್ತ್ರೀಯರೂ, ಉತ್ತಮ ಮೇಧಾವಿಗಳೂ ಧಾರ್ಮಿಕರೂ ತೇಜಸ್ವಿಗಳೂ ಆಗಿದ್ದರು. ಈ ನೀಚವಿಚಾರವು ಬಂದಂದಿನಿಂದ ಅವರು ಕೇವಲ ಶಿಶೂತ್ಪಾದಕಯಂತ್ರಗಳಾಗಿ ಇಡಲ್ಪಟ್ಟಿದ್ದಾರೆಂದರೆ ಅತಿಶಯೋಕ್ತಿಯಾಗಲಾರದು.

"ತುರ್ಕರು" ಮೂರ್ಖರು. 'ಮಹಾಮಡನ್' ಅಂದರೆ 'ಮಹಾಮೂರ್ಖ' 'ಮಹಾ ಮಡೆಯರ್ಖ' ಎಂದು ಅವರನ್ನು ನಿಂದಿಸುವದು ಅವಿವೇಕ. ಅವರಲ್ಲಿರುವ ಅಜ್ಞಾನಿಗಳನ್ನು ಮಾತ್ರ ಕಂಡು ಅವಿವೇಕಿಗಳಂತೆ ಅವರ ಧರ್ಮಸಾಂಪ್ರದಾಯಗಳನ್ನು ಕುರಿತು ನಿರ್ಧರಿಸುವದು ಮೂರ್ಖತನ. ನಾನಾ ಮತಗಳಿಗೆ ಸೇರಿದ "ಸಮಾನತರಗತಿಯ ಪುರುಷ ಸ್ತ್ರೀಯರನ್ನು ಮಾತ್ರ ಸಂತೋಲಿಸಿ ನೋಡಬೇಕು. ಆಗ ಮಾತ್ರ ನೈಜವು ತಿಳಿದುಬರುವದು." ಮತ ಮತಗಳಲ್ಲಿರುವ ಪರಸ್ಪರ ಕ್ಲೇಶಗಳಿಗೆ "ಅಜ್ಞಾನವೇ ಮುಖ್ಯಕಾರಣವಲ್ಲದೆ ಅನರ್ಹತೆ ಅಲ್ಲ." ಪರಸ್ಪರ ಪರಿಚಯವನ್ನು ಮಾಡಿಕೊಂಡು ಒಬ್ಬರನ್ನೊಬ್ಬರು ಚನ್ನಾಗಿ ತಿಳಿದು

ಕೊಳ್ಳುವವರಿಗೆ " ಕೂಪಮಂಡೂಕನ್ಯಾಯ "ವೇ ಪ್ರಬಲವಾಗಿದ್ದು ಎಲ್ಲರಿಗೂ ದುರ್ಭಿಕ್ಷ, ದುರ್ಗತಿ, ಭಯ, ಸಂಶಯಗಳೇ ಲಭಿಸುವವಲ್ಲದೆ ಸುಖವು ಸುತರಾಂ ಉಂಟಾಗಲಿಕ್ಕಿಲ್ಲ. ಸ್ವರಾಜ್ಯವು ಹಾಗಿರಲಿ; ಸಾಮಾನ್ಯವಾದ ಸದ್ಗುಣಗಳೂ ಸಹ ಬರಲಿಕ್ಕಿಲ್ಲ. ಪ್ರತಿಯೊಂದು ಸಂಸ್ಕೃತಿಯಲ್ಲಿಯೂ ಒಂದು ಸೌಂದರ್ಯವಿದೆ, ಬಲವಿದೆ. ಅದನ್ನು ತಿಳಿದುಕೊಳ್ಳುವದರಿಂದ ತಮ್ಮ ಬುದ್ಧಿಯೂ ಪ್ರಫುಲ್ಲಿತವಾಗುತ್ತದೆ. ಸಹಿಷ್ಣುತೆಯು ಹೆಚ್ಚಿ, ಪ್ರೇಮವು ಬೆಳೆದು ಸಮಾಜಕ್ಕೂ ಸುಖವಾಗುತ್ತದೆ. ದೊಡ್ಡಸ್ಥಿಕೆಯನ್ನು ಕಂಡಲ್ಲಿ ಪೂಜಿಸಬೇಕು.

" ಜ್ಞಾನ ಧೈರ್ಯ ಶ್ರದ್ಧೆ ಮೌನದಿ, ಪರಮತವ ತಪಧ್ಯಾನ ಮಂತ್ರವ ಮಾಡಿಕೊಳ್ಳದೆ, ನಿಗ್ರಹವೆ ಗೃಹದೇವನೆನುತಲಿ, ಸಕಲಜನ ಮತಸ್ಥಾನದಲಿ ಗುರು (ನೈತಿಷ್ಠ) ನನ್ನೆ ಕಾಣುತ್ತ, ಪ್ರೇಮರಸವನು ಕಾರ್ಯರೂಪದಿ, ಮಾಡಿಬದುಕೆಲೆ ಮೂಢಮತಿ ನೀನು, " ಎಂಬ ಸ್ವತಂತ್ರವಚನದ ಸಾರವನ್ನು ಹೀರಿ 'ಪ್ರೇಮಾಮೃತ' ಲಹರಿಯಲ್ಲಿ ಲೀಲಾಲೋಲರಾಗ ಯತ್ನಿಸುವವರೇ ನಿಜವಾದ ಧರ್ಮಾಭಿಮಾನಿಗಳು.

---

# ಗ್ರಂಥಪರಿಚಯ.

---

**ಈ ಕೆಳಗಿನ ಗ್ರಂಥಗಳನ್ನು ವಿಮರ್ಶೆಗಾಗಿ ಕಳುಹಿಸಿಕೊಟ್ಟ ಮಹನೀಯರಿಗೆ ಸರಸ್ವತಿಯು ಕೃತಜ್ಞಳಾಗಿರುವಳು.**

ಸ್ಕೌಟುಗಳ ಕನ್ನಡ ಕೈಪಿಡಿ:—ಕನ್ನಡದಲ್ಲಿ ಸ್ಕೌಟ್ ಪದ್ಧತಿಯ ವಿಷಯಗಳನ್ನು ತಿಳಿಸುವ ಗ್ರಂಥವೊಂದಿಲ್ಲದೆ ಬಹಳ ಕೊರತೆಯಾಗಿದ್ದಿತು. ಹಿಂದುಸ್ಥಾನೀ ಸೇವಾದಲದ ವ್ಯವಸ್ಥಾಪಕರಾದ ಶ್ರೀಯುತ ನಾರಾಯಣ ಸುಬ್ರಾಯ ಹಾರ್ಡಿಕರ್ ಅವರು, " ವಾಲಂಟಿಯರ್ " ಎಂಬಭಿದಾನದಿಂದ ಒಂದು ಮಾಸಪತ್ರಿಕೆಯನ್ನು ನಡೆಸುತ್ತಿರುವರಾದರೂ ಅದರಲ್ಲೂ ಬಾಲಚಮೂ ಪದ್ಧತಿಯ ವಿಚಾರಗಳು ಪೂರ್ತಿಯಾಗಿಲ್ಲ ಈ ಕುಂದನ್ನು ನೀಗಿಸಬೇಕೆಂಬ ಅಭಿಲಾಷೆಯಿಂದ, ಯದುವಿಜಯ, ಕಂಠೀರವ, ಮೊದಲಾದ ಗ್ರಂಥಗಳ ಕರ್ತರಾದ ಶ್ರೀಯುತ ಎಂ. ಆರ್. ಶ್ರೀನಿವಾಸಮೂರ್ತಿ, ಬಿ. ಎ. ಯವರು ಈ ಅಮೂಲ್ಯ ಗ್ರಂಥವನ್ನು ರಚಿಸಿ ನಮ್ಮ ಮೈಸೂರು ದೇಶಕ್ಕೆ ದೊಡ್ಡ ಉಪಕಾರವನ್ನು ಮಾಡಿರುವರು. ಶೈಲಿಯು ಸುಲಭವಾಗಿಯೂ ಅಂದವಾಗಿಯೂ ಮುದ್ರಣವು ಅಚ್ಚುಕಟ್ಟಾಗಿಯೂ ನೋಡುವುದಕ್ಕೆ

ಅಂದವಾಗಿಯೂ ಇರುವುದು. ಗ್ರಂಥಕರ್ತರು ಪ್ರಾಚೀನ ಕರ್ನಾಟಕದ ಅನೇಕ ವಿಷಯಗಳನ್ನು ವಾಚಕರ ಮುಂದಿಟ್ಟು ತರುಣ ವೀರರನ್ನು ಹುರಿದುಂಬಿಸಲು ತೆಗೆದುಕೊಂಡಿರತಕ್ಕ ಶ್ರಮವು ಮೆಚ್ಚತಕ್ಕದ್ದು. ಈ ಮಹದುಪಕಾರಕ್ಕಾಗಿ ಕನ್ನಡ ನಾಡಿನವರೆಲ್ಲರೂ ಮೇಲ್ಕಂಡ ಗ್ರಂಥಕರ್ತರಿಗೆ ಕೃತಜ್ಞರಾಗಿರಬೇಕು. ಸ್ಕೌಟುಗಳು ಮಾತ್ರವಲ್ಲದೆ ಕನ್ನಡ ನುಡಿಯನ್ನು ಬಲ್ಲವರೆಲ್ಲರೂ ಈ ಗ್ರಂಥವನ್ನೋದಿ ಪ್ರಯೋಜನವನ್ನು ಪಡೆಯಬೇಕು.

ಇದರ ಬೆಲೆ 0—8—0 ಮಾತ್ರ.

ದೊರೆಯತಕ್ಕ ಸ್ಥಳ:—ಸ್ಕೌಟ್ ಹೆಡ್ಕ್ವಾರ್ಟರ್ಸ್,
ಟೀಪು ಸುಲ್ತಾನರ ಅರಮನೆ, ಕೋಟೆ, ಬೆಂಗಳೂರು ಸಿಟಿ.

---

## ಮುದ್ದಣನ ಸಂಚಿಕೆ-ಪ್ರಬುದ್ಧ ಕರ್ಣಾಟಕ-ಬೆಂಗಳೂರು.

ಪ್ರತಿವರ್ಷದಲ್ಲಿಯೂ 'ವಿನಾಯಕನ ಸಂಚಿಕೆ' ಯೆಂಬಭಿದಾನದಿಂದ ಹೊರ ಹೊರಡುತ್ತಿದ್ದ ಸಂಚಿಕೆಯು ಈ ವರ್ಷ "ಪ್ರಸಿದ್ಧ ಕರ್ನಾಟಕ ಕವಿಪುಂಗನಾದ ಮುದ್ದಣನ" ಜ್ಞಾಪಕಾರ್ಥವಾಗಿ "ಮುದ್ದಣನ ಸಂಚಿಕೆ" ಯೆಂಬಭಿದಾನದಿಂದ ವಾಚಕರ ಹಸ್ತವನ್ನಲಂಕರಿಸಿದೆ. ಪರದೇಶ ಸಂಸ್ಕೃತಿಯ ದಾಸಾನುದಾಸರಾಗಿ ವಿಕ್ರಯಿಸಲ್ಪಟ್ಟಿದ್ದ ಕನ್ನಡಿಗರನ್ನೆಚ್ಚರಿಸಿ ಕರ್ನಾಟಕರಲ್ಲಿ ಪ್ರಾಚೀನ ಕವಿತಾಪ್ರೌಢಿಮೆಯು ಸತ್ತಿಲ್ಲವೆನ್ನುವುದನ್ನು ಜಗತ್ತಿಗೆ ವಿಶದಪಡಿಸಿದ ಕವಿಶ್ರೇಷ್ಠನೇ ಈ ಮುದ್ದಣ ಮಹಾಕವಿಯು. ಇದರಲ್ಲಿ ಶ್ರೀಯುತರುಗಳಾದ ಪಂಜೆ ಮಂಗೇಶರಾಯರು, ಪ್ರಾಕ್ತನ ವಿಮರ್ಶನ, ರಾವ್ ಬಹದ್ದೂರ್ ಆರ್. ನರಸಿಂಹಾಚಾರ್ಯರು, ಬೆನಗಲ್ಲು ರಾಮರಾಯರು, ಮಾಸ್ತಿ ವೆಂಕಟೇಶಯ್ಯಂಗಾರ್, ಪಂಡಿತ ಪೂಜಾರವರು ಮೊದಲಾದವರಿಂದ ಬರೆಯಲ್ಪಟ್ಟ ಮುದ್ದಣನ ಕಾವ್ಯದ ವಿಮರ್ಶೆಯೂ, ಕವಿಯ ಭಾವಚಿತ್ರವೂ ಇವೆಲ್ಲವೂ ಕನ್ನಡಿಗರ ಕಣ್ತೆರೆಯುವಂತೆ ಮಾಡುತ್ತಿದೆ. ಇಷ್ಟೊಂದು ಮಹದುಪಕಾರವನ್ನು ಕನ್ನಡಿಗರಿಗೆ ಮಾಡಿದ ಕರ್ನಾಟಕ ಸಂಘದವರನ್ನು ಕನ್ನಡಿಗರೆಲ್ಲರೂ ಅಭಿನಂದಿಸಬೇಕಾಗಿದೆ. ಪ್ರಬುದ್ಧ ಕರ್ನಾಟಕದ ಸರಳಶೈಲಿಯ ಇಂಪನ್ನು ಅನುಭವಿಸಿದವರು ಅತಿ ವಿರಳ ಇಂತಹ ಸೇವೆಯನ್ನು ನಿರಂತರವೂ ಈ ಪ್ರಬುದ್ಧ ಕರ್ನಾಟಕವು ಮಾಡುತ್ತಿರಲೆಂದು ಹಾರೈಸುವೆವಲ್ಲದೆ ಕನ್ನಡಿಗರೆಲ್ಲರೂ ಈ ಮುದ್ದಣನ ಸಂಚಿಕೆಯನ್ನು ಸಂಗ್ರಹಿಸಬೇಕಾಗಿ ಬೇಡುವೆವು.

---



## ಮೆಹರುನ್ನೀಸಾ

ಮೊಗಲ್ ಸಾಮ್ರಾಜ್ಯದ ಪ್ರಸಿದ್ಧ ರಾಣಿಯಾದ ನೂರ್ಜಹಾನಳು ಪರ್ಷಿಯಾ ದೇಶದ ಒಬ್ಬ ಬಡಗೃಹಸ್ಥನ ಮಗಳು. ಮೆಹರುನ್ನೀಸಾ ತನ್ನ ಅಸಮಾನರೂಪದಿಂದಲೂ ಮತ್ತು ಬುದ್ಧಿಯ ಪ್ರತಿಭೆಯಿಂದಲೂ ಅಖಂಡ ಮೊಗಲ್ ಸಾಮ್ರಾಜ್ಯವನ್ನು ಯುಕ್ತರೀತಿಯಿಂದ ಶಾಸನಮಾಡಿದಳು. ಅನುಕೂಲವಾದ ಪರಿಸ್ಥಿತಿ ಒದಗಿದರೆ ಸ್ತ್ರೀಯರ ಪ್ರತಿಭೆಯು ಎಷ್ಟೊಂದು ವಿಕಾಸವನ್ನು ಹೊಂದಬಹುದೆನ್ನುವುದಕ್ಕೆ ಈಕೆಯು ಉಜ್ವಲನಿದರ್ಶನವಾಗಿರುವಳು.

[ "ಸರಸ್ವತಿ" ಯಲ್ಲಿ ಧಾರಾವಾಹಿಕವಾಗಿ ಹೊರಡುತ್ತಿರುವ ಈಕೆಯ ಚರಿತ್ರೆಯು ಕಾರಣಾಂತರದಿಂದ ನಿಲ್ಲಿಸಲ್ಪಟ್ಟಿದೆ. ಮುಂದಿನ ಸಂಚಿಕೆಯಿಂದ ಮತ್ತೆ ಪ್ರಕಟಿಸಲ್ಪಡುವುದು. ಸಂಪಾದಕಿ ]

ಓಂ

# ಸರಸ್ವತಿ

ಸಂಪುಟ ೫ } ಕ್ರೋಧನ ವರ್ಷ – ಆಶ್ವೀಜ ಮಾಸ } ಸಂಚಿಕೆ ೬

## ಜನ್ಮಭೂಮಿ



### ಸೀಸಪದ್ಯಗಳು.

ಬಹುರತ್ನಸಂಭೂತಮೆನಿಪ ಹಿಮಗಿರಿ ಈಕೆ
ಶಿರದೊಳಿಟ್ಟಿಹ ಮಣಿಕಿರೀಟಮಾಯ್ತು ।
ಸ್ವಚ್ಛ ಮೌಕ್ತಿಕದಂತೆ ನಿರ್ಮಲಾಂಬುವನಾಂತ
ಗಂಗೆ ಈ ಸತಿತಾಳ್ದ ಹಾರವಾಯ್ತು ।
ಬಹುಶಿಖರಸಂಘಟಿತ ವಿಂಧ್ಯಾದ್ರಿಪಂಕ್ತಿಯೀ
ಈಕೆಯೊಪ್ಪುವ ಕಟಿಗೆ ಕಾಂಚಿಯಾಯ್ತು ।
ಫಲಪುಷ್ಪಸಂಕುಲದೆ ಶೋಭಿಸುವ ಸಸ್ಯಾಳಿ
ಈಕೆಯುಟ್ಟಿಹ ಚಾರು ಚೇಲವಾಯ್ತು ॥

ಈಕೆಗಾದುದು ಲಂಕೆ ಪದಪೀತವಬ್ಧಿ
ಇರ್ಕೆಳದೆ ಮಚಾರವಿಡುವ ಸೇವೆಗಾಯ್ತು ।
ಇಂತುಮೆರೆವೀ ಧಾತ್ರಿಯಖಿಲ ಜಗಕೆಲ್ಲ
ಎಂತುಟೆನಿಸಳೊ ರಾಣಿ ಆರ್ಯಧಾನಿ ॥

* * *

ಭೀಷ್ಮಪ್ರಹ್ಲಾದಾದಿ ಪರಹಿತಪ್ರವಣ್ಯಳ
ಭಾವುಕರಪಡೆದ ಗುಣಧಾತ್ರಿ ನೀನು ।
ಬುದ್ಧ ಶಂಕರ ಬಸವರಾಮಾದಿ ಬಹುಮತ
ಸ್ಥಾಪಕರ ಪಡೆದ ಸುಸ್ತ್ರೋಕೆ ನೀನು ।

ಭಾಸಭಾರವಿಕಾಳಿದಾಸಾದಿ ಕವಿಜನರೊ
ತ್ತಂಸರನುಪಡೆದ ಶ್ರುತವಂಶೆ ನೀನು |
ಚಂದ್ರಗುಪ್ತಾಶೋಕ ಹರ್ಷಾದಿನೃಪತಿರೋ
ಮಣಿಗಳನು ಪಡೆದಿಳಾರಮಣಿ ನೀನು ||

ಸೀತಾದಿಸಾಧ್ವಿಯರ ದಿವ್ಯಚರಿತ್ರದಿಂ
ಪೂತೆಯಹ ಪರಮಪವಿತ್ರೆ ನೀನು |
ಇಂತುಮೆರೆವೀಧಾತ್ರಿ ಯಖಿಲಜಗಕೆಲ್ಲ
ಎಂತುಟೆನಿಸಳೊ ರಾಣಿ ಆರ್ಯಧಾನಿ ||

* * *

ಅನ್ಯಮತದ್ವೇಷವನ್ಯಮೃಗ ಸಂಕುಲವ
ಮನ್ನಿಸುತೆ ಸಲೆಪೊರೆದ ಮಾತೆ ನೀನು |
ವಾಣಿಜ್ಯಲೋಭದಿಂ ದರ್ಣವವ ದಾಂಟಿಬರೆ
ನಿಖಿಲರಾಜ್ಯವನಿತ್ತ ಧಾತೆ ನೀನು |
ಭೋದಕರ ಭೇದಬುದ್ಧಿಯ ನಳಿಸಿತತ್ವಮಂ
ಭೋಧಿಸಿದ ಭುವನವಿಖ್ಯಾತೆ ನೀನು |
ಹಿಂಸಕರ ಹಿಂಸೆಯನು ಸಹಿಪಸಹಕಾರವನು
ದರ್ಶಿಸಿದ ಶಾಂತಮಯಸ್ವಾಂತೆ ನೀನು ||

ನಿನ್ನಮಹಿಮೆಯತೋರೆ ತಿಲಕ ಗಾಂಧೀ
ಮುಖ್ಯರಹ ದೇಶವತ್ಸಲರೆ ಸಾಕು |
ಇಂತುಮೆರೆವೀಧಾತ್ರಿ ಯಖಿಲಜಗಕೆಲ್ಲ
ಎಂತುಟೆನಿಸಲೊ ರಾಣಿ ಆರ್ಯಧಾನಿ ||

"ಭಾರತೀಸುತ"

---

## ಒಂದು ಭ್ರಮರದ ದುರ್ದಶೆ.

ರಾತ್ರಿ ಪೋದಪುದಂತೆ ಬೆಳಗರಿವು ದಿನನ
ಉದಯದಿಂದೀತಿಮಿರ ಚಯಮಳಿವುದೆಂದು |
ಹರುಷದಿರೆ ಕಮಲ ಮುಕುಳವನೇರ್ದಭ್ರಮರ
ಮಕಟಕಟ ತಕ್ಕ ಮುಖವೊಂದು ಮದಗಜಕೆ - ಕಬಳನೆನಿಸಿದುದು ||

"ಮಲ್ಲಿಗೆ"

---

# ಅರಿಕೆ

ಇಂದಿಗೆ ಸರಸ್ವತಿಯ ನೂತನವರ್ಷದ ಆರು ಸಂಚಿಕೆಗಳು ಪೂರ್ತಿಗೊಂಡವು. ಸಾಕಾದಷ್ಟು ಪ್ರೋತ್ಸಾಹದ ಮಾತು ಹಾಗಿರಲಿ, ಮುದ್ರಣ ಕಾರ್ಯವು ಸುಸೂತ್ರವಾಗಿ ನಡೆಯುವುದಕ್ಕೆ ಬೇಕಾದಷ್ಟು ಜನ ಚಂದಾದಾರರು ದೊರಕದೆ ಸರಸ್ವತಿಯ ಆರ್ಥಿಕಪರಿಸ್ಥಿತಿಯು ಬಹಳ ಶೋಚನೀಯಾವಸ್ಥೆಯಲ್ಲಿದೆ. ಈ ವಿಷಯದಲ್ಲಿ 'ಸರಸ್ವತಿ'ಯಮೇಲೆ ಅಭಿಮಾನವಿಟ್ಟ ಚಂದಾದಾರರು ಪ್ರತಿಯೊಬ್ಬರೂ ಒಬ್ಬೊಬ್ಬ ನೂತನ ಚಂದಾದಾರರನ್ನು ಒದಗಿ ಕೊಡಲು ಒಮ್ಮನಸ್ಸಿನಿಂದ ಪ್ರಯತ್ನಮಾಡಿದರೆ ಈ ಲೋಪವೂ ಹೋಗಿ "ಸರಸ್ವತಿ"ಯು ಸುಂದರರೂಪವನ್ನು ತಾಳಿ ಸಕಾಲಕ್ಕೆ ಮಾತೃಭಾಷೆಯ ಸೇವೆಗೊದಗಲು ಶಕ್ತಳಾಗುವಳು.

ಸರಸ್ವತಿಯು ಪುರುಷಪ್ರಯತ್ನವಲ್ಲ. ಸ್ತ್ರೀಯರಿಗೋಸುಗ ಸ್ತ್ರೀಯರಿಗೆ ಉಪಯುಕ್ತವಾದ ಲೇಖನಗಳಿಂದಕೂಡಿ ಸ್ತ್ರೀಸಮಾಜದ ಸೇವೆಯಲ್ಲಿ ತನುವನ್ನು ತೇಯ್ದಿಡಬೇಕೆಂಬುದೇ ಅವರ ಮುಖ್ಯ ಧ್ಯೇಯ. ಇನ್ನು ಮುಂದೆ ಸ್ತ್ರೀಯೋಪಯುಕ್ತವೂ, ಸ್ತ್ರೀಯರ ಉನ್ನತಿಯನ್ನು ಕೋರಿ ಬರೆದಂಥವುಗಳೂ ಆದ ಲೇಖನಗಳಿಗೆ ಅದರಲ್ಲಿ ಹೆಚ್ಚಾಗಿ ಎಡೆಗೊಡಬೇಕೆಂದು ಯೋಚಿಸಿರುವೆವು. ಮುಂದಿನ ತಿಂಗಳಿಂದ ಕೇವಲ ಗೃಹಜೀವನಕ್ಕೆ ಸಂಬಂಧಪಟ್ಟ "ಮನೆತನದಮಾತುಗಳು" ಎಂಬ ಒಂದು ಹೊಸಭಾಗವು ಪ್ರಾರಂಭಿಸಲ್ಪಡುವುದು. "ಸರಸ್ವತಿ"ಯು ನಿಮಗೆ ಅಗ್ರಾಹ್ಯಳಾದರೂ, ನಿಮ್ಮ ಗೃಹಲಕ್ಷ್ಮಿಯರಿಗೂ ಅಕ್ಕ ತಂಗಿಯರಿಗೂ ಪ್ರಿಯಳಾಗಲಿ, ನಿಮಗೋಸುಗವಲ್ಲದಿದ್ದರೆ ಅವರಿಗೋಸುಗವಾದರೂ ನೀವು "ಸರಸ್ವತಿ"ಯನ್ನು ಆದರಿಸಲಿ ಎಂಬುದೇ ಅದರ ಮುಖ್ಯ ಉದ್ದೇಶ. ಹೇಗೂ ಕನ್ನಡನಾಡಿನ, ಕನ್ನಡಭಾಷೆಯ ಸೇವೆಗೆ ತನ್ನ ಪುಟ್ಟಕೈಯನ್ನು ಚಾಚಿ ನಿಂತ "ಸರಸ್ವತಿ"ಯು ನಿರಾಶಳಾಗದಂತೆ ನೋಡಿಕೊಳ್ಳುವುದು ನಿಮ್ಮಮೇಲೆ ಬಿದ್ದ ಭಾರ.

ಈ ಸಾರಿ "ಸರಸ್ವತಿ"ಯ ಐದು ಮತ್ತು ಆರನೆ ಸಂಚಿಕೆಗಳು ಒಟ್ಟಿಗೆ ತಮ್ಮ ಕೈಗಳನ್ನು ಸೇರುವುದಾದರೂ, ಒಂದೇ ರಕ್ಷಾಪತ್ರದಿಂದ ಬಂಧಿತವಾಗಿರುವುದೊಂದುಹೊರತು ಅದಾವವಿಧದಲ್ಲೂ ವ್ಯಂಗವಲ್ಲ. ಯಥಾರೀತಿಯಾಗಿ ಐವತ್ತುನಾಲ್ಕು ಪುಟಗಳೇ ಕೊಡಲ್ಪಟ್ಟಿವೆ. ಓದಿಗರು ಇದನ್ನು ಕುಂದಾಗೆಣಿಸದೆ "ಸರಸ್ವತಿ"ಯ ಪ್ರಕೃತದ ಅಸಹಾಯಸ್ಥಿತಿಗೆ ಅವಳ ಭಾಷಾಸೇವೆಯ ಉತ್ಕಟೇಚ್ಛೆಯಿಂದುಂಟಾದ ಪರಿಣಾಮವೆಂದು ತಿಳಿದು ಮನ್ನಣೆಮಾಡಬೇಕಾಗಿ ಕೋರಿಕೆ.

---

# ಜೀವಮಾನದ ನಿಜಸ್ಥಿತಿ



(ಒಂದು ಚಿಕ್ಕ ಕಥೆ)

---

ಅನೇಕ ಸಹಸ್ರವರ್ಷಗಳ ಕೆಳಗೆ ಅಂಗದೇಶದಲ್ಲಿ ಆರ್ಯಮಿತ್ರನೆಂಬ ಅರಸನು ಪ್ರಜೆಗಳ ಸುಖವೇ ತನ್ನ ಸುಖವೆಂದೂ ಅವರ ಕಷ್ಟವೇ ತನ್ನ ಕಷ್ಟವೆಂದೂ ತಿಳಿದು ನೀತಿ ತಪ್ಪದೆ ಪ್ರಜಾವಾತ್ಸಲ್ಯದಿಂದ ರಾಜ್ಯವಾಳುತ್ತಿದ್ದನು.

ಪ್ರವಾಹವೂ ಮೃಗಪಕ್ಷಿಗಳೂ ಗಣಿಕೆಯರ ಮನಸ್ಸೂ ಚಂಚಲಗೊಳ್ಳದಷ್ಟು ನೀತಿಯಿಂದ ರಾಜ್ಯವಾಳುತಿದ್ದ ಅರಸನಿಗೂ ಅಕಾಲಮೃತ್ಯುವು ಒದಗುವ ಸಂಭವ ವುಂಟಾಯಿತು. ಬೇಟೆಗೆ ಹೋಗಿ ಬಾಯಾರಿಕೆಯಿಂದ ಬಳಲಿರುವಾಗ ತಣ್ಣೀರನ್ನು ಕುಡಿದದ್ದರಿಂದ ಜ್ವರ ಬಂದು ಹಾಸಿಗೆಹಿಡಿದು ಮಲಗಿಬಿಟ್ಟನು. ದಿನ ದಿನಕ್ಕೂ ರೋಗವು ತೀವ್ರವಾಯಿತು. ಇಂದು ಅರಮನೆಯ ಬಾಗಿಲಿನಲ್ಲಿ ಎಳ್ಳು ಹಾಕಿದರೆಕೂಡ ಕೆಳಗೆ ಬೀಳಲು ಸ್ಥಳವಿಲ್ಲದಷ್ಟು ಜನಗಳು ಖಿನ್ನವದನರಾಗಿ ಅರಸನ ದೇಹಸ್ಥಿತಿಯ ವಿಷಯವನ್ನರಿಯಲು ಕುತೂಹಲರಾಗಿ ನಿಂತಿದ್ದರು. ಅರಸನು ಮಲಗಿದ್ದ ಕೊಠಡಿಯಲ್ಲಿ ಅಶ್ವಿನೀದೇವತೆಗಳಿಗೆ ಸಮರಾದ ವೈದ್ಯರಿಬ್ಬರು ಚಿಕಿತ್ಸೆಗೆ ಸಿದ್ಧರಾಗಿದ್ದರು. ರಾಜನ ಪಟ್ಟಮಹಿಷಿಯು ತೆರೆಯ ಮರೆಯಲ್ಲಿ ಕಣ್ಣೀರುಸುರಿಸುತ್ತ ಕುಳಿತಿದ್ದಳು. ಮಂತ್ರಿಯೇ ಮುಂತಾದ ಪ್ರಧಾನ ಉದ್ಯೋಗಸ್ಥರು ಒಂದುಕಡೆ ಗುಂಪಾಗಿ ನಿಂತಿದ್ದರು. ಅರಸನು ಜ್ಞಾನಶೂನ್ಯನಾಗಿ ಹಾಸಿಗೆಯಮೇಲೆ ನರಳುತ್ತ ಬಿದ್ದಿದ್ದನು. ವೃದ್ಧನ ಯಾತಾಯಾತದಂತೆ ಶ್ವಾಸವು ಮಾತ್ರ ನಿಧಾನವಾಗಿ ನಿರ್ಗಮಾಕಾಂಕ್ಷಿಯಾಗಿ ಬರುತಿದ್ದಿತು. ಜನರು ಕಾವಲುಗಾರರ ತಡೆಯನ್ನತಿಕ್ರಮಿಸಿ ಅರಸನು ಮಲಗಿದ್ದ ಕೊಠಡಿಯನ್ನು ಪ್ರವೇಶಿಸಿ ಸದ್ದಿಲ್ಲದೆ ಅರಸನನ್ನು ನೋಡಿಕೊಂಡು ಹೋಗುತ್ತಿದ್ದರು. ಆದರಿಂದು ಅರಸನೆಲ್ಲಿ? ಜನರು ಬಂದುಹೋಗುವುದರಿಂದಾಗುವ ಶಬ್ದದಿಂದ ಎಚ್ಚತ್ತನೇ? ಇಲ್ಲ. ಪ್ರಕಾಶವಾಗಿ ಉರಿಯುತ್ತಿರುವ ದೀಪದ ಜ್ಯೋತಿಯು ಅವನನ್ನೆಚ್ಚರಗೊಳಿಸಿತೇ? ಇಲ್ಲ. ರಾಜಾಂಗಣವನ್ನು ತುಳಿಯಲುಕೂಡ ಅನರ್ಹರಾದ ಅನೇಕರು ತನ್ನ ಕೊಠಡಿಯನ್ನು ಪ್ರವೇಶಿಸುವುದನ್ನಾದರೂ ಅರಿತನೇ? ಇಲ್ಲ. ಅವನ ಪಂಚೇಂದ್ರಿಯಗಳು ತಮ್ಮ ತಮ್ಮ ಕಾರ್ಯದಿಂದ ಕ್ರಮೇಣ ನಿವೃತ್ತಿಹೊಂದುತ್ತಿದ್ದವು. ಕಣ್ಣು

ಗಳು ದೃಷ್ಟಿಹೀನವಾದವು. ಬಾಯಿಯು ಮುಚ್ಚಿತು. ಹೃದಯದ ಶಬ್ದವು ಅಡಗಿತು. ಸ್ವಲ್ಪಹೊತ್ತಿಗೆಲ್ಲಾ ಶವವಿದ್ದ ಕೊಠಡಿಯು ನಿರ್ಮಾನುಷ್ಯವಾಯಿತು.

ಅರಸನಿಗೆ ಜ್ಞಾನೋದಯವಾದಾಗ ಎಲ್ಲೆಲ್ಲಿಯೂ ನಿಶ್ಶಬ್ದ. ಕಣ್ಣುತೆರೆದು ನೋಡಿದನು. ಐದಾರುದೀಪಗಳು ಪ್ರಕಾಶವಾಗಿ ಉರಿಯುತಿದ್ದವು. ಅವನ ಮುಖಹೊರ್ತು ಉಳಿದ ಭಾಗವೆಲ್ಲವೂ ರೇಷ್ಮೆ ವಸ್ತ್ರದಿಂದ ಮುಚ್ಚಲ್ಪಟ್ಟಿದ್ದಿತು. ಪುಷ್ಪಹಾರಗಳು ಸರಸರವಾಗಿ ಮಂಚದಮೇಲೆಲ್ಲಾ ಹಾಕಲ್ಪಟ್ಟಿದ್ದವು. ವಾಸನಾದ್ರವ್ಯಗಳ ಸುಗಂಧದಿಂದ ಅಂಗಣವು ನಿಬಿಡವಾಗಿತ್ತು. ಪ್ರಸುಪ್ತ ಪಾರಾವತದ ನಿಟ್ಟುಸಿರಿನಂತೆ ಅತಿಕಷ್ಟದಿಂದ ಪ್ರಯತ್ನಪುರಸ್ಸರವಾಗಿ ಪುಷ್ಪಭರದಿಂದ ಜಡಿತವಾದ ತಂಗಾಳಿಯು ಬೀಸುತ್ತಿತ್ತು. ಸ್ವಲ್ಪದೂರದಲ್ಲಿ ಆರು ಜನ ಸಿಪಾಯಿಗಳು ಕೈಯಲ್ಲಿ ಧರಿಸಿದ ಆಯುಧದೊಡನೆ ಮಲಗಿ ನಿದ್ರಿಸುತಿದ್ದರು. ರಾತ್ರಿಯ ಶಾಂತಿಮಯವಾದ ಈ ನಿಸ್ತಬ್ಧತೆಯ ಸುಂದರತೆಯಿಂದ ಮುಗ್ಧನಾಗಿ ಅರಸನು ಮುಹೂರ್ತಕಾಲ ಹಾಗೆಯೇ ಮಲಗಿದ್ದನು. ಆಗ ಅರಮನೆಯ ಹೊರಗೆ ಕಾವಲಿನವರು ಅರ್ಧರಾತ್ರಿಗೆ ಇನ್ನೂ ಒಂದು ಜಾಮುವಿರುವುದಾಗಿ ಹೇಳಿದ್ದು ತನ್ನ ಕಿವಿಗೆ ಬೀಳುತ್ತಲೂ ಅರಸನು ಮಂಚದಮೇಲೆ ಮೆಲ್ಲಗೆ ಎದ್ದು ಕುಳಿತನು. ಕೂಡಲೇ ಅವನಿಗೆ ಮಹತ್ತಾದ ದುಃಖವಾಯಿತು. ತನ್ನ ಜೀವನವು ಎಷ್ಟೊಂದು ನಿರರ್ಥಕ! ಕಟ್ಟಲು ಪ್ರಾರಂಭಿಸಿದ ದೇವಾಲಯಗಳೊಂದೂ ಕಟ್ಟಿ ಪೂರೈಸದೆ ಅರ್ಧರ್ಧವಾಗಿದ್ದವು. ರಾಜ್ಯಾಡಳಿತದಲ್ಲಿ ಮಾಡಬೇಕಾದ ಕಾರ್ಯಗಳೂ, ತಿದ್ದುಪಾಡುಗಳೂ ಎಷ್ಟೋ ಇದ್ದವು. ಮಾಡಬೇಕಾಗಿದ್ದ ದಾನಧರ್ಮಗಳೊಂದೂ ಪೂರ್ತಿಯಾಗಲಿಲ್ಲ. ತನ್ನನೇ ನಂಬಿದ್ದ ಅನೇಕ ಕುಟುಂಬಗಳು ಹಾಳಾಗಿಹೋಗುವವು. ಈ ಯೋಚನೆಗಳೆಲ್ಲವೂ ಅವನಿಗತ್ಯಂತ ದುಃಖವನ್ನುಂಟುಮಾಡಿದವು. ಆದುದರಿಂದ ಅವನು ಕೈಗಳೆರಡನ್ನೂ ಜೋಡಿಸಿ ಗದ್ಗದ ಸ್ವರದಿಂದ, "ಜಗದೀಶ್ವರಾ! ನನ್ನ ಜೀವಮಾನವನ್ನು ಈರೀತಿ ಕುಗ್ಗಿಸಬೇಕೇ? ನನ್ನ ಪ್ರಜೆಗಳ ಸೌಖ್ಯಕ್ಕಾಗಿ ಮಾಡಬೇಕಾದ ಕಾರ್ಯಗಳೆಷ್ಟೋ ಮಾಡಲ್ಪಡದೆ ಅರ್ಧವಾಗಿ ಉಳಿದಿರುವುದು ನಿನ್ನ ಕಣ್ಣಿಗೆ ಕಾಣಲಿಲ್ಲವೇ" ಎಂದು ಪ್ರಾರ್ಥಿಸಿದನು. ಆ ಸಮಯದಲ್ಲಿ "ಅರಸನೇ! ನಿನ್ನ ಮರಣವು ಸಂಭವಿಸಿದ್ದಾಯಿತು. ಆದರೂ ನೀನು ಪ್ರಾರ್ಥಿಸಿದ್ದರಿಂದ ನಿನಗೆ ಒಂದು ಮುಹೂರ್ತಕಾಲಮಾತ್ರ ಅವಕಾಶ ಕೊಡುತ್ತೇನೆ. ಅಷ್ಟರಲ್ಲಿ ನೀನು ಜೀವಿಸಿರಬೇಕೆಂದಪೇಕ್ಷಿಸುವ ಮೂರು ಜನರನ್ನು ಕಂಡರೆ ನಿನ್ನ ಆಯುಸ್ಸನ್ನು ಹೆಚ್ಚಿಸುವುದರಲ್ಲಿ ಸಂದೇಹವಿಲ್ಲ" ಎಂದು ಅಶರೀರವಾಕ್ಕುಂಟಾಯಿತು.

ಈ ವಾಕ್ಯವನ್ನು ಕೇಳಿದ ಅರಸನಿಗೆ ಎರಡು ವಿಧದಲ್ಲಿ ಸಂತೋಷವುಂಟಾಯಿತು. ತನ್ನ ಮೊರೆಯನ್ನು ಭಗವಂತನು ಕೇಳಿದನೆನ್ನುವುದೊಂದು, ಪ್ರಜೆಗಳ ಕ್ಷೇಮವೇ ತನ್ನ ಕ್ಷೇಮವೆಂದು ಭಾವಿಸಿರುವ ತನಗೆ, ತಾನು ಜೀವಿಸಿರಬೇಕೆಂಥ

ಪೇಕ್ಷಿಸುವ ಮೂವರು ದೊರೆಯಲಾರರೇ'' ಎನ್ನುವುದೊಂದು. ತನಗೆ ಭಗವಂತನಿಂದ ಕೊಡಲ್ಪಟ್ಟಿರುವ ಮುಹೂರ್ತಕಾಲವನ್ನು ವ್ಯರ್ಥಚಿಂತೆಯಲ್ಲಿ ಕಳೆಯಬಾರದೆಂದು ನೆನೆದು, ದಿಂಬುಗಳನ್ನು ಮನುಷ್ಯನಂತೆ ಜೋಡಿಸಿ ಮೇಲೆ ಶಾಲನ್ನು ಮುಚ್ಚಿ ಕೊಠಡಿಯಿಂದ ಹೊರಟನು.

ಅರಮನೆಯ ಬಾಗಿಲಿಗೆ ಬಂದಕೂಡಲೇ ಮೊದಲು ಎಲ್ಲಿಹೋಗುವುದೆನ್ನುವ ಯೋಚನೆಯುಂಟಾಯಿತು. '' ಪ್ರಾಣನಾಥ ! ಪ್ರಾಣಪ್ರಿಯ ! '' ಎಂದು ಪ್ರತಿನಿಮಿಷದಲ್ಲಿಯೂ ತನ್ನನ್ನೇ ಕುರಿತು ಹಂಬಲಿಸುತ್ತಿರುವ ತನ್ನ ಪ್ರಾಣಕಾಂತೆಯ ಬಳಿಗೆ ಹೋಗೋಣವೆಂದು ಯೋಚಿಸಿದನು. ಆದರೆ ಅವಳು ಈಗ ದುಃಖಪೀಡಿತಳಾಗಿರುವುದರಿಂದ ಅಲ್ಲಿ ಹೋಗುವುದು ಉಚಿತವಲ್ಲವೆಂದು ಯೋಚಿಸಿ ಬೇರೇಮಾರ್ಗವಾಗಿ ಹೊರಟನು. ಚಂದ್ರಿಕೆಯ ಬೆಳಕಿನಲ್ಲಿ ಪಟ್ಟಣವೆಲ್ಲವೂ ಅತಿಮನೋಹರವಾಗಿ ಕಾಣಿಸಿತು. ''ನನ್ನಿಂದುಪಕೃತರಾಗಿರುವ ಲಕ್ಷೋಪಲಕ್ಷಜನರಲ್ಲಿ ನನಗಾಗಿ ಪ್ರಾಣತ್ಯಾಗಮಾಡುವವರು ಮೂವರಿಲ್ಲವೇ ! ಮೂವರೇಕೆ ? ಮೂರುಸಾವಿರ ಜನರು ತಾನು ತಾನೆಂದು ನನಗಾಗಿ ಪ್ರಾಣವನ್ನು ಕೊಡಲು ಮುಂದಾಗುವುರು'' ಎಂದು ಯೋಚಿಸುತ್ತಾಬರುವಾಗ ಅರಮನೆಯ ಬಾಗಿಲನಲ್ಲಿ ಕುಳಿತು ಅಳುತಿದ್ದ ಮಗುವೊಂದನ್ನು ಕಂಡನು. ಅಲ್ಲಿ ಕಾವಲು ಕಾಯುತಿದ್ದ ಸಿಪಾಯಿಯು ಅಳುತಿದ್ದ ಮಗುವಿನ ಸಮಾಪಕ್ಕೆ ಬಂದು ''ಮಗೂ ! ಅಳುತ್ತೀಯೇಕೆ?'' ಎಂದು ಕೇಳಿದನು. ಆದಕ್ಕಾ ಮಗುವು, ''ನನ್ನ ಅಮ್ಮನೂ ಅಪ್ಪನೂ ಅರಮನೆಗೆ ಹೋಗಿದಾರೆ. ಅರಸನ್ನ ಸತ್ತುಹೋದನಂತೆ. ಹೋದವರು ಇನ್ನೂ ಹಿಂತಿರುಗಿಬರಲಿಲ್ಲ. ನನಗೆ ಹಸಿವಾಗುತ್ತಿದೆ, ನಿದ್ರೆ ಬರುತ್ತಿದೆ, ಅಯ್ಯೋ ! ಅರಸನು ಬದುಕಿರಬಾರದಾಗಿತ್ತೇ'' ಎಂದಿತು. ಇದನ್ನು ಕೇಳಿದ ಅರಸನಿಗ ಅತ್ಯಾನಂದವುಂಟಾಯಿತು. ತನ್ನ ಪ್ರಜೆಗಳ ಹೈಕ ತಾನು ಜೀವಿಸಬೇಕೆಂದಪೇಕ್ಷಿಸುವರೊಬ್ಬರನ್ನು ಕಂಡವನಲ್ಲವೇ ! ಆರ್ಯಮಿತ್ರನಿಗೆ ಮಕ್ಕಳಿಲ್ಲ. ಹಸಿವಿನಿಂದಳುತ್ತಿರುವ ಮಗುವಿಗ ಏನಾದರೂ ತಿಂಡಿಯನ್ನು ತಂದುಕೊಡಬೇಕೆಂದಪೇಕ್ಷಿಸಿದರೂ ತನಗೆ ಕೊಡಲ್ಪಟ್ಟಿದ್ದ ಅವಕಾಶದಲ್ಲಿ ಕಾಲುಮುಹೂರ್ತವು ಕಳೆದುಹೋದದರಿಂದ ಅಲ್ಲಿ ಹೆಚ್ಚು ಕಾಲಹರಣಮಾಡಲಿಷ್ಟವಿಲ್ಲದೆ ತನ್ನ ಮಿತ್ರನಾದ ಅಗ್ನಿಮಿತ್ರನಗೃಹಕ್ಕೆ ಹೊರಟನು. ದಾರಿಯಲ್ಲಿ 'ಅಯ್ಯೋ ! ಪಾಪ ! ಅಗ್ನಿಮಿತ್ರನು ನನಗಾಗಿ ಬಹಳ ದುಃಖಿಸುವನೆನ್ನುವುದರಲ್ಲಿ ಯಾವ ಸಂಶಯವೂ ಇಲ್ಲ. ನನಗೆ ಮೊದಲು ಅವನು ಸತ್ತುಹೋಗಿದ್ದ ಪಕ್ಷದಲ್ಲಿ ಆ ವಿಯೋಗದುಃಖವನ್ನು ನಾನು ಸಹಿಸುತ್ತಲೇ ಇರಲಿಲ್ಲ' ಎಂದು ಮನೋರಾಜ್ಯಮಾಡುತ್ತಾ ಹೋಗುತಿದ್ದನು.

ಅರಸನು ಅಗ್ನಿಮಿತ್ರನ ಮನೆಯನ್ನು ಪ್ರವೇಶಿಸುತ್ತಲೂ ಅಲ್ಲಿ ಆಳುಗಳು ದೀಪಗಳನ್ನು ಹಿಡಿದುಕೊಂಡು ಸಾಮಾನುಗಳನ್ನು ಬಂಡಿಗಳಿಗೆ ಹೇರುವುದನ್ನು

ಕರೆದನು. ಎಲ್ಲೆಲ್ಲಿ ಹುಡುಕಿದರೂ ಅಗ್ನಿಮಿತ್ರನು ಕಾಣಿಸಲಿಲ್ಲ. ಅರಸನಿಗೆ "ಒಂದು ವೇಳೆ ನನ್ನನ್ನಗಲಿದ ದುಃಖದಿಂದ ಮರಣಹೊಂದಿರಬಹುದೋ ಏನೋ" ಎಂದು ಸಂಶಯುವಾಯಿತು. ಎಲ್ಲೆಡೆಯಲ್ಲಿಯೂ ಹುಡುಕಿ ಕೊನೆಗೆ ಅಗ್ನಿಮಿತ್ರನ ಅಧ್ಯಯನಶಾಲೆಯನ್ನು ಪ್ರವೇಶಿಸಿದನು. ಆ ಕೊಠಡಿಯಿದ್ದ ಸ್ಥಿತಿಯನ್ನು ನೋಡಿದರೆ ಆಗತಾನೇ ಅಗ್ನಿಮಿತ್ರನು ಕೊಠಡಿಯನ್ನು ಬಿಟ್ಟು ಹೋಗಿರಬಹುದಾಗಿ ಕಂಡು ಬಂದಿತು. ದೀಪದ ಕೆಳಗೆ ಅರ್ಧ ಸುಟ್ಟುಹೋಗಿದ್ದ ಕಾಗದದ ಚೂರೊಂದು ಬಿದ್ದಿತ್ತು. ಅದು ತನ್ನ ಸ್ವಂತ ಕೈಬರಹವಾಗಿದ್ದುದರಿಂದ ಅರಸನು ಅದನ್ನು ತೆಗೆದು ಓದಲು ಪ್ರಜಾಸೌಖ್ಯಕ್ಕಾಗಿ ತಾನು ಮಾಡಬೇಕೆಂದಿದ್ದ ಕಾರ್ಯವಿವರವೊಂದು ಅದರಲ್ಲಿ ಬರೆಯಲ್ಪಟ್ಟಿದ್ದಿತು. ತಾನು ಮಾಡಲೆಳಸಿದ್ದ ಕಾರ್ಯವು ಈ ರೀತಿ ಹಾಳಾಗಿ ಹೋಗುವುದನ್ನು ಕಂಡು ವ್ಯಥೆಗೊಂಡ ಅರಸನು ಆ ಕಾಗದದ ಚೂರನ್ನು ಕೆಳಗೆ ಬಿಸಾಟನು. ಕೂಡಲೇ ಇಬ್ಬರು ಆ ಕೊಠಡಿಯನ್ನು ಪ್ರವೇಶಿಸಿ ಒಬ್ಬರಿಗೊಬ್ಬರು ಈ ರೀತಿ ಮಾತನಾಡ ತೊಡಗಿದರು.—

ಒಬ್ಬ:—ಅಗ್ನಿಮಿತ್ರನೆಲ್ಲಿ?

ಮತ್ತೊಬ್ಬ:—ಹೊಸರಾಜನ ಭೇಟಿಗೆ ಹೋಗಿದಾನೆ; ಈಗ ನಾವೆಲ್ಲರೂ ಒಹಳ ತೊಂದರೆಗೆ ಸಿಕ್ಕಿದೇವೆ. ಹೊಸರಾಜರಿಗೆ ಹಳೇರಾಜರ ಏರ್ಪಾಡೊಂದೂ ಸರಿಬೀಳದು.

ಒಬ್ಬ:—ಅಗ್ನಿಮಿತ್ರನು ಹಳೆಯರಸನ ಆಪ್ತಮಿತ್ರನಾದುದರಿಂದ ಅವನನ್ನು ಕಂಡರೆ ಹೊಸ ಅರಸನಿಗೆ ಆಗುವುದಿಲ್ಲ. ಆದುದರಿಂದ ಸ್ವಲ್ಪ ಮುಂಚೆಯೇ ಹೋಗಿ ಅವನಿಗೇನಾದರೂ ಸಮಾಧಾನ ಹೇಳೋಣವೆಂದು ಹೋಗಿರಬಹುದು; ನಾವೆಲ್ಲರೂ ಸಮಯಕ್ಕೆ ತಕ್ಕ ವೇಷ ಹಾಕುವರೇ ಅಲ್ಲವೇ?

ಮತ್ತೊಬ್ಬ:—ಹೌದು, ನಿಶ್ಚಯ. ಅಗ್ನಿಮಿತ್ರನು ಮಾಡುವ ಕೆಲಸವು ನ್ಯಾಯವಾದದ್ದೇ, ನಾನೂ ಹೇಳುತ್ತೇನೆ. ಹಳೆಯ ರಾಜನಿಗೆ ಸ್ವಲ್ಪವಾದರೂ ತಾರತಮ್ಯವೇ ತಿಳಿಯುವುದಿಲ್ಲ. ವಂಗರಾಜನೊಡನೆ ಯುದ್ಧಮಾಡೋಣವೆಂದು ಹೇಳಿದೆ. ಕೂಡದೆಂದು ಹೇಳಿಬಿಟ್ಟರು. ಯುದ್ಧಕ್ಕೆ ಹೋಗಿದ್ದರೆ ನಮಗೆ ಮೂರು-ನಾಲು ವರ್ಷಗಳಿಗಾಗುವಷ್ಟು ದ್ರವ್ಯವು ದೊರೆಯುತಿತ್ತು. ನಾವೆಲ್ಲರೂ ಕುಬೇರರಾಗುತಿದ್ದೆವು. ಬಲಿಷ್ಠರು ಬಲಹೀನರೊಡನೆ ಯುದ್ಧಮಾಡಕೂಡದೆನ್ನುವುದು ಅವನ ನ್ಯಾಯ. ಈಗ ಬಲಿಷ್ಠರಿಗಲ್ಲವೇ ಕಾಲ. ಈ ರೀತಿ ಮಾತನಾಡುತಿದ್ದವರು ಅರಮನೆಯ ದಳಕರ್ತನೂ ಕೊತ್ತವಾಲನೂ ಅಲ್ಲದೆಬೇರಿಲ್ಲ. ಇವರ ಸಂಭಾಷಣೆಯನ್ನು ಕೇಳಿ ದುಃಖಿತನಾದ ಅರಸನು ಹೊರಹೊರಟುಹೋಗುತ್ತಾ, "ಉದ್ಯೋಗವಿಷಯದಲ್ಲಿ

ನನ್ನಿಂದ ಶಿಕ್ಷಿಸಲ್ಪಟ್ಟಿರುವ ಇವರೀ ರೀತಿ ಮಾತನಾಡಿಕೊಳ್ಳುವುದರಲ್ಲೇನಾಶ್ಚರ್ಯ! ನನ್ನ ಪ್ರಜೆಗಳು ಎಂದೂ ನನ್ನಲ್ಲಿ ಪೂರ್ಣ ವಿಶ್ವಾಸವುಳ್ಳವರೇ'' ಎಂದಂದುಕೊಂಡನು.

ಸಾಧಾರಣವಾಗಿ ಸಂತೆಯಾಗುವಕಡೆ ಜನರು ರಾತ್ರೀ ಹಗಲೂ ಗುಂಪುಗೂಡಿರುವರಾದ್ದರಿಂದ ಆರ್ಯಮಿತ್ರನು ಅಲ್ಲಿಗೆ ಹೋದನು. ಅವನು ಊಹಿಸಿದಂತೆಯೇ ಆಸ್ಥಳದಲ್ಲಿ ನಾಲ್ಕೈದು ಜನರೊಂದುಗೂಡಿ ಜೂಜಾಡುತ್ತಿದ್ದರು. ಅವರ ಸಂಭಾಷಣೆಯನ್ನು ಕೇಳಬೇಕೆಂದು ಅರಸನು ಅಲ್ಲಿಯೇ ನಿಂತನು. ''ಪ್ರಾರಬ್ಧವು ತೊಲಗಿತು. ಧಾರಾಳವಾಗಿ ದುಡ್ಡು ಖರ್ಚುಮಾಡದ ಅರಸನಿದ್ದರೇನು? ಇಲ್ಲದಿದ್ದರೇನು? ಹೊಸ ಅರಸನಿದ್ದಾನಲ್ಲಾ ಭಲೇ! ಷೋಕ್! ಆಸಾಮಿ'' ಎಂದೊಬ್ಬನು ಹೇಳಲು ಅದಕ್ಕೆ ಮತ್ತೊಬ್ಬನು ''ಹೌದಪ್ಪಾ! ಇವನಿಗೆ ಯಾವಾಗಲೂ ಸಂದುಗೊಂದುಗಳೆಲ್ಲಾ ಅಲೆದಲೆದು ಎಲ್ಲೆಲ್ಲಿ ಏನೇನು ನಡೆಯುತ್ತದೆನ್ನುವುದನ್ನು ತಿಳಿಯುವುದೇ ಕೆಲಸ. ದೊರೆಯಾದಮೇಲೆ ಗೌರವಕ್ಕೂ ಪದವಿಗೂ ತಕ್ಕಂತೆ ಅರಮನೆಯಲ್ಲೇ ಇರಬೇಕಲ್ಲವೇ?'' ಎಂದನು. ಇನ್ನೊಬ್ಬನು, ''ಏನಪ್ಪಾ! ಅದು, ಈ ಅರಸನ ಕಾಲದಲ್ಲಿ ಆಟವುಂಟೇ! ಪಾಟವುಂಟೇ! ವಿನೋದವುಂಟೇ! ಇವುಗಳನ್ನು ನೋಡುವುದೆಂದಿಗೆ?'' ಎನ್ನಿಸಿಬಿಟ್ಟಿದೆ ಎಂದು ಮತ್ತೊಬ್ಬನು, 'ಮರಣದಂಡನೆಯನ್ನೇ ಸಂಪೂರ್ಣವಾಗಿ ನಿಲ್ಲಿಸಬೇಕೆಂದು ಆಜ್ಞಾಪಿಸಿರುವನಂತೆ. ಹಾಗಾದರೆ, ಕಾರಾಗೃಹದಲ್ಲಿರುವ ಖೈದಿಗಳಿಂದೆಲ್ಲಕೆಲಸವನ್ನೂ ಮಾಡಿಸಬೇಕೆಂದಿರುವನೋ ಏನೋ! ಪ್ರಭುಚಿತ್ತವನ್ನರಿತವರ್ಯಾರು?' ಎಂದನು. ಅರಸನಿಗಿವರಮಾತು ರುಚಿಸಲಿಲ್ಲ ಯಾರಿಗಾಗಿ ತನ್ನ ತನು ಮನ ಧನಗಳನ್ನು ಧಾರೆಯೆರದನೋ ಅವರೇ ತಾನುಮಾಡಿದ ಉಪಕಾರವನ್ನು ಸ್ಮರಿಸದಿರುವಲ್ಲಿ ಈ ದುರಾಚಾರಿಗಳ ಮಾತೇನು? ಇಷ್ಟರಲ್ಲೇ ಅರ್ಧಮುಹೂರ್ತವು ಕಳೆದುಹೋಯಿತು. ಆಪ್ತರ ಹಿತವಾಕ್ಯಗಳಿಗಿಂತ ಶತ್ರುಗಳ ದೂಷಣೆಯೇ ಮೇಲೆಂದು ತಿಳಿದು ತನ್ನಿಂದ ಶಿಕ್ಷೆಗೆ ಗುರಿಯಾಗಿದ್ದ ಖೈದಿಗಳ ಕಾರಾಗೃಹಕ್ಕೆ ಹೋದನು. ಅಲ್ಲಿ ಒಬ್ಬನೇ ಒಬ್ಬನು ತನ್ನ ಪ್ರಾಚೀನಕರ್ಮವನ್ನು ಕುರಿತು ಚಿಂತಿಸುತ್ತಾ ಆಕಾಶವನ್ನು ನೋಡುತ್ತ ಮಲಗಿದ್ದನು. ಆಗ ಸೆರೆಮನೆಯ ಅಧಿಕಾರಿಯು ಅಲ್ಲಿಗೆ ಬಂದು ಬಾಗಿಲು ತೆಗೆಯಲು ಆ ಶಬ್ದವನ್ನು ಕೇಳಿದ ಖೈದಿಯು ಅವನಕಡೆತಿರುಗಿ, 'ಏನು ಸ್ವಾಮೀ! ನಾಳೆಯದಿನವಲ್ಲವೇ ನನ್ನನ್ನು ಗಲ್ಲಿಗೆ ಹಾಕಬೇಕಾದದ್ದು. ಅಷ್ಟರೊಳಗೇ ಬಂದುಬಿಟ್ಟಿರಿ. ನಾನು ಅದಕ್ಕೂ ಹೆದರಲಿಲ್ಲ. ಸ್ವಲ್ಪ ಹೊತ್ತಾದನಂತರ ಹೋಗುವ ಪ್ರಾಣವು ಮುಂಚೆಯೇ ಹೋಗುವುದರಿಂದ ನಷ್ಟವೇನು? ನಾನು ಸಿದ್ಧನಾಗಿಯೇ ಇರುವೆನು. ನನಗೊಂದುಪಕಾರಮಾತ್ರಮಾಡಿ. ಇದೋ ಒಂದು ಕಾಗದವನ್ನು ಬರೆದಿಟ್ಟಿದೇನೆ. ಅದನ್ನು ನನ್ನ ಪತ್ನಿಗೆ ತಲುಪಿಸಿ' ಎಂದನು. ಅದಕ್ಕಾ ಕಾವಲವನು, 'ಅಂಥದೇನೂ ಇಲ್ಲ. ಮಹಾರಾಜರು ಮರಣಹೊಂದಿದರು. ಹೊಸ ಅರಸನು ಪಟ್ಟಕ್ಕೆ ಬರುವನು. ಅವರ ಅಭಿಪ್ರಾಯವೂ ನಿನ್ನ

ಅಭಿಪ್ರಾಯದಂತೆಯೇ ಆಗುವುದರಿಂದ ನಿನ್ನನ್ನು ಮನ್ನಿಸುವರು. ಯಾವನಿಮಿಷದಲ್ಲಿ ಮರಣಕ್ಕೆ ಸಿದ್ಧನಾಗಬೇಕಾಗಿತ್ತೋ ಆ ಕ್ಷಣದಲ್ಲಿಯೇ ಬಿಡುಗಡೆಹೊಂದಿದೆ ಎಂದನು. ಖೈದಿಯು ಆಶ್ಚರ್ಯ ಮತ್ತು ಗಾಬರಿಯಿಂದಕೂಡಿ ಮರಣಹೊಂದಿದರೇ ! ಎಂದನು. ‘ಹೌದು, ಮರಣಹೊಂದಿದರು’ ಎಂದು ಕಾವಲನ ಜೊತೆಯಲ್ಲಿ ಬಂದಿದ್ದ ಅಗ್ನಿಮಿತ್ರನು ಉತ್ತರಕೊಟ್ಟನು. ಆಗಲಾಖೈದಿಯು, ದುಃಖದಲ್ಲಿನ್ನ ಬೆವರನ್ನು ಒರೆಸಿಕೊಂಡು. ‘ಅಯ್ಯಾ ! ಅರಸನ ಮರಣವು ನನಗತ್ಯಂತ ದುಃಖವನ್ನುಂಟುಮಾಡಿದೆ. ಅರಸನಲ್ಲಿ ನನಗತ್ಯಂತವಿಶ್ವಾಸವು. ಅರಸನು ನನ್ನನ್ನು ಬಹಳವಾಗಿ ಪ್ರೀತಿಸುತಿದ್ದನು. ಏನೋ ಕಾಲವ್ಯತ್ಯಾಸದಿಂದ ನಾನು ಸೆರೆಯಾದೆನು. ಅದುಹೋಗಲಿ. ಪಾಪ ! ಚಿಕ್ಕವಯಸ್ಸಿನವಳಾದ ರಾಣಿಯು ಈ ದುಃಖವನ್ನು ಹೇಗೆ ಸಹಿಸಿಯಾಳು ? ಅಯ್ಯೋ ! ಪಾಪ ! ಮಹಾರಾಜನು ಬದುಕಿರಬಾರದೇ’ ಎಂದು ಪ್ರಲಾಪಿಸಿದನು.

ಖೈದಿಯಕಣ್ಣುಗಳಿಂದ ಅಶ್ರುಧಾರೆಯು ಸುರಿಯುತಿದ್ದಿತು. ಈ ದೃಶ್ಯವನ್ನು ಕಂಡು ಸಹಿಸಲಾರದೆ ಅರಸನು ಬೇರೊಂದುಕಡೆ ಹೋಗುವಷ್ಟರಲ್ಲಿಯೇ ಮುಕ್ಕಾಲುಮುಹೂರ್ತವು ಕಳೆದುಹೋಯಿತು. ಅರಸನಿಗೆ ದುಃಖವುಂಟಾಯಿತು. ಯಾರಿಗಾಗಿ ತಾನು ಪಾಡುಪಟ್ಟನೋ ಅವರು ಇವನನ್ನು ಲಕ್ಷ್ಯಮಾಡಲಿಲ್ಲ ಏನೂ ತಿಳಿಯದ ಚಿಕ್ಕಮಗುವೊಂದೂ, ತನ್ನಿಂದ ಶಿಕ್ಷಿಸಲ್ಪಟ್ಟ ಜನ್ಮಶತ್ರುವೊಬ್ಬನೂ ತನಗನುಕೂಲರಾಗಿದ್ದುದನ್ನು ಕಂಡು, ‘ನಾನೇಕೆ ಇಂತಹಕಾರ್ಯದಲ್ಲಿ ಪ್ರವೇಶಿಸಿದೆ’ ಎಂದು ಚಿಂತಿಸಿದನು. ದೈವಕಾರ್ಯಕ್ಕೆ ಯಾರೇನುಮಾಡಲುಸಾಧ್ಯ. ತನ್ನ ಒಳ್ಳೆಯ ಕಾಲಕ್ಕಾಗಿಯೇ ತನಗೆ ಅಕಾಲ ಮರಣವುಂಟಾಯಿತೆಂದು ಧೈರ್ಯಹೊಂದಿದನು. ಮರಣದಲ್ಲಿ ಅವನಿಗಿದ್ದ ಭೀತಿಯೂ ಉದಾಸೀನವೂ ನೀಗಿತಾದರೂ ಉಳಿದಿರುವ ಕಾಲುಮುಹೂರ್ತದಲ್ಲಿ ತನ್ನ ಪತ್ನಿಯನ್ನೂ ಶೋಧಿಸೋಣವೆಂದು ಹೊರಟನು.

ಅರಸನು ಅಂತಃಪುರವನ್ನು ಪ್ರವೇಶಿಸಿ ನೋಡುವಾಗ ಅವಳು ಮುಖವನ್ನು ಬಟ್ಟೆಯಿಂದ ಮರೆಮಾಡಿಕೊಂಡು ಕುಳಿತಿದ್ದಳು. ಎಲ್ಲಿನೋಡಿದರೂ ದುಃಖಸೂಚನೆಯೇ ತುಂಬಿದ್ದಿತು. ‘ಅಯ್ಯೋ ! ನನ್ನ ಪ್ರಾಣಪ್ರಿಯೆಯನ್ನು ಸಂತೈಸಲು ಒಬ್ಬರಾದರೂ ಅವಳ ಸಮೀಪದಲ್ಲಿಲ್ಲ; ಇದೆಂತಹ ಅನ್ಯಾಯ ? ’ ಎಂದು ಅರಸನು ಚಿಂತಿಸುತಿದ್ದ ಮರುಕ್ಷಣದಲ್ಲಿಯೇ ಆ ಕೊಠಡಿಯ ಗೋಡೆಯಲ್ಲಿದ್ದ ಕಳ್ಳದ್ವಾರವು ತೆರೆಯಲ್ಪಟ್ಟು ಆ ಮಾರ್ಗವಾಗಿ ಯುವಕನೊಬ್ಬನು ಬಂದನು. ಇದನ್ನು ಕಂಡು ಅರಸನು ಭ್ರಮಿಸಿದನು. ಈಗುಪ್ತದ್ವಾರವಿರುವವಿಷಯವು ತನಗೂ ತನ್ನಹೆಂಡತಿಗೂ ಮಾತ್ರವೇ ತಿಳಿದಿತ್ತು. ಮುಖವನ್ನು ಮುಚ್ಚಿಕೊಂಡಿದ್ದ ರಾಣಿಯು ಬಂದವನನ್ನು ಮೌನವಾಗಿರುವಂತೆ ಸಂಜ್ಞೆಮಾಡಿ, ‘ಇಲ್ಲಿ ಬರಲು ಇಷ್ಟುವಿಳಂಬವೇಕೆ ? ಪ್ರಾರಬ್ಧವು ತೊಲಗಿತಲ್ಲಾ ! ಇನ್ನು ನಮಗ್ಯಾರಭಯ ? ನಾವು ಸುಖವಾಗಿ ಕಾಲಕಳೆಯಬಹುದು’ ಎಂದಳು. ಈ ಪಾಪವಾಕ್ಯವನ್ನು ಕೇಳಿ ಅರಸನು ಕ್ಷಣಮಾತ್ರವೂ ಅಲ್ಲಿ

ನಿಲ್ಲದೆ ಹಿಂತಿರುಗಿಬಂದು ತನ್ನ ಮರಣಶಯ್ಯೆಯಲ್ಲಿ ಪವಡಿಸಿದನು. 'ದೈವ ಮಾಯೆಯೇ! ನಿನ್ನ ಕಾರ್ಯವನ್ನು ದೂಷಿಸುವ ಶಕ್ತಿಯು ಯಾರಿಗಿರುವುದು? ಈ ಒಂದು ಮುಹೂರ್ತಕಾಲಕೂಡ ನೀನು ನನ್ನ ಆಯುಸ್ಸನ್ನು ಹೆಚ್ಚಿಸದಿದ್ದರೆ ಚೆನ್ನಾಗಿರುತಿತ್ತು. ಕೋಟ್ಯಾನುಕೋಟಿ ಪ್ರಜೆಗಳಲ್ಲಿ ನನಗಾಗಿ ಅನುತಾಪಪಡುವವರು ಮೂವರಿಲ್ಲದೇಹೋದರಲ್ಲಾ! ಕೊನೆಯಲ್ಲಿ ಕಂಡ ದೃಶ್ಯವು ನಾನು ಕನಸಿನಲ್ಲಿಕೂಡ ಕಂಡಿರಲಿಲ್ಲ. ಇನ್ನೀಜೀವಿತವು ಸಾಕು' ಎಂದು ತನ್ನಷ್ಟಕ್ಕೆ ತಾನೇ ಹೇಳಿಕೊಂಡನು.

ಕೂಡಲೇ ಜಾಮವನ್ನು ಸೂಚಿಸುವವರು ಅರ್ಧರಾತ್ರಿಯಾಯಿತೆನ್ನುವುದನ್ನು ಸೂಚಿಸಿದರು. ಪಹರೆಕೊಡುತ್ತಿದ್ದ ಸಿಪಾಯಿಗಳು ಹಠಾತ್ತಾಗಿ ಎಚ್ಚತ್ತರು. ಹಾಸಿಗೆಯಲ್ಲಿ ಮೊದಲಿನಂತೆಯೇ ಅರಸನು ಮಲಗಿದ್ದನು. ಆದರೆ ಅವನ ಮುಖವು ಮಾತ್ರ ಬಹಳ ಭಯಂಕರವಾಗಿದ್ದಿತು.

ಮಹಾರಾಣಿಯು ಮತ್ತೊಂದುಸಲ ಶವವನ್ನು ಬಂದುನೋಡಲವಕಾಶಕೊಡಕೂಡದೆಂದು ಅವರು ತಮ್ಮತಮ್ಮಲ್ಲಿ ಮಾತನಾಡಿಕೊಂಡರು.

"ಯಾರಿಗೆ ಯಾರು?"

---

## ಸಿನೀಮಾ

ಕವಿಯಲ್ ಗಾಢಾಂಧಕಾರಂ ಚಲಿಪುದು ಸಿನಿಮಾಯಂತ್ರ ನಿರ್ಮುಕ್ತಮಾದೀ |
ವಿವಿಧ ಸ್ತ್ರೀಪುಂ ಪುರಾದಿ ಪ್ರಚುರಮತಿಚಲಂನೋಡೆ ಮಾಯಾಪ್ರಪಂಚಂ |
ಜವದಿಂದಂತುಗ್ಮತೇಜಂ ಮರೆಯುಹುದು ಲಸತ್ತೇಜಸೋದ್ಭೂತಮಾಗು |
ತ್ತ್ರವಲಂ ನೋಡಲ್ಕಿದೇರೀತಿಯೊಳಿಹುದು ಜಗದ್ವ್ಯಾಪ್ತಿ ಮಿಥ್ಯಾಸ್ವರೂಪಂ ||

"ಭಾರತೀಸುತ"

---

## ಸ್ತ್ರೀಯರ ರೂಪ.

(ಹಿಂದಿನ ಸಂಚಿಕೆಯಿಂದ ಮುಂದರಿಸಿದ್ದು)

ಪ್ರಣಯವು ಪ್ರಣಯಿನಿಯನ್ನು ಹುಚ್ಚಳಾಗಿಮಾಡುವುದು. ಏಕೆಂದರೆ, ದೇವರು ನಾರಿಯರನ್ನು ಪ್ರೇಮದ ಪವಿತ್ರ ವೃತ್ತಿಕೆಯಿಂದ ಸೃಷ್ಟಿಸಿರುವನು.

ನಾರಿಯು ಪ್ರೇಮದಸಲುವಾಗಿ ಮಾಡಲಾಗದ ಕಾರ್ಯವಾವುದೂ ಪ್ರಪಂಚದಲ್ಲಿಲ್ಲ. ಅವಳು ಒಬ್ಬ ಪಾಷಂಡನಾದವನನ್ನು ದೇವಸಮನಾಗಿ ಮಾಡಬಲ್ಲಳು. ದೇವ ಸಮನಾದವನನ್ನು ಅತಿ ತುಚ್ಛ ಪಾಷಂಡನನ್ನಾಗಿ ಮಾಡಬಲ್ಲಳು. ಪ್ರೇಮಾ ಸ್ಪದನಿಗೋಸ್ಕರ ತನ್ನ ಸರ್ವಸ್ವವನ್ನೂ ಒವ್ಮೆಗೆ ತ್ಯಜಿಸಬಲ್ಲಳು. ಪ್ರೇಮಕ್ಕೆ ಒಳ್ಳೆ ಯದು ಕೆಟ್ಟದು ಎಂಬ ವಿಚಾರವಿಲ್ಲ. ಆದುದರಿಂದಲೆ ನಾರಿಯರು ತಮಗೆ ಪ್ರಿಯರಾ ದವರ ದೋಷಗಳನ್ನು ಕಾಣಲಾರರು ಪುರುಷರು ಇದಕ್ಕೆ ವಿಪರೀತ. ಅವರ ಪ್ರೇಮವು ಪ್ರಥಮದಲ್ಲಿ ರೂಪ ಮತ್ತು ಮೋಹದ ಆಶ್ರಯದಿಂದ ಹುಟ್ಟುವುದು. ಆ ಪ್ರೇಮದ ನಿತ್ಯ ಜೀವನವೆಂದರೆ ಕಾಮಾಸಕ್ತಿಯೇ. ಆದುದರಿಂದಲೇ ಯಾವಾ ಗಲೂ ಪುರುಷನು ನಾರಿಯರಂತೆ ಪ್ರೇಮದಲ್ಲಿ ತಲ್ಲೀನನಾಗಲಾರನು. "ಅವನ ಪ್ರೇಮವು ನಾರಿಯಪ್ರೇಮದ ಪ್ರತಿಧ್ವನಿಮಾತ್ರ". ಇದರ ಮೂಲಕಾರಣವು ಬೇರೆ ಬೇರೆ ಕೇಂದ್ರಗಳನ್ನೊಳಗೊಂಡು, ಪರಸ್ಪರವಿರುದ್ಧವಾದ ಬೇರೆ ಬೇರೆ ಭಾವ ಗಳನ್ನು ಆಕರ್ಷಿಸುವ ನಾರಿಯದ್ವಿಮುಖವಾದರೂಪವೇ ! ಆ ರೂಪುಗಳಲ್ಲೊಂದು 'ದೈಹಿಕ' ಮತ್ತೊಂದು 'ಮಾನಸಿಕ'. ಸಾಮಾನ್ಯವಾಗಿ ಪುರುಷರು ನಾರಿಯರ 'ದೈಹಿಕ' ರೂಪವನ್ನು ನೋಡಿ ಮೋಹಕ್ಕೊಳಗಾಗುವರು. 'ದೈಹಿಕ' ರೂಪವು ಸ್ತ್ರೀಯರ ಬಾಹ್ಯಸೌಂದರ್ಯ. 'ಮಾನಸಿಕ' ರೂಪವು ಅವರ ಅಂತರಿಕಸೌಂದರ್ಯ. ಈಗಿನಕಾಲದಲ್ಲಿ ಸ್ತ್ರೀಯರು ತಮ್ಮ 'ದೈಹಿಕ' ರೂಪದಕಡೆ ಮನವಿಡುವಷ್ಟು 'ಮಾನಸಿಕ' ರೂಪದಲ್ಲಿಡುತ್ತಿಲ್ಲವೆಂಬುದು ಬಹುಶೋಚನೀಯವಾದಮಾತು. ಪಾಶ್ಚಾತ್ಯದೇಶಗಳಲ್ಲಿ ಹಾಗೂ ಇಂಗ್ಲೆಂಡ್ ಮತ್ತು ಪ್ರಾನ್ಸ್‌ದೇಶಗಳಲ್ಲಿ ಸ್ತ್ರೀಯರು ತಮ್ಮ ದೈಹಿಕಸೌಂದರ್ಯವನ್ನು ಅಚ್ಚಳಿಯದೆ ಇಟ್ಟುಕೊಳ್ಳಲು ಎಷ್ಟೊಂದು ಪ್ರಯಾಸಪಡುವುರೆಂಬುದನ್ನು ಭಾರತ ರಮಣಿಯರು ಚಿಂತಿಸಲೂ ಅರರು.

ನಾರಿಯರ ಪ್ರಕೃತಿದತ್ತವಾದ ಸೌಂದರ್ಯದಲ್ಲಿ ವಿಶೇಷವಾಗಿ ಪುರುಷರ ಮನ ಸ್ಸನ್ನು ಒಲಿಸುವುದೆಂದರ ಅವರ 'ನೋಟ' ಮತ್ತು 'ನಗು' ಇವೆರಡಲ್ಲದೆ ಸ್ತ್ರೀಯರ ಮತ್ತೊಂದು ಅಸಾಧಾರಣ ಆಯುಧವು 'ಕಣ್ಣೀರು'. ಸಮಯಾಸಮಯಗಳನ್ನು ನೋಡಿ ಪ್ರಯೋಗಿಸಿದರೆ ಇದೊಂದರ ಸಹಾಯದಿಂದ ಪ್ರಪಂಚದ ಎಲ್ಲಾ ದೊಡ್ಡ ಕೆಲಸಗಳನ್ನೂ ಕೊನೆಗಾಣಿಸಬಹುದು. ಆದುದರಿಂದಲೇ ಮಹಾಕವಿ ಷೇಕ್ಸಪಿಯರನು

A beauty's tears are lovelier than her smile.

"ಸುಂದರಿಯು ನಲಿನಗುವ ಮೀರಿಪ್ಪುದವಳ ಕಣ್ಣೀರು" ಎಂದು ಹೇಳಿರುವನು.

ಇಂತಹ ಕಣ್ಣೀರಿನಿಂದ ಸಾಧ್ಯವಾಗದ ಕಾರ್ಯವು ಪ್ರಪಂಚದಲ್ಲಾವುದೂ ಇಲ್ಲ. ಇನ್ನು 'ನೋಟದ' ವಿಚಾರವಾಗಿ ಮಹಾಕವಿ ಭವಭೂತಿಯು ಹೇಳು ವುದನ್ನು ಕೇಳಿ—

ಅಲಸವಲಿತ ಮುಗ್ಧ ಸ್ನಿಗ್ಧ ನಿಸ್ಪಂದಮಂದ್ಯೈಃ
ರಭಸವಿಕಸಿತಾಂತಃ ವಿಸ್ಮಯಸ್ಮೇರತಾರೈಃ
ಹೃದಯಮಶರಣಂ ಮೇಪ ಕ್ಷ್ಮಲಾಕ್ಷ್ಯಾಃ ಕಟಾಕ್ಷೈಃ
ರಪಹೃತಮುಪವಿದ್ಧಂ ಪೀತಮುನ್ಮೂಲಿತಂವಾ ||

ವಾ|| ಷ|| ಅಲಸತೆಯು ಪೆಂಪು ಕಣ್ಣಾಲಿಗಳ ಕಾಂತಿಯುಂ |
ನಲವಿನೊಂದಿಂಪು ತನ್ಮಧುರ ದೃಷ್ಟಿಯುಂ ಸಂ |
ಕಲಿತ ವಿಸ್ಮಯಸಂತಸಂಗಳಿರದದರ ಜಗೆಣ್ಣಿಯು ವಿಶದತೆಯುಸು ||

ಬಳೆಯಿಸಿರೆ ಚಲ್ವೆಯ ಕಟಾಕ್ಷಸಂಹತಿಯೆನ್ನ |
ಮೆಲುಮನವ ಕಳ್ದುದೋ ಕವರ್ದುದೋ ಪೀರ್ದುದೋ |
ಸಲೆ ಸಾವಿಗೊಯ್ದುದೋ ಕಾಣೆ ಕಂಗಾಲಿಗಳ ಶರಣೆಲ್ಲ ಭೂತಲದಲಿ||

ನಾರಿಯರು ಬೇರೆ ಬೇರೆ ವಿಧವಾದ ನೋಟದಿಂದ ತಮ್ಮ ಹೃದಯದ ಬೇರೆ ಬೇರೆ ಭಾವಗಳನ್ನು ಪ್ರಕಟಮಾಡಬಲ್ಲರು. ಕೇಳಿಲ್ಲವೇ ಕಣ್ಣು ಕಣ್ಣಿನ ಮಾತೆಂದು. ಮಧ್ಯಾಹ್ನವಾಯಿತೆಂದರ ಹೆಂಗಸು ಹಾಕಿಕೊಳ್ಳುವನವದಿಂದ ಅವರು ಕನ್ನಡಿಯ ಮುಂದ ನಿಂತುಕೊಂಡು, ರಂಗಮಂಚದ ನಾಟ್ಯಗಾತಿಯರಂತೆ, ಪ್ರೇಮಕಟಾಕ್ಷ, ತೀವ್ರಕಟಾಕ್ಷ, ಕುಟಿಲಕಟಾಕ್ಷ ಇವೇ ಮುಂತಾದ ಎಷ್ಟೋ ಕಟಾಕ್ಷಗಳನ್ನು ಅಭ್ಯಾಸಮಾಡುವರು. ಇಷ್ಟೊಂದು ಪ್ರಯಾಸದಿಂದ ಕಲಿತ, ಕಣ್ಣೋಟ್ಕೆಯ ಪರೀಕ್ಷಣಾವ ಯಾರಲ್ಲಾಗುವದೂ ಅವನೇ ಧನ್ಯನು!

ಇನ್ನುಳಿದುದು ನಗು. ನಗುವೆಂದರೆ, ಹಾಸ್ಯಾಸ್ಪದವಾದ ಪುರುಷರ ಅರ್ಥ ಹೀನ ಕೇಕಯಲ್ಲ. ವಿದಗ್ಧರಾದ ಲಕ್ಷಣಕಾರರು ಅದಕ್ಕೆ ಪ್ರೀತಿಯಿಂದ ನಾಮ ಕರಣಮಾಡಿರುವರು, 'ಮಂದಸ್ಮಿತ' 'ಮುಗುಳುನಗೆ' ಎಂದು ಮುಂತಾಗಿ. ಅದು ಅರಬಿರಿದ ಮಲ್ಲಿಗೆಯಂತೆ, ತನ್ನ ಅಂತರಿಕ ಪರಿಮಳದ ಅಲ್ಪಸ್ವಲ್ಪ ಪರಿಚಯ ವನ್ನು ಕೊಟ್ಟು ಕುತೂಹಲಪೂರ್ಣರಾದ ಪ್ರೇಕ್ಷಕರನ್ನು ಮುಗ್ಧರನ್ನಾಗಿ ಮಾಡಿ ಬಿಡುವುದು. ಅದಿಂ ಲೀಲಾಪಂಗವೇ ಅಮೃತದ ಜೇನುಹುಟ್ಟು, ಪ್ರಾಯರ ಚಂದುಟಿ. ಅಥವಾ ಮಾತ್ರ ಪ್ರಕಾಶಿತವಾಗಿ ಒಂದೆರಡು ಹಲ್ಲುಗಳು ಅದರ ಜೊತೆಗಿಗೆ ಹರಿ ಕೊಟ್ಟಂತೆ ಶೋಭಿಸುವುದು. ಆ ದಂತಗಳ ಕಾಂತಿಯನ್ನು ಕುರಿತು ಜಯದೇವನು ಹೇಳಿರುವನು

" ವದಸಿ ಯದಿ ಕಿಂಚಿದಪಿ ದಂತರುಚಿಕೌಮುದೀ |
ಹರತಿ ದರತಿಮಿರಮತಿ ಘೋರಂ " ಎಂದು

" ನಗುವೆಯಾದೊಡೆ ನಿನ್ನ ದಂತರುಚಿಯೆಂಬ
ಮಧುರ ಕೌಮುದಿ ಹರಿವುದೆನ್ನ ತಾಪವನು "

ನಾರಿಯರು ಸ್ಥೂಲಾಂಗಿಯರಾದರೆ ಅವರ ಸೌಂದರ್ಯಕ್ಕದು ದೊಡ್ಡ ಲಾಂಛನವೆ. ಅವರ ಮಧ್ಯದಲ್ಲಿ ಯಾವಳು ಅಲ್ಪಕಾಯಳೋ, ಯಾವಳು ಪುಷ್ಪಿತ ಲತೆಯಂತೆ ಕೋಮಲಶರೀರಳೋ ಅವಳೇ ಧನ್ಯೆ. ಸೌಂದರ್ಯದ ಪರಕಾಷ್ಠತೆಯು ಅವಳಲ್ಲಿ. ಕವಿಗಳು ಸುಂದರಿಯರನ್ನು ಲತೆಗೆ ಹೋಲಿಸಿರುವುದನ್ನು ಕೇಳಿಲ್ಲವೆ? ಲತಾಂಗಿ ತನ್ವಂಗಿ ಮುಂತಾದ ಗುಣವಾಚಕಗಳು ಸ್ತ್ರೀಯರ ಸೌಂದರ್ಯಪೋಷಣೆಗೆ ಅತ್ಯಂತ ಅವಶ್ಯಕವಾದ ಆಧ್ಯವಸ್ತುಗಳು (Essentials).

ಇವುಗಳಲ್ಲದೆ ಸ್ತ್ರೀಯರ ಸೌಂದರ್ಯದ ಮುಖ್ಯಾವಲಂಬನವೂ, ಅವರ ನಾರೀತ್ವದ ಹೆಗ್ಗುರುತೂ ಆದುದು ಮತ್ತೊಂದುಂಟು. ಆದುದರಿಂದಲೇ ಕಾಂತಕವಿ ಜಗನ್ನಾಥನು, ತನ್ನ ಪ್ರೇಯಸಿ ಲವಂಗಿಯನ್ನು ವರ್ಣಿಸಲು ಪ್ರಾರಂಭಮಾಡಿ ಆದಿಯಲ್ಲೇ ಹೇಳಿದನು 'ಇಯಂಸುಸ್ತನೀ' ಎಂದು. ಒಮ್ಮೆಗೆ ಚಕ್ರವರ್ತಿಯಂತಹ ವಿಲಾಸಪ್ರಿಯನೂ, ಸನ್ಯಾಸಿಯಂತಹ ವಿಷಯದ್ವೇಷಿಯೂ ಆಗಿದ್ದ ಭರ್ತೃಹರಿಯೂ " ಸ್ತನಪತನಾವಧಿ ಜೀವಿತಂ ರತಂವಾ " ಎಂಬ ಹಾರ್ದಿಕ ಉದ್ಗಾರಗಳು ಅದನ್ನುದ್ದೇಶಿಸಿಯೇ. ಇವೆಲ್ಲದರ ಮೊತ್ತ ಅಥವಾ ಸಮಷ್ಟಿಯೇ ನಾರಿಯರ ದೈಹಿಕರೂಪ. ಪುರುಷರು ಇದಕ್ಕೆ ಮುಗ್ಧರಾಗಿಯೇ ಅವರನ್ನು ಪ್ರೀತಿಸ ತೊಡಗುವರು.

ನಾರಿಯರ ಮಾನಸಿಕರೂಪವು, ಅವರ ದಯೆ, ಮಾಯೆ, ಸ್ನೇಹ, ಕರುಣೆ, ಪರರ ದುಃಖದಲ್ಲಿ ಕಾತರತೆ ಇವುಗಳೇ. ಪುರುಷನಿಗೆ ಮೊದಲು ಇವುಗಳ ಪರಿಚಯವಾಗುವುದೇ ಇಲ್ಲ. ಯಾವಾಗ ರಮಣಿಯೊಡನೆ ನಿಸ್ಸಂಕೋಚವಾಗಿ ಮನಸ್ಸನ್ನು ಬಿಟ್ಟು ವರ್ತಿಸುವ ಸುಯೋಗವು ದೊರಕುವುದೋ ಆಗವನಿಗೆ ಸ್ವಲ್ಪ ಸ್ವಲ್ಪವಾಗಿ ಅವುಗಳ ಪರಿಚಯವಾಗುವುದು. ಬಳಿಕ, ಅವನ ಮೋಹಮಯವಾದ ಪ್ರೇಮವು ಹೋಗಿ ಪವಿತ್ರವಾದ ನಿಸ್ವಾರ್ಥಪ್ರೇಮವು ಹುಟ್ಟುವುದು. ಸ್ತ್ರೀಯು ತನ್ನಿಂದ ವಿಭಿನ್ನಳಾದ ಬೇರೊಂದು ವ್ಯಕ್ತಿಯೆಂಬುವುದು ಮರೆತುಹೋಗುವುದು. ಅವಳು ತನ್ನ ಉಪಭೋಗಕ್ಕೂ ಸೇವೆಗೂ ಮಾತ್ರ ಅರ್ಹಳೆಂಬ ತುಚ್ಛ ದೃಷ್ಟಿಯು ಬಿಟ್ಟು ಅವರಲ್ಲೊಂದು ವಿಧವಾದ ಶ್ರದ್ಧೆಯೂ ಗೌರವವೂ ಹುಟ್ಟುವುವು. ಅವಳ ಆಧ್ಯಾತ್ಮಿಕ ಗುಣಗಳ ಮಾಧುರ್ಯದಿಂದ ಮುಗ್ಧನಾಗುವನು.

ನಾರಿಯು ಕೇವಲ ಶಕ್ತಿಮಯಿ! ಇಹಸಂಸಾರದಲ್ಲಿ ತನ್ನಾ ಶಕ್ತಿಯನ್ನು ಅವಳು ಎಷ್ಟೊಂದು ಸಂಯಮಮಾಡಿ ನಡೆಯುವಳೆಂಬುದನ್ನು ಹೇಳಬೇಕಾದರೆ ತುಂಬಿದ ಪ್ರವಾಹದಿಂದ ಕೂಡಿದ ತೀವ್ರಗಾಮಿನಿಯಾದ ನದಿಯನ್ನು ಆಟದ ಚಿಳ್ಳಂಗೋವಿಯಲ್ಲಿ ಹರಿಯಬಿಟ್ಟಹಾಗೆ. ಇಹಸಂಸಾರವು ಸುಸೂತ್ರವಾಗಿ ನಡೆಯಬೇಕಾದರೆ, ಕ್ಷಣಕ್ಷಣಕ್ಕೂ ಹೆಜ್ಜೆಹೆಜ್ಜೆಗೂ ಅವಳು ಮಾಡುವ ಶಕ್ತಿ ಸಂಯಮದಿಂದಲೆ. ಪುರುಷನಿಗೆ ಈ ಶಕ್ತಿಯ ಪರಿಚಯವಾದೊಡನೆಯೇ ಅವನ ಮನಸ್ಸು ತಲ್ಲಣಿಸ ಹತ್ತುವುದು. ತನಗೋಸುಗ ತನ್ನ ಪ್ರೀತಿಯುಸಲುವಾಗಿ ಅಡಿಗೆಮನೆಯಲ್ಲಿ ಮುಸುರೆಯನ್ನು ತಿಕ್ಕುವ ಕೈಗಳು ಎಂತಹ ರಾಜರಾಜೇಶ್ವರಿಯ ಕೈಗಳೆಂಬುದನ್ನು ಮಸಕು ಮಸಕಾಗಿ ಕಾಣಹತ್ತುವನು. ಅಲ್ಲಿಗೆ ಅವನ ಪರಾಜಯವು ಪೂರ್ಣವಾದಂತೆ, ಆಮೇಲವನು ಅವಳ ದೈಹಿಕ ಸೌಂದರ್ಯದಕಡೆ ದೃಷ್ಟಿಹಾಕುವುದೂ ಇಲ್ಲ.

ನಾರಿಯರ ಸತ್ಯವಾದ ಪ್ರಕೃತಿಸೌಂದರ್ಯವು ಅವರ ಮನಸ್ಸಿನಲ್ಲಿ; ದೇಹದಲ್ಲಲ್ಲ. ದೇಹದ ಸೌಂದರ್ಯವು ಅಶಾಶ್ವತ ಸೀಮಾಸಹಿತವಾದ್ದು. ಅದಕ್ಕೆ ನಿರ್ದಿಷ್ಟವಾದ ಆದಿ ಅಂತ್ಯಗಳುಂಟು. ಮಾನಸಿಕರೂಪವು ಅನಂತ; ಮೇರೆ ಇಲ್ಲದ್ದು; ಹಾಗೂ ಅಪಾರಶಕ್ತಿಯ ನೆಲೆಕಟ್ಟು. ನಾರಿಯರ ಬಾಹ್ಯಸೌಂದರ್ಯದಲ್ಲಿ ನಾವು ಕಾಣುವ ಶಕ್ತಿಯು, ಅವರ ಮಾನಸಿಕ ಶಕ್ತಿಯ ಪ್ರತಿಬಿಂಬಮಾತ್ರ. ಇದನ್ನು ನಮ್ಮ ಭಾರತ ರಮಣಿಯರು ಚನ್ನಾಗಿಬಲ್ಲರು. ಇಂದ್ರಿಯಗಳನ್ನು ಹೋದಹಾಗೆ ಬಿಡುವ ಅಸಂಯತನಾದ ನಿರ್ಬಲ ಪುರುಷನನ್ನು ವಶಪಡಿಸಿಕೊಳ್ಳುವುದರಲ್ಲಿ ಅದು ಉಪಯುಕ್ತವಾಗಬಹುದು. ಇಂದ್ರಿಯಗಳನ್ನಾಳಬಲ್ಲ, ಸಬಲನಾದ ಸಂಯತನಾದ ಯಥಾರ್ಥ ಪುರುಷನನ್ನೊಲಿಸಬೇಕಾದರೆ ಅವರ ಮಾನಸಿಕ ಸೌಂದರ್ಯವೇ. ಕಾಳಿದಾಸನು ಈ ಭಾವವನ್ನು ತನ್ನ ಕಾವ್ಯಗಳಲ್ಲಿ ಬಹು ಚನ್ನಾಗಿ ವ್ಯಕ್ತಪಡಿಸಿರುವನು. ದೇಹದ ರೂಪದಲ್ಲಿ ತೃಪ್ತಿಯಿಲ್ಲ. ಘೃತಾಹುತಿನ್ಯಾಯದಂತೆ ದಿನದಿನವೂ ಆಸಕ್ತಿಯು ಹೆಚ್ಚುವುದೇ ಹೊರತು ಕಡಿಮೆಯಾಗುವುದಿಲ್ಲ. ನಿತ್ಯವೂ ಹೊಸಹೊಸದನ್ನು ಅಪೇಕ್ಷಿಸುವುದು. ಭ್ರಮರದಂತೆ ಹೂವು ಹೂವಿನಲ್ಲಿಯೂ ಹಾರಾಡಲಿಚ್ಛಿಸುವುದು. ರೂಪ ಪ್ರಭೆಯಿಂದ ಹುಚ್ಚನಾಗಿಯೇ ಯಕ್ಷನು ಹೇಳುವನು.—

"ತನ್ವೀಶ್ಯಾಮಾ ಶಿಖರಿ ದಶನಾ ಪಕ್ವ ಬಿಂಬಾಧರೋಷ್ಠೀ
ಮಧ್ಯೇಕ್ಷಾಮಾ ಚಕಿತಹರಿಣೀ ಪ್ರೇಕ್ಷಣಾ ನಿಮ್ನನಾಭಿಃ"
ಶ್ರೋಣೀಭಾರಾ ದಲಸಗಮನಾ ಸ್ತೋಕನಮ್ರಾಸ್ತನಾಭ್ಯಾಂ ।
ಯಾತತ್ರಸ್ಯಾ ದ್ಯುವತಿವಿಷಯೇ ಸೃಷ್ಟಿರಾದ್ಯೇವಧಾತುಃ ॥

ಕಾ॥ ಪ॥ ಬಡಬಳುಕು ನಂಗದಿಂ ಕುವಲಯದ ಕಾಂತಿಯಿಂ ।
ಶಿಖರಿಮುಗುಳ ಪಲ್ಲಿಳಿಂ ಬಿಂಬಾಧರೋಷ್ಠದಿಂ ।
ಕೆಳೆಗೆಡದ ಕಂಗಳಿಂ ಬಡವಾದ ನಡುವಿನಿಂ ತೆಮೆಬೆಸೆದ ನಾಭಿಯಿಂದಿದೆ ॥

ಗುರುಜಘನ ಭಾರದಿಂ ಮೆಲ್ಲನಿಡುವಡಿಗಳಿಂ ।
ಮೆರೆವ ಕುಚಯುಗಳದಿಂ ದನಿತುಬಾಗಿದ ತನುವಿ ।
ನೆರಳದಿಂ ಶೋಭಿಸುವ ಲಲನೆ ಕಮಲಜ ನಾದಿ ಸೃಷ್ಟಿಯಂತೆ ॥

ಮೇಘದೂತವು ಕಾಮಾಸಕ್ತನಾದ ಕೇವಲ ಇಂದ್ರಿಯಸುಖಗಳಲ್ಲೇ ಜೀವನದ ಪರಕಾಷ್ಠತೆಯನ್ನು ಕಂಡ ನಿರ್ಬಲ ಪುರುಷನ ಕಾವ್ಯವು. ಇದನ್ನು ಕವಿಯು ತನ್ನ ಮೊದಲನೇ ಪದ್ಯದಲ್ಲಿಯೇ 'ಪ್ರಮತ್ತ' 'ಶಾಪೇನಾಸ್ತಂಗಮಿತ ಮಹಿಮಾ' ಎಂಬ ಮಾತುಗಳಿಂದ ಸೂಚಿಸಿರುವನು. ಇಂದ್ರಿಯಗಳ ಉಚ್ಛೃಂಖಲ ವೃತ್ತಿಯೇ ಪ್ರಮತ್ತತೆಯ ಮುಖ್ಯ ಲಕ್ಷಣವು. ಇಂತಹ ಪ್ರಮತ್ತತೆಯ ದೋಷದಿಂದವನು ತಾನು ಯಕ್ಷನೆಂಬುದು ಮಾತ್ರವಲ್ಲ, ಬುದ್ಧಿಶೀಲಗುಣಾನ್ವಿತವಾದ ಸದಸದ್ವಿವೇಚನೆಯುಳ್ಳ ಪುರುಷನೆಂಬುದನ್ನೂ ಕೂಡ ಮರೆತು ಉನ್ಮತ್ತನಂತೆ ಮೇಘವನ್ನು ಸಂಬೋಧಿಸಿ ದೊಡ್ಡದೊಂದು ಕಾವ್ಯಕ್ಕೆ ಪ್ರಾರಂಭಮಾಡುವನು. ಅವನ ಆಸಕ್ತಿ ಕೇವಲ ಚಕ್ಷುರ್ಗತ; ತನ್ನ ಸಂದೇಶದ ಪ್ರಾರಂಭದಲ್ಲೇ ಹೇಳುವನು.—

ತ್ವಾಮಾಲಿಖ್ಯ ಪ್ರಣಯಕುಪಿತಾಂ ಧಾತುರಾಗೈಃ ಶಿಲಾಯಾ ।
ಮಾತ್ಮಾನಂತೇ ಚರಣಪತಿತಂ ಯಾವದಿಚ್ಛಾಮಿ ಕರ್ತುಂ ॥

ಪ್ರಣಯಕೋಪವನಾಂತ ತೆರದೆ ನಿನ್ನನು ಬರೆದು
ವನಿತೆ ಶಿಲೆಯಲಿ ಧಾತು ರಾಗದಿಂದೆ ।
ಎನ್ನ ನಿನ್ನಡಿಗಳಲಿ ಮೊರೆವೊಗುವಮಾಳ್ಕೆಯಿಂ
ಚಿತ್ರಿಸಲ್ಕೆಂದು ನಾನಿಚ್ಛಿಸುವೆನು ॥ ಎಂದು.

ಇಂತಹ ಆಸಕ್ತಿಯು ತೀವ್ರಜ್ವಾಲೆಯು ಪೂರ್ಣವಾಗಬೇಕಾದರೆ 'ಪರಿಣತಶರಚ್ಚಂದ್ರಿಕಾಸು ಕ್ಷಪಾಸು'; ಶರದೃತುವಿನ ಪೂರ್ಣಚಂದ್ರನ ಮೋಹಕ ಬೆಳದಿಂಗಳಿಂದ ತುಂಬಿದ ರಾತ್ರಿಗಳಲ್ಲಿಯೇ.

''ಪಶ್ಚಾದಾವಾಂ ವಿರಹಗುಣಿತಂ ತಂತಮಾತ್ಮಾಭಿಲಾಷಂ
ನಿರ್ವೇಕ್ಷ್ಯಾವಃ ಪರಿಣತಶರಚ್ಚಂದ್ರಿಕಾಸು ಕ್ಷಪಾಸು''

ಬಳಿಕ ನಮ್ಮಯ ವಿರಹದಿಂ ಬಹು
ಬಳೆದ ಮನದಭಿಲಾಷೆಗಳ ಕೈ
ಗೊಳಲಹುದು ಪರಿಣತ ಶರಚ್ಚಂದ್ರಿಕೆಯ ನಿಶಿಗಳಲಿ ॥

(ಸಶೇಷ)

---

# ವಿಲಕ್ಷಣ ಪ್ರೇಮ.

ಸಂಧ್ಯಾ ಸಮಯ. ಭಗವಾನ್ ಸೂರ್ಯನಾರಾಯಣನು ವಿಶ್ರಾಂತಿಗಾಗಿ ಅಸ್ತಾಚಲವನ್ನೈದಿದನು. ಸಂಧ್ಯಾಸುಂದರಿಯು ಹರ್ಷೋತ್ಫುಲ್ಲಿತಳಾಗಿ ಸಹಸ್ರ ರಶ್ಮಿಯನ್ನು ಇದಿರ್ಗೊಂಡಳು. ಪಕ್ಷಿಗಳು ಕಿಲಿಬಿಲಿ ಶಬ್ದ ಮಾಡುತ್ತ ಆನಂದದಿಂದ ತಮ್ಮ ತಮ್ಮ ಗೂಡಿನಕಡೆಗೆ ಹೊರಟಿದ್ದವು. ಇಂಥ ಸುಂದರವಾದ ಸಮಯದಲ್ಲಿ ಉಪವನದೊಳಗಿನ ಲತಾಮಂಟಪದಲ್ಲಿ ಅಪ್ಸರೆಯಂತಹ ಬಾಲೆಯೊಬ್ಬಳು ಸೃಷ್ಟಿ ಸೌಂದರ್ಯವನ್ನು ನಿರೀಕ್ಷಿಸುತ್ತ ಕುಳಿತಿದ್ದಳು. ಅವಳಿಗೆ ಅದೇ ಬಾಲ್ಯವು ಮುಗಿದು ಯೌವನವು ಪ್ರಾದುರ್ಭಾವವಾಗುತ್ತಿತ್ತು. ಸಂಧ್ಯಾಕಾಲದ ಸೃಷ್ಟಿಸೌಂದರ್ಯವೂ ಬಾಲೆಯ ರೂಪಸೌಂದರ್ಯವೂ ಎಂಥ ಅರಸಿಕನನ್ನಾದರೂ ಮೋಹಗೊಳಿಸುತ್ತಿದ್ದವು. ಇರಲಿ; ಅಷ್ಟರಲ್ಲಿ ಹಿಂದಿನಿಂದ ಚಪಲೆಯಾದ ಬಾಲೆಯೊಬ್ಬಳು ಬಂದು ಅವಳ ಕಣ್ಣು ಮುಚ್ಚಿ ನಗುತ್ತ, ಅಕ್ಕಾ! ನಾನು ಯಾರು? ಹೇಳು ಎಂದಳು. ಅದಕ್ಕೆ ಅವಳು, ನಾನು ನಿನ್ನನ್ನು ಗುರ್ತಿಸಿದೆನು. ವೀರಮತೀ! ನನ್ನ ಕಣ್ಣುಗಳನ್ನು ಬಿಡು ಎಂದು ನಗುತ್ತ ನುಡಿದಳು. ವೀರಮತಿಯು ಕಣ್ಣುಗಳನ್ನು ಬಿಟ್ಟು ತನ್ನ ಪ್ರಿಯ ಅಕ್ಕನನ್ನು ಅಪ್ಪಿಕೊಂಡಳು.

ಹಿಂದಕ್ಕೆ ದಕ್ಷಿಣದಲ್ಲಿ ಯಾದವರೆಂಬ ಅರಸರು ದೇವಗಿರಿಯಲ್ಲಿ ಆಳುತ್ತಿದ್ದರು. ಅವರೊಳಗೆ ಶೌರ್ಯ, ಧೈರ್ಯ, ಸಾಹಸಾದಿ ಸಕಲ ಗುಣಗಳಿಂದ ಶೋಭಿಸುವ "ರಾಮರಾಜ" ನೆಂಬ ಅರಸನು ಪ್ರಸಿದ್ಧನು. ಅವನಿಗೆ ಅತ್ಯಂತ ಲಾವಣ್ಯವತಿಯಾದ "ರೂಪವತಿ" ಎಂಬ ಒಬ್ಬ ಮಗಳಿದ್ದಳು. ಅವಳು ಉಪವರಳಾಗಲು, ಅವಳ ಸೌಂದರ್ಯಕ್ಕೆ ಮೋಹಿಸಿ ಅನೇಕ ರಾಜರು ಇವಳನ್ನು ಮದುವೆಯಾಗಬೇಕೆಂದು ಹಾರೈಸಿದರು. ಆದರೆ ಅವಳು ಯಾರನ್ನೂ ವರಿಸಲಿಲ್ಲ. ಆಗ ಅವರೆಲ್ಲರೂ ಸಿಟ್ಟಾಗಿ ಒಟ್ಟುಗೂಡಿ ರಾಮರಾಜನ ಪಟ್ಟಣವನ್ನು ಮುತ್ತಿ ಒಳ್ಳೇ ನಿಕರದಿಂದ ಕಾದಿದರು. ಕಡೆಗೆ ವಿಜಯಶ್ರೀಯು ರಾಮರಾಜನ ಕೊರಳಿಗೆ ಮಾಲೆಯನ್ನು ಹಾಕಿದಳು. ಆದರೆ ಆತನ ಸ್ವಾಮಿನಿಷ್ಠನಾದ ಸೇನಾನಾಯಕನು ಪ್ರಭುಸೇವೆಗಾಗಿ ವೀರಸ್ವರ್ಗವನ್ನು ಹೊಂದಬೇಕಾಯಿತು.

ಶೂರಸೇನನು ತೀರಿಕೊಂಡಾಗ ಅತನ ಮಗಳಾದ "ವೀರಮತಿ" ಯು ತೀರ ಚಿಕ್ಕವಳಿದ್ದಳು. ಆದ್ದರಿಂದ ಅರಸನು ಅವಳನ್ನು ತನ್ನ ಅರಮನೆಗೆ ಕರೆತಂದು ತನ್ನ ಮಗಳಾದ "ರೂಪಮತಿ" ಎಂತೆಯೇ ಅವಳನ್ನು ರಕ್ಷಿಸುತ್ತಿದ್ದನು. ಮೇಲೆ ಬರೆದ ಮೊದಲನೆಯ ಬಾಲೆಯು ರಾಮರಾಜನ ಮಗಳಾದ ರೂಪಮತಿಯು. ಎರ

ಡನೇಯವಳು ಶೂರಸೇನನ ಮಗಳಾದ ವೀರಮತಿಯು ಮುಂದೆ ರೂಪಮತಿಗೆ ಅನುರೂಪನಾದ ವರನನ್ನು ಹುಡುಕಿ ಬಹು ಸಡಗರದಿಂದ ಮದುವೆಯನ್ನು ಮಾಡಿದರು. ವೀರಮತಿಯು ಇನ್ನೂ ಚಿಕ್ಕವಳಾದ್ದರಿಂದ ಈಗಲೇ ಮದುವೆಯನ್ನು ಮಾಡದೆ, ಕೃಷ್ಣರಾಯನೆಂಬ ವೀರನಿಗೆ ಅವಳನ್ನು ಕೊಡುವುದಾಗಿ ನಿಶ್ಚಯಿಸಿದನು. ಬರಬರುತ್ತ ವೀರಮತಿಯ ಸೌಂದರ್ಯವು ವಸಂತಕಾಲದ ಮೊಗ್ಗೆಯಂತೆ ವಿಕಸಿತವಾಗತೊಡಗಿತು. ಅವಳ ಹೃದಯದಲ್ಲಿ ಪ್ರಣಯಲೀಲೆಯ ಕಲ್ಪನೆಗಳು ಹುಟ್ಟಹತ್ತಿದವು. ಕೃಷ್ಣರಾಯನಾದರೂ ಅವಳ ಲೀಲೆಗೆ ಚಲನೆಯನ್ನು ಕೊಡುತ್ತಿದ್ದನು. ಪರಸ್ಪರರ ಚಿತ್ತವನ್ನು ಪ್ರೇಮವು ಆಕರ್ಷಿಸಿತು. ಇದನ್ನರಿತು ರಾಮರಾಜನು ಇವರಿಬ್ಬರ ವಿವಾಹವನ್ನು ಮಾಡಬೇಕೆಂದು ನಿಶ್ಚಯಿಸಿ ಎಲ್ಲಾ ಸಿದ್ಧತೆಯನ್ನೂ ಮಾಡಿದನು. ಆದರೆ "ಒಂದು ಲಗ್ನಕ್ಕೆ ಅನೇಕ ವಿಘ್ನಗಳೆಂಬಂತೆ" ಆಯುತ ಸಮಯಕ್ಕೆ ವಿಘ್ನವು ಬಂದೊದಗಿತು.

ಶೂರಸಾಹಸಿಯೂ, ಕುಟಿಲಘಾತಕಿಯೂ ಆದ ಅಲ್ಲಾವುದ್ದೀನನು ರಾಜ್ಯಲೋಭದಿಂದಲೂ, ಧನಲೋಭದಿಂದಲೂ, ಸುಂದರ ತರುಣಿಯರ ಆಶೆಯಿಂದಲೂ, ಅನೇಕ ರಾಜ್ಯಗಳನ್ನು ಗೆದ್ದು, ದಕ್ಷಿಣದಲ್ಲಿ ದೇವಗಿರಿಯನ್ನು ಮುತ್ತಿದನು. ರಾಮರಾಜನಾದರೂ ಈತನ ಸ್ವಾಗತವನ್ನು ಮಾಡಲಿಕ್ಕೆ ತನ್ನ ಸೈನ್ಯದೊಡನೆ ಸಿದ್ಧನಾಗಿಯೇ ನಿಂತಿದ್ದನು. ಅನೇಕ ರಾಜರನ್ನು ಗೆದ್ದು, ಅವರನ್ನು ತನ್ನ ದಾಸಾನುದಾಸರಂತೆ ನಡಿಸಿಕೊಳ್ಳುತ್ತಿದ್ದ ಅಲ್ಲಾವುದ್ದೀನನು ಈತನ ಪಾಡೇನೆಂದು ಒಳ್ಳೇ ಗರ್ವದಿಂದ ರಾಮರಾಜನಮೇಲೆ ಸಾಗಿಬಂದನು. ಆದರೆ ದೇವಗಿರಿಯ ವೀರರೇನು ಹೇಡಿಗಳೇ ? ಮೊದಲಿನ ಪೆಟ್ಟಿಗೇ ಅಲ್ಲಾವುದ್ದೀನನ ಸೈನ್ಯವನ್ನು ಚದರಿಸಿಬಿಟ್ಟರು. ಇವನ್ನು ನೋಡಿ ಎಂದೂ ಸೋಲೆಂಬುದನ್ನು ಅರಿಯದ ಅಲ್ಲಾವುದ್ದೀನನು ಹತಾಶನಾದನು. ಹಿಂದಕ್ಕೊಮ್ಮೆ ರಜಪೂತರು ಈತನೊಡನೆ ಶೌರ್ಯದಿಂದ ಕಾದಿ, ಸೋಲಿಸಿ ಅವಮಾನಮಾಡಿದ್ದರು. ಈಗಾದರೂ ಅದರಂತೆಯೇ ಆಯಿತೆಂದು ಅವನು ಮನಸಿನಲ್ಲಿ ತಳಮಳಿಸಹತ್ತಿ, ಇದರ ಸೇಡು ಯಾವಬಗೆಯಿಂದ ತೀರಿಸಿಕೊಳ್ಳಬೇಕೆಂದು ಯೋಚಿಸತೊಡಗಿದನು. ಕೌಟಿಲ್ಯದ ಮೂರ್ತಿಯಾದ ಆತನಿಗೆ ಕುಟಿಲ ತಂತ್ರಗಳ ಅಭಾವವೇ! ಕ್ಷಣದಲ್ಲಿ ಏನನ್ನೋ ನಿಶ್ಚಯಿಸಿ ತನ್ನ ಸೈನ್ಯವನ್ನು ಹಿಂತಿರುಗಿಸಿ, ಯವನ ಸೈನ್ಯವು ರಾಯನ ಸೈನ್ಯಕ್ಕೆ ಹೆದರಿ ಹಿಂತಿರುಗಿತೆಂದು ನಾಲ್ಕು ಕಡೆಗೂ ಸುದ್ದಿಯನ್ನು ಹಬ್ಬಿಸಿದನು. ಯವನ ಸೇನೆಯು ಸೋತು ಹಿಂತಿರುಗಿ ಓಡಿಹೋದದ್ದನ್ನು ಕಂಡು ರಾಯನ ಸೇನೆಯು ವಿಜಯೋಲ್ಲಾಸದಿಂದ ಕೋಟೆಯ ಹೊರಗೆ ಸಾಗಿತು ಅಷ್ಟರಲ್ಲಿ ಅಲ್ಲಾವುದ್ದೀನನು ಸಮೀಪದಲ್ಲಿಯೇ ತಳವೂರಿರುವನೆಂಬ ಸುದ್ದಿಯು ಹತ್ತಲು, ರಾಮರಾಜನು ಇವರಲ್ಲಿ ಏನೋ ಕಪಟವಿರುವದೆಂದು ತಿಳಿದು, ತನ್ನ ಎಲ್ಲಾ ಸರದಾರರನ್ನೂ ಕರಸಿ, ಅವರಿಗೆ ಈ ವೃತ್ತಾಂತವನ್ನು ತಿಳಿಸಿ,

ಮುಂದೆ ಏನುಮಾಡಬೇಕೆಂದು ಕೇಳಿದನು. ಅದನ್ನು ಕೇಳಿ ಅವರೆಲ್ಲರೂ, ನಾವು ಈಗಲೇ ಹೋಗಿ ಶತ್ರುವಿನ ಮೇಲೆ ಬಿದ್ದು ಶತ್ರುವನ್ನು ಗಡೀಪಾರು ಮಾಡಿಬರುವೆವು ಎಂದು ಹೇಳಿದರು. ರಾಮನಿಗಾದರೂ ಈ ವಿಚಾರವು ಸರಿದೋರಿತು. ಆದರೆ ಕೃಷ್ಣರಾಯನಿಗೆ ಮಾತ್ರ, ಈ ವಿಚಾರವು ಸರಿದೋರಲಿಲ್ಲ. ಆಗ ಆತನು ಎದ್ದು ನಿಂತು ಕೈಜೋಡಿಸಿ, ಒಡೆಯರೇ! ನನ್ನ ಮನದಲ್ಲಿ ಒಂದು ಹೊಸವಿಚಾರವು ಬಂದಿರುವುದು. ಅದೇನಂದರೆ, ಶತ್ರುವಿನ ಪಾಳಯದೊಳಗೆ ಯಾರಾದರೂ ಗುಪ್ತ ರೀತಿಯಿಂದ ಹೋಗಿ, ಶತ್ರುವಿನ ಸ್ಥಿತಿಗತಿಗಳನ್ನು ತಿಳಿದು ಆಮೇಲೆ ಸ್ವಾರೀ ಮಾಡಬಹುದು. ಈ ಕಾರ್ಯವನ್ನು ನಾನು ತಮ್ಮ ಪುಣ್ಯಪ್ರಭಾವದಿಂದ ಮಾಡಿಕೊಂಡು ಬರುವೆನು, ನನಗೆ ಅಜ್ಞೆಯನ್ನು ಕೊಡಬೇಕೆಂದು ಅತಿ ವಿನಯದಿಂದ ಬೇಡಿಕೊಂಡನು. ರಾಯನಿಗೆ ಈ ವಿಚಾರವು ಸರಿದೋರಿ. ಕೃಷ್ಣರಾಯನಿಗೆ ಅನುಮತಿಯನ್ನು ಕೊಟ್ಟನು. ಕೃಷ್ಣರಾಯನು ತನ್ನ ಮನಃಕಾಮನೆಯು ಪೂರ್ಣವಾಯಿತೆಂದು ಹರ್ಷಿತನಾಗಿ ಶತ್ರುವಿನ ಪಾಳಯಕ್ಕೆ ತೆರಳಿದನು.

(೨)

ಪ್ರಾಸಾದದೊಳಗಿನ ಉಪ್ಪರಿಗೆಯಮೇಲೆ ಬೆಳದಿಂಗಳೊಳಗೆ ಸುಂದರ ರಮಣಿಯೊಬ್ಬಳು ಆಕಾಶದೊಳಗಿನ ತಾರಕೆಗಳನ್ನು ರಜನೀನಾಥನನ್ನೂ ನೋಡುತ್ತ ಕುಳಿತಿದ್ದಳು. ಆ ಇಂದುವದನೆಯು ಚಂದ್ರಬಿಂಬಕ್ಕೂ ತನ್ನವದನಚಂದ್ರಕ್ಕೂ ಎಲ್ಲಿ ಸರಿಹಚ್ಚಿನೋಡುವಳೋ! ಎಂಬ ಭೀತಿಯಿಂದಲೋ ಏನೋ ಎಂಬಂತೆ ರಜನೀನಾಥನು ಮೋಡದೊಳಗೆ ಮರೆಯಾದನು. ಚಂದ್ರನ ಈ ಭೀತಿಯನ್ನು ಕಂಡು ವಿಸ್ಮಿತಳಾಗಿ ಅವಳು ಹಿಂತಿರುಗಿನೋಡಿದಳು. ಕೃಷ್ಣರಾಯನು ನಗುತ್ತ ತನ್ನ ಸಮೀಪದಲ್ಲಿ ನಿಂತಿದ್ದಾನೆ. ಕೃಷ್ಣರಾಯನು ಶತ್ರುವಿನ ಪಾಳಯಕ್ಕೆ ಹೋಗುವ ಮೊದಲು ತನ್ನ ಭಾವೀಪತ್ನಿಯ ನಿರೂಪವನ್ನು ತೆಗೆದುಕೊಂಡುಹೋಗಬೇಕೆಂದು ಬಂದಿದ್ದನು. ಕೃಷ್ಣರಾಯನನ್ನು ಕಂಡು ವೀರಮತಿಗೆ ಒಂದುಬಗೆಯಿಂದ ಆನಂದವೂ ಒಂದುಬಗೆಯಿಂದ ಖೇದವೂ ಉಂಟಾಗಿ, ಗದ್ಗದ ಕಂಠದಿಂದ ಪ್ರಿಯರೇ! ನೀವು ಶತ್ರುವಿನ ಪಾಳಯಕ್ಕೆ ಜೀವದಾಸೆಯನ್ನು ಬಿಟ್ಟು ಒಬ್ಬರೇ ಹೊರಟಿರುವಿರಿ. ಇಂಥ ಸಮಯದಲ್ಲಿ ನಾನು ಅರಮನೆಯಲ್ಲಿ ಹ್ಯಾಗೆ ಇರಲಿ? ವಿಧಿಪೂರ್ವಕವಾಗಿ ನಮ್ಮಿಬ್ಬರ ವಿವಾಹವು ಆಗದಿದ್ದರೂ, ಪರಸ್ಪರ ಹೃದಯವು ಪ್ರೇಮದಿಂದ ಒಂದಾಗಿರುವವು. ಆದ್ದರಿಂದ ನಾನು ನಿಮ್ಮ ಮೈಗಾವಲಿಗಾಗಿ ಪುರುಷವೇಷದಿಂದ ನಿಮ್ಮ ಸಂಗಡ ಬರುವೆನು. ನನ್ನನ್ನು ಸಂಗಡ ಕರೆದುಕೊಂಡು ಹೋಗಬೇಕೆಂದು ಬೇಡಿಕೊಂಡಳು. ಅದಕ್ಕೆ ಕೃಷ್ಣರಾಯರು, ಪ್ರಿಯೇ! ನಿನ್ನನ್ನು ಸಂಗಡ ಕರೆದುಕೊಂಡುಹೋದರೆ ರಾಮರಾಜನು ಏನಂದಾನು? ಕೈಹಿಡಿದ ಕಾರ್ಯವನ್ನು ಮಾಡದೆ

ಜೋಲುಮೋರೆಯಿಂದ ಹಿಂತಿರುಗುವಷ್ಟು ಈ ಕೃಷ್ಣರಾಯನು ಹೇಡಿಯೇ! ನೀನು ಆನಂದದಿಂದ ನನಗೆ ಅಪ್ಪಣೆಯನ್ನು ಕೊಡು, ವಿಜಯಿಯಾಗಿ ಬರುವೆನು ಎಂದು ಹೇಳಿ ಅವಳ ಅನುಮತಿಯನ್ನು ಪಡೆದು ಶತ್ರುವಿನ ಪಾಳಯಕ್ಕೆ ಹೊರಟನು.

(೩)

ಮಧ್ಯರಾತ್ರಿಯ ಸಮಯವು. ಮೋಡವು ಕವಿದು ಕಗ್ಗತ್ತಲೆಯು ಮುಸುಕಿದೆ. ಇಂಥ ಹೊತ್ತಿನಲ್ಲಿ ಮನೆಯನ್ನು ಬಿಟ್ಟು ಯಾರಾದರೂ ಹೊರಬೀಳಬಹುದೇ ಅದೋ ಅಲ್ಲಿ ನೋಡಿರಿ! ಕೃಷ್ಣವರ್ಣದ ಕುದುರೆಯಮೇಲೆ ಕುಳಿತು ಇಂಥ ಗಾಢಾಂಧಕಾರದಲ್ಲಿ ಯಾವನೋ ಹೊರಟಿರುವನು. ವಾಚಕರೇ, ಇವನನ್ನು ಗುರ್ತಿಸಿದಿರಾ! ಈತನು ಶತ್ರುಗಳ ಸ್ಥಿತಿಗತಿಗಳನ್ನು ತಿಳಿಕೊಂಡುಬರುನೆಂದು ಪ್ರತಿಜ್ಞೆಯನ್ನು ಮಾಡಿದ ಕೃಷ್ಣರಾಯನು. ಆತನು ಶತ್ರುವಿನ ಸ್ಥಿತಿಯನ್ನು ನೋಡಿಕೊಂಡುಬರುವೆನೆಂದು ರಾಯನಮುಂದೆ ಪ್ರತಿಜ್ಞೆಯನ್ನು ಮಾಡಿ ಆತನನ್ನು ಸಂಪೂರ್ಣವಾಗಿ ಮೋಸಗೊಳಿಸಿದನು. ಮತ್ತು ತಾನೇ ದೇವಗಿರಿಯ ರಾಜನಾಗಬೇಕೆಂದು ಆಲೋಚಿಸುತ್ತ ಮಾರ್ಗವನ್ನು ಕ್ರಮಿಸುತ್ತಿದ್ದನು. ಆತನು ತನ್ನ ವಿಚಾರದಲ್ಲಿಯೇ ಲೀನನಾದ್ದರಿಂದ ತನ್ನ ಹಿಂದೆ ಯಾರು ಬರುವರೆಂಬ ಅರಿವು ಸಹ ಆತನಿಗೆ ಇದ್ದಿಲ್ಲ.

ಇತ್ತ ವೀರಮತಿಯು ಕೃಷ್ಣರಾಯನಿಗೆ ನಿರೂಪವನ್ನು ಕೊಟ್ಟು ಕಳುಹಿಸಿದಳು. ಆದರೆ ಅವಳಿಗೆ ಮನೆಯಲ್ಲಿ ಸುಮ್ಮ ಕೂಡಲಿಕ್ಕೆ ಮನಸ್ಸಾಗದೆ ತಳಮಳಿಸಹತ್ತಿದಳು. ನನ್ನ ಪತಿಯು ಶತ್ರುವಿನ ಪಾಳಯಕ್ಕೆ ಒಬ್ಬನೇ ನಡೆದಿರಲು ನಾನು ನಿಶ್ಚಿಂತೆಯಿಂದ ಇಲ್ಲಿರುವುದು ನ್ಯಾಯವೆ? ಕ್ಷತ್ರಿಯ ಕನ್ಯೆಯಾದ ನಾನು ಸಮರಕ್ಕೆ ಹೆದರಬೇಕೆ? ಎಂದು ಯೋಚಿಸಿ, ಏನನ್ನೋ ನಿಶ್ಚಯಿಸಿ, ಪುರುಷವೇಷವನ್ನು ತೊಟ್ಟು, ಅಶ್ವಾರೂಢಳಾಗಿ ಪತಿಯನ್ನು ಹಿಂಬಾಲಿಸಿ ನಡೆದಳು ಕೃಷ್ಣರಾಯನ ಹಿಂದಿನಿಂದ ಅವನಿಗೆ ತಿಳಿಯದಂತೆ ಇವಳೇ ನಡೆದಿದ್ದಳು ಪ್ರೇಮದ ಪ್ರಭಾವವು ಅಗಾಧವಾದದ್ದು. ರಾತ್ರಿಯ ಗಾಢಾಂಧಕಾರಕ್ಕೂ, ನಿರ್ಜನವಾದ ಅರಣ್ಯಕ್ಕೂ ಹೆದರದೆ, ಅಬಲೆಯಾದರೂ ಅವಳು ತನ್ನ ಪ್ರಿಯವಸ್ತುವಿನ ಕಡೆಗೆ ನಡೆದಿದ್ದಳು. ಪ್ರೇಮಕ್ಕೆ ಪಾತ್ರಾಪಾತ್ರವಿಚಾರವೇ? ಯೋಗ್ಯಾಯೋಗ್ಯಸಮಯವೇ?

(೪)

ದಟ್ಟವಾದ ಗಿಡದ ಪುಟಪಿನಲ್ಲಿ ಯಾರೋ ಮೆಲ್ಲಮೆಲ್ಲನೆ ಮಾತಾಡುವದು ಕೇಳಿ ಹಿಂದೆಬರುವ ಅಶ್ವಾರೋಹಿಣಿಯಾದ ಯುವಕನು ತನ್ನ ಅಶ್ವವನ್ನು ನಿಲ್ಲಿಸಿ ಅವರ ಗುಪ್ತಭಾಷಣವನ್ನು ಮರೆಗೆ ನಿಂತು ಕೇಳಹತ್ತಿದನು. ಇದುರಿಗೆ ನಿಂತಿದ್ದ ವ್ಯಕ್ತಿಯನ್ನು ಕುರಿತು, ಕೃಷ್ಣರಾಯನು ಭಲೆ! ನೀವುತಂದ ಸಮಾಚಾರವೇನು? ಎಂದು ಬಹು ಉತ್ಕಂಠತೆಯಿಂದ ಕೇಳಿದನು. ಅದಕ್ಕೆ ಆ ವ್ಯಕ್ತಿಯು, ಕೃಷ್ಣ ರಾಯಾ

ಇನ್ನು ಸಂಶಯವೇಕೆ? ಒಮ್ಮೆ ವಚನವನ್ನು ಕೊಟ್ಟಿಲ್ಲವೇ! ಬೆಳಗಾಗುವದರೊಳಗೆ ನೀನು ದೇವಗಿರಿಯ ಅರಸನು! ರಾಮರಾಜನು ನಿನ್ನನ್ನು ಇಷ್ಟು ನಂಬಿದ್ದು ನಮಗೂ ನಿನಗೂ ಹಿತವನ್ನುಂಟುಮಾಡಿತು. ಕೃಷ್ಣರಾಯನು ಶತ್ರುವಿನ ಸಮಾಚಾರವನ್ನು ತರುವನೆಂಬ ಎಣಿಕೆಹಾಕುತ್ತ ಅವನು ಸುಮ್ಮನೆ ಕೂಡಲಿ. ನಾವು ಅಕಸ್ಮಿತವಾಗಿಹೋಗಿ ಆತನನ್ನು ಕೊಲ್ಲಿಸಿ ನಿನ್ನನ್ನು ಪಟ್ಟಗಟ್ಟುವೆನೆಂದು ಹೇಳಿದನು. ಮರೆಗೆ ನಿಂತು ಕೇಳುತ್ತಿದ್ದ ಯುವಕನಿಗೆ ಇವರ ಭಾಷಣವನ್ನು ಕೇಳಿ ತಲೆಯಮೇಲೆ ವಜ್ರಘಾತವಾದಂತಾಯಿತು. ಕ್ರೋಧದಿಂದ ಆತನ ಸರ್ವಾಂಗವೂ ಥರಥರ ನಡುಗತ್ತಿತ್ತು. ಕೂಡಲೆ ಅವನಿಗೆ ದಿವ್ಯಶಕ್ತಿಯು ಬಂದಂತಾಗಿ ತನ್ನ ಕತ್ತಿಯನ್ನು ವರೆಯಿಂದ ಹಿರಿದು, ಸಂತಾಪದಿಂದ ನೀಚಾ! ವಿಶ್ವಾಸಘಾತಕಾ!! ಕುಲಾಂಗಾರಾ!!! ಸ್ವಾರ್ಥಲೋಲುಪನಾಗಿ ಸ್ವಾಮಿದ್ರೋಹವನ್ನು ಬಗದೆಯಾ ಎನ್ನುತ್ತ ತನ್ನ ಹಿರಿದ ಖಡ್ಗದಿಂದ ಕೃಷ್ಣರಾಯನ ಎದೆಗೆ ಕಸುವಿನಿಂದ ತಿವಿದನು. ಕೃಷ್ಣರಾಯನು ಗಾಯಹೊಂದಿ, ಕುದುರೆಯಿಂದ ಕೆಳಗೆಬಿದ್ದು "ಹಾಯ್ ವೀರಮತೀ" ಎಂದು ದೀನಸ್ವರದಿಂದ ಕೂಗುತ್ತಿರಲು, ಪುರುಷವೇಷಧಾರಿಯಾದ ವೀರಮತಿಯು ಅವನನ್ನು ತಡೆದು, ನೀಚಾ! ಸುಮ್ಮನಿರು. ಯಾವ ಮುಖದಿಂದ ನೀನು ಸ್ವಾಮಿದ್ರೋಹವನ್ನು ಬಗೆಯಲು ಎಣಿಕೆಹಾಕುತ್ತಿದ್ದಿಯೋ ಆ ನಿನ್ನ ಅಪವಿತ್ರವಾದ ಮುಖದಿಂದ ನನ್ನ ನಾಮೋಚ್ಚಾರವನ್ನು ಮಾಡಬೇಡ ಎಂದು ತಿರಸ್ಕಾರದಿಂದ ನುಡಿದಳು. ಅದನ್ನು ಕೇಳಿ ಕೃಷ್ಣರಾಯನು ಪಶ್ಚಾತ್ತಾಪಪಟ್ಟು ಪ್ರಿಯೇ! ನಾನು ಸ್ವಾಮಿದ್ರೋಹಿಯೂ, ದೇಶದ್ರೋಹಿಯೂ ಆಗಿ ಘೋರವಾದ ನರಕದಲ್ಲಿ ಬೀಳುತ್ತಿದ್ದೆನು. ಅದನ್ನು ನೀನು ತಪ್ಪಿಸಿದಿ. ನನಗೆ ಶಿಕ್ಷೆಯಾದರೂ ಬಹು ಚನ್ನಾಗಿಯೇ ಆಯಿತು. ಕ್ಷಣದಲ್ಲಿ ನಾನು ಪರಲೋಕಕ್ಕೆ ತೆರಳುವೆನು. ನನ್ನ ಸರ್ವಾಪರಾಧಗಳನ್ನೂ ಕ್ಷಮಿಸು ಎನಲು, ವೀರಮತಿಯು ದುಃಖದಿಂದ ಕನಿಕರಪಟ್ಟು ನಾಥಾ! ನೀವು ಕುಮಾರ್ಗದಿಂದ ಹೋಗುತ್ತಿದ್ದಿರಿ. ನಾನು ನಿಮ್ಮನ್ನು ಪಾಪಕರ್ಮದಿಂದ ಪರಾವೃತ್ತವಾಡಿದೆನು. ಆದರೆ ಪರಲೋಕಕ್ಕೆ ನಿಮ್ಮನ್ನೊಬ್ಬರನ್ನೇ ಹೋಗಗೊಡದೆ ನಾನೂ ನಿಮ್ಮಸಂಗಡ ಬರುವೆನು. ಎಂದು ಹೇಳಿ ಪತಿಯ ಹೃದಯದ ರಕ್ತದಿಂದ ಮಿಂಣಾಗಿದ ಖಡ್ಗವನ್ನು ತನ್ನ ಹೃದಯದಲ್ಲಿ ತಿವಿದುಕೊಂಡಳು. ವೀರಮತಿಯ ದೇಹವು ಕೃಷ್ಣರಾಯನಮೇಲೆ ಬಿದ್ದಿತು. ಅವರಿಬ್ಬರ ಪ್ರಾಣಜ್ಯೋತಿಗಳು ವಾತಾವರಣದಲ್ಲಿ ಮೇಲನವಾದವು. ಪ್ರೇಮದ ಮಹಿಮೆಯು ಅಗಾಧವಾದದ್ದು!

ಕೃಷ್ಣಾಬಾಯಿ ಕುಲಕರ್ಣಿ, ಸವಣೂರ.

# ಮಾನವ ಸುಖಬೋಧಾಮೃತ

(ಹಿಂದಿನ ಸಂಚಿಕೆಯಿಂದ ಮುಂದರಿಸಿದ್ದು)

## ೪. ಸತಿಯ ಕರ್ತವ್ಯ.

ವಿಧಿವಿಹಿತದಿಂ ಕರ್ಮವೆಸಗುತೆ |
ಸದಯನಾಗಿಹ ಪತಿಯ ನೊಲಿಯುತ್ತೆ |
ಮದವಿವರ್ಜಿತಳಾಗಿ ದೇವನ ಪದವ ಪೂಜಿಸುತೆ ||
ಮುದದಿಭಕ್ತಿಯ ನಾರ್ಜಿಸುತೆ ಧುವ |
ನದೊಳು ಸಂಸೃತಿಯನ್ನು ಪಾಲಿಪ |
ವಿಧವನರಿವಾಸತಿಯು ಮನ್ನಣೆಯಾಂತು ಮೆರೆಯುವಳು ||೧||

ಆವುದಂ ಪರಿಕಿಪುದು ಮೊದಲೊಳ್ |
ಗಾವುದರೊಳಂ ಮನವನಿಡುವುದ |
ದಾವುದದು ಮುಂದಣಭಿವೃದ್ಧಿಗೆ ಹೇತುವೆಂದೆನುತೆ ||
ಭಾವಿಸುತೆ ಸಜ್ಜನರ ನೀನುರ |
ಸೇವಿಸುತವರ ನೀತಿವಚನವ |
ಭಾವದೆ ಮನನಗೈದು ಕೀರ್ತಿಯನಾಂತು ಬಾಳುವುದು ||೨||

ಉಡುಗೆ ತೊಡಿಗೆಗಳಲ್ಲಿ ಕಾಲವ |
ಬಿಡದೆ ಕಳೆಯುತೆ ತನ್ನರೂಪವ |
ನಡಿಗಡಿಗೆ ನೋಡಿಕೊಳುತತಿಗರ್ವವನು ತಾಳುತಲಿ ||
ಎಡರಿನೊಳು ಪತಿಯಿರ್ಪ ಗೃಹವಂ |
ಬಿಡುತೆಜನಕನ ನಿಳಿಯದೆ ಸುಖದ |
ಗಡಣದೊಳಿರುತೆ ಪರಪುರುಷರೊಳು ಬೆಡಗತೋರುತಿಹ ||೩||

ವನಿತೆಯೀಪರಿ ವೃತ್ತಿಯಾನುತ |
ಅನುಪಮ ಸುರೂಪವತಿ ತಾನೆಂ |
ದೆನಿಸಿಕೊಳ್ಳುತೆ ಮೆರೆಯುತಿರಲೇಂ ಯೋಗ್ಯಳೆನಿಸುವಳೆ ||

ಇನಿಯನೊರೆಯುವ ದುರುಳವಾತಿಗೆ |
ಮನವಕೆರದಂತಿರುತೆ ಮೋಹಕ |
ಘನತೆಯಂ ತಾನೀಗಿ ಕೊಳ್ವಾರಮಣಿ ಹೇಯಳಲೆ ||೪||

ಕರುಣೆಯಿಂ ಸನ್ನಡತೆಯಿಂದಂ |
ತಿರೆಯುದನು ಭವವಾಂತು ರೂಪವ |
ದಿರದೆ ಮನಕುರೆನಲವಕಾಪುಟ್ಟಿಸುವ ತೆರಮಿರುತೆ ||
ಅರಿವಿಗೆಡೆಯಹ ಕಾರ್ಯಗಳ ನಾ |
ಚರಿಸಿ ಗುರುಹಿರಿಯರೊಳು ಬಕುತಿಯ |
ನಿರಿಸಿ ಜೀವಿತ ಯಾತ್ರೆಗೈವಳು ಸಾಧ್ವಿಯೆನಿಸಿಹಳು ||೫||

ಆವಗಂ ತಾನಿಂತಿರುವವಳ |
ನೋವದಲೆ ನಲವಿಂದೊರಕಿಸ |
ದೇವನೆಂದತಿಶಯದ ತೋಷದೊಳವಳ ಪೋಷಿಸುತೆ ||
ಕಾವುತಂ ಮೋದವ ನನುಗೊಳಿಸಿ |
ಭಾವಕಿಯು ತಾನೆಳಸಿದ ಮನೋ |
ಭಾವಗಳ ಸಲ್ಲಿಪುದು ದಿನಿಯನ ಸೌಖ್ಯವೃದ್ಧಿಗಳೆ ||೬||

ಮನೆಗವಳ ಯಜಮಾನಿಯೆನಿಸುತೆ |
ಘನತೆಯಿಂ ಕಾಣುತ್ತ ಸೇವಕ |
ಕನುವ ನರಿದವಳಾಣತಿಯ ಮಾರ್ದವದಿನಡೆಸುವುದು ||
ಮನಕೆ ಕಾರಣ ತೋರದಿರ್ದೊಡೆ |
ವನಿತೆಯಾಸೆಯ ಸಲ್ಲಿಸುತಿರು |
ಸನುಮತದೊಳಂ ನಿನ್ನ ಸೌಖ್ಯಕೆ ಮುಖ್ಯ ಭಾಜಕಳು ||೭||

ಕಂಡತಪ್ಪನು ನಯದೆ ತಿದ್ದುತೆ |
ಖಂಡಿಸದ ಪರಿವಶಗೊಳಿಸಿ ಭೂ |
ಮಂಡಲದೆ ತವಸೌಖ್ಯವೆಲ್ಲವ ಪಳಿನೆಸಾರುತಿದೆ ||
ಕೊಂಡಿತನವಂ ಬಿಟ್ಟು ನಿನ್ನು |
ದ್ದಂಡ ಗೋಪ್ಯವಿಷಯಗಳೊರೆಯುತೆ |
ಪಂಡಿತವಕ್ಕಿಯಂತೆ ಪೊರೆವುದು ಭವದರಕ್ಷಕನು ||೮||

ಅಪಕರವ ನೀಡಿರುವ ಶುಕಂಗೆ |
ಭಾಸುರನಿಕರಗೆಯವನು ಬಿಟ್ಟೊಡೆ |
ದೋಷದಾಸುತೆ ಕೊನೆಗೆ ತಾ ಭ್ರಷ್ಟತೆಯುತಾಂ ಬವೊಳು ||

ಭಾಸುರಾಂಗಿಯೊಳಾದ ಶಿಶುಗಳ |
ಗಾಸರಿಯಲಾದವಳುಳಿಯುತಿ ದು |
ಲಾಶೆಯಿಂ ಪರಸತಿಯ ಸೇರ್ದೊಡೆ ನಾಶವೊಂದುವೆಯೊ ||೯||

ಇಂತುಮೆರೆದಿಹ ಕಾಂತೆ ಸದ್ಗುಣ |
ವಂತೆಯಾಗಿರೆ ರೋಗವಾರದೊ |
ಳಂ ತಪಿಸುತಾರೋಗ್ಯಹೀನೆಯುಳಾದ ಕಾಲದೊಳು ||
ಸಂತವಿಸಿ ಸವಿನುಡಿಯೊಳಾಕೆಯ |
ಮುಂತಣದ ವೃದ್ಧಿಯನು ಬಯಸುತೆ |
ಸಂತಸವಗೊಸಸುತಿರೆ ಶತವೈದ್ಯರಿಗೆ ಸರಿಯೆನಿಪೆ ||೧೦||

ಮೆರೆವ ಜಾತಿಗನುಗುಣವೆಂದೆನಿ |
ಸಿರುವ ಸನುವುಂ ಬುದ್ಧಿದಯೆಯುಂ |
ಕರುಣದಿಂದಂ ದೇವನೀಡಿಹುದಂ ನಿರುಕಿಸುತಲಿ ||
ಚರಿಪ ಕಜ್ಜದ ತಪ್ಪನುಳಿಯುತೆ |
ಕೊರತೆಗಳಿಗತಿ ಕುಪಿತನಾಗದೆ |
ಮರೆಯದಲೆ ನಿನ್ನೊಳಿಹ ಲೋಪವತಿದ್ದಿಕೊಳುತಿಹುದು ||೧೧||

---

# ಗ್ರಂಥಪರಿಚಯ.

---

"ಸುಬೋಧ":—ಅನೇಕ ವರ್ಷಗಳಿಂದ ಸುಪ್ರಸಿದ್ಧರಾದ ಶ್ರೀಯುತ ಎಂ. ರಾಮರಾವ್ ಅವರು, ಸುಬೋಧ ಕುಸುಮಾಂಜಲಿ ಎನ್ನುವ ಗ್ರಂಥಮಾಲೆಯನ್ನು ಪ್ರಾರಂಭಿಸಿ ಅನೇಕ ಭಕ್ತರ ಸಾಧುಸಂತರ ಚರಿತ್ರೆಗಳನ್ನು ಪ್ರಕಟಿಸುತ್ತಿರುವ ವಿಷಯವು ನಮ್ಮ ಕನ್ನಡಿಗರಿಗೆ ಹೊಸದಲ್ಲ. ಇಷ್ಟರಲ್ಲೇ ತೃಪ್ತರಾಗದೆ ನವರಾತ್ರಿಯಿಂದ "ಸುಬೋಧ" ಎನ್ನುವ ಮಾಸಪತ್ರಿಕೆಯನ್ನು ಪ್ರಾರಂಭಿಸಿರುವುದು ಸ್ತೋತ್ರಾರ್ಹವಾದುದು. ಮೊದಲನೆಯ ಸಂಚಿಕೆಯು ನಮ್ಮ ಕಾರ್ಯಸ್ಥಾನವನ್ನಲಂಕರಿಸಿರುವುದು. ಈ ಸಂಚಿಕೆಯಲ್ಲಿ ಬರೆಯಲ್ಪಟ್ಟಿರುವ ಪ್ರತಿಯೊಂದು ಲೇಖನಗಳೂ ಅತಿ ಶ್ಲಾಘ್ಯವಾದುದು. ಕನ್ನಡ ಭಾಷಾಭಿಮಾನಿಗಳೆಲ್ಲರೂ ಈ ಪತ್ರಿಕೆಗೆ ಚಂದಾದಾರರಾಗಿ ತನ್ಮೂಲಕ ಮಹನೀಯರಾದ ಸಂಪಾ

ಜಳಕು ಕೈಗೊಂಡಿರುವ ಮಹತ್ಕಾರ್ಯದ ಸದುದ್ದೇಶವನ್ನು ಸಫಲಗೊಳಿಸ ಬೇಕಾಗಿ ಪ್ರಾರ್ಥನೆ. ಕರ್ನಾಟಕದಲ್ಲಿ ದಿನೇ ದಿನೇ ನೂತನವಾದ ಮಾಸಪತ್ರಿಕೆಗಳು ಜನಿಸುತ್ತಿರುವುದು ಶುಭಸುದ್ದಿಯಾದಗೂ ಅವುಗಳಲ್ಲನೇಕವುಗಳ ದುರವಸ್ಥೆಯನ್ನು ಸ್ಮರಿಸಿದಾಗ ಮಾತ್ರ ವಿಷಾದವಾಗುವುದು. ಅಂತಹ ದುರವಸ್ಥೆಗೆ ಸಿಕ್ಕದೆ ಜಗನ್ಮಾತೆಯ ಪರಮಾನುಗ್ರಹದಿಂದ ಈ ಪತ್ರಿಕೆಯು ಸ್ಥಿರವಾಗಿ ನಡೆಯಲೆಂದು ಪ್ರಾರ್ಥಿಸುವೆವು. ಬೇಕಾದವರು.

ಈ ಕೆಳಗಿನ ವಿಳಾಸಕ್ಕೆ ಬರೆದು ತರಿಸಿಕೊಳ್ಳಬಹುದು.

ಸಂಪಾದಕ "ಸುಬೋಧ"
ಹೊಸಮಾರ್ಕೆಟ್, ಬೆಂಗಳೂರು.

---

"ಸುವಾಸಿನಿ":—ತಿಳಿಗನ್ನಡದ ಮಾಸಪತ್ರಿಕೆ. ವಾರ್ಷಿಕ ಚಂದಾ ರೂ. 1-1-0.

ಈ ಪತ್ರಿಕೆಯು ಸುಮಾರು ಇಪ್ಪತ್ತೈದು ವರ್ಷಗಳ ಹಿಂದೆ ಈಗ ಮದರಾಸ್ ಸರ್ಕಾರದ ಕನ್ನಡ ಪರಿವರ್ತಕರಾಗಿರುವ ಶ್ರೀಯುತ ಬೆನಗಲ್ ರಾಮರಾಯರ ಸಂಪಾದಕತ್ವದಲ್ಲಿ ಹುಟ್ಟಿ ಎರಡು ವರ್ಷಗಳು ಮಾತ್ರ ನಡೆದು ಕೆಲವು ಅನಾನುಕೂಲದಿಂದ ಮನ್ನೆಯವರೆಗೂ ಅಜ್ಞಾತವಾಗಿದ್ದು ಕಳೆದ ತಿಂಗಳಿನಿಂದ ಪುನಃ ಪ್ರಕಟವಾಗುತ್ತಲಿರುವುದು. ಅನೇಕ ಮಹಾನುಭಾವರುಗಳಿಂದಲೂ ಪಂಡಿತವರ್ಯರಿಂದಲೂ ಬರೆಯಲ್ಪಟ್ಟ ಲೇಖನಗಳು ಈ ಪತ್ರಿಕೆಯಲ್ಲಿ ಕಂಗೊಳಿಸುತ್ತಿರುವುವು. ಇಂತಹ ಪತ್ರಿಕೆಗಳ ಅವಶ್ಯಕತೆಯು ಕನ್ನಡನಾಡಿಗೆ ಇದ್ದರೂ ಕೂಡ ಕನ್ನಡ ಪತ್ರಿಕೆಗಳಿಗೆ ಸಾಕಾದಷ್ಟು ಪ್ರೋತ್ಸಾಹವಿಲ್ಲವೆಂದು ವಿಷಾದದಿಂದ ಹೇಳಬೇಕಾಗಿರುವದು. ಕನ್ನಡ ಭಾಷಾಭಿಮಾನಿಗಳು ಮೇಲ್ಕಂಡ ಪತ್ರಿಕೆಗೆ ತಮ್ಮ ಉದಾರವಾದ ಹಸ್ತವನ್ನಿತ್ತು ರಕ್ಷಿಸಬೇಕೆಂದು ಹಾರೈಸುವೆವಲ್ಲದೆ ಜಗತಿಯು ಅಂತಹ ಸದ್ಬುದ್ಧಿಯನ್ನು ನಮ್ಮ ಕನ್ನಡಿಗರಿಗೆ ಕೊಡಲೆಂದು ಬೇಡುತ್ತೇನೆ. ಈ ಪತ್ರಿಕೆಯು ನಿರಂತರವಾಗಿ ಕನ್ನಡಿಗರ ಸೇವೆಗೈಯಲಿ.

ಬೇಕಾದವರು ಕೆಳಗಿನ ವಿಳಾಸಕ್ಕೆ ಬರೆದು ತರಿಸಿಕೊಳ್ಳಬಹುದು.

ಮ್ಯಾನೇಜರ್ "ಸುವಾಸಿನಿ"
ಮಂಗಳೂರು.



# ಸರಸ್ವತಿ

ಸಂಪುಟ ೫ } ಕ್ರೋಧನ ವರ್ಷ — ಕಾರ್ತೀಕ ಮಾಸ

## ಮಾತೃಪೂಜಾ

### ಪ್ರಾರ್ಥನೆ

ಸುಧಿವೆ ಸತ್ಯಮುಂ ಜನನಿಯೆ ಕೇಳ್ ನೀ
ನೆನ್ನವಳಾನುಂ ನಿನ್ನ ಸುತಂ |
ಎನ್ನಯ ಸರ್ವಸ್ವವು ನೀನಾಗಿಹೆ
ನಿನ್ನ ದೇಹಮಿದು ರತ್ನಯುತಂ ||

ನಿನ್ನಯ ಜೀರ್ಣಾಸನವಿದು ಸ್ವರ್ಗದ
ಸಿಂಹಪೀಠದೊಳ್ ರಮ್ಯತರಂ |
ನಿನ್ನ ಪಾದರಜದೊಂದೊಂದುಂ ಕಣ
ಕೆಣೆಯೆಣಿಪುದೆ ಮೌಕ್ತಿಕನಿಕರಂ ||

ಧರ್ಮವು ನೀನೇ ಕರ್ಮವು ನೀನೇ
ನೀನೆ ಯೋಗಭೋಗವ ನೀವಳ್ |
ನಿನ್ನನುಳಿಯಲಾರೀ ಲೋಕದೆಪೇಳ್
ಮಂಡಿತರೆನಿಪರು ಗೌರವದೊಳ್ ||

ತಾಯಾಗಿರೆ ನೀನೆಮಗೆ ನಿನ್ನತುಳ
ಮಮತೆಯತೋರಾ ಕರುಣದಲಿ |
ಶಕ್ತಿರೂಪದಿಂ ಬಂದು ನಿಂದು ನೀ
ಸನ್ನಪೂರ್ಣೆಯೆಂಬಂದದಲಿ ||

## ೨೦ ಕಲ್ಯ

ನನಿಯ ಪದತಲವಂ ಸೇರುತೆ ನಾವ್
ದೀಕ್ಷಾಗ್ರಹಣವ ಗೈಯುವ ಬಾ ।
ಭಾರತೀಯರೆಂಬೀ ನಾಮಾಕ್ಷರ
ಗಳನೆ ಸ್ವರ್ಣದೊಳ್ ಕಡೆಯುವ ಬಾ ।

ಕಾಲಕುಂಡದೊಳ್ ತೇಜೋಗ್ನಿಯ ಪಿ
ಟ್ಟುದ್ವೇಷೇಂಧನವ ಸುರಿಸುತ್ತೆ ।
ದುರ್ಮತಿ ದುರ್ಗತಿ ದುಃಖದರಿದ್ರತೆ
ಯೆಲ್ಲವನದರೊಳ್ ತ್ಯಜಿಸುತ್ತೆ ॥

ಜೈನ ಹಿಂದು ಪಾರಸೀಯ ಹೋದಿ
ಮುಸಲ್ಮಾನ ಸಿಕ್ಖ ಈಸಾಯಿ ।
ಕೋಟಿಕಂಠವುಂ ಕಲೆಯುತೆ ಪೇಳಿರಿ
" ಹಮಸಬಹೈ ಭಾಯಿ ಭಾಯಿ " ॥

ಪುಣ್ಯಭೂಮಿಯಿದು ಸ್ವರ್ಣಭೂಮಿಯಿದು
ಜನ್ಮಧಾತ್ರಿ ಯೆಮಗಿವಳೆಂದು ।
ಇದಕೆಣೆ ಎನಿಸಿಹ ದೇಶವಾವುದೀ
ಜಗತೀವಲಯ ದೊಳಿಲ್ಲೆಂದು ॥

# ರಾಷ್ಟ್ರೀಯ ಶಿಕ್ಷಣಸ್ವರೂಪವು.

ಇಂದಿನವರೆಗೆ "ರಾಷ್ಟ್ರೀಯಲಕ್ಷಣದ" ವಿಷಯವಾಗೆಷ್ಟೋ ವಿಚಾರಗಳು ಪ್ರಕಾಶವಾದರೂ ಆ ವಿಚಾರಗಳಿಂದ ಯಾವುದನ್ನು "ರಾಷ್ಟ್ರೀಯ ಶಿಕ್ಷಣ" ವೆನ್ನಬೇಕೋ ಎನ್ನುವುದೇ ಸ್ಪಷ್ಟವಾಗಿ ತಿಳಿಯದಂತಾಗಿದೆ. ಪ್ರಚಲಿತಶಿಕ್ಷಣಕ್ರಮವನ್ನೇ ರಾಷ್ಟ್ರೀಯಶಿಕ್ಷಣವಲ್ಲವೆಂದು ಹೇಳಬಹುದಾದರೂ ಯಾವಶಿಕ್ಷಣವನ್ನು ರಾಷ್ಟ್ರೀಯ ಶಿಕ್ಷಣವೆಂದು ಹೇಳಬೇಕೋ ಆ ವಿಷಯವನ್ನಾದರೂ ಯೋಚಿಸಬೇಕಾಗಿದೆ. "ರಾಷ್ಟ್ರೀಯ" ವಿಶಿಷ್ಟತೆಯನ್ನು ಹೊಂದಲು ಶಿಕ್ಷಣಕ್ರಮದಲ್ಲಿ ಎರಡು ಪ್ರಧಾನವಾದ ವಿಷಯಗಳು ಇರಬೇಕೆನ್ನುವುದು ನಮ್ಮಭಿಪ್ರಾಯವು. ಅತ್ಯಾವಶ್ಯಕವಾದ ಮೊದಲನೆಯ ವಿಷಯವು, ರಾಷ್ಟ್ರೀಯಗುಣಗಳ, ಪರಂಪರಾಗತ ರಾಷ್ಟ್ರೀಯ ಆದರ್ಶಗಳ ಪರಿಪೋಷಣೆಯು ಪ್ರಥಮತಃ ಆಗಬೇಕು. ಒಂದುವೇಳೆ ಒಂದು ರಾಷ್ಟ್ರವು ಮತ್ತೊಂದು ರಾಷ್ಟ್ರದಿಂದ ಯಾವುವಾದರೂ ಪ್ರಾಧಾನ್ಯವಾದ ವಿಷಯದಲ್ಲಿ ಭಿನ್ನವಾದರೆ ಆ ರಾಷ್ಟ್ರವು ತನ್ನ ಆದರ್ಶದಲ್ಲಿ ಇತರ ರಾಷ್ಟ್ರದ ಆದರ್ಶದಿಂದ ಭಿನ್ನವಾಗುವುದು. ರಾಷ್ಟ್ರವು ರಾಷ್ಟ್ರೀಯ ಆದರ್ಶದಿಂದ ಎಷ್ಟು ವಿಶಿಷ್ಟವಾಗುವುದೋ ಜಾತಿ, ರಕ್ತ, ವರ್ಣಾದಿಗಳಿಂದ ಅಷ್ಟಾಗಲಾರದು. ಈ ರಾಷ್ಟ್ರೀಯಾದರ್ಶವು (ರಾಷ್ಟ್ರಪ್ರೇಮ) ಶರೀರದಲ್ಲಿ ಪ್ರವಹಿಸುತ್ತಿರುವ ರಕ್ತದೊಡನೆ ಸೇರಿ ಜಾಗ್ರತಸ್ವಪ್ನಾವಸ್ಥೆಯಲ್ಲಿಯೂ, ಎದ್ದು ಕೂಡುವಾಗಲೂ ಎಲ್ಲ ಕಾಲ ಅವಸ್ಥೆಗಳಲ್ಲಿಯೂ ನಮ್ಮಲ್ಲಿ ತುಂಬಿಯೇ ಇರುವುದು. ಪಾಶ್ಚಾತ್ಯದೇಶದ ಪ್ರತಿಯೊಂದು ಸ್ಥಳದಲ್ಲಿಯೂ ಭೌತಿಕತೆಯು ವ್ಯಾಪಿಸಿದ್ದರೆ, ಭಾರತವರ್ಷದ ಪ್ರತಿಯೊಂದು ಕಣದಲ್ಲಿಯೂ ಆಧ್ಯಾತ್ಮಿಕತೆಯು ತನ್ನ ಸಿಂಹಾಸನವನ್ನೂರಿರುವುದು. ಎರಡು ಜಾತಿಗಳು ಯಾವುದಾದರೊಂದು ವಿಷಯದಲ್ಲಿ ಏಕಭಾವವನ್ನು ಹೊಂದಿದಾಗಲೆ ಅವು ಭಿನ್ನಜಾತಿಗಳೇ ಆಗುವವು.

ಎರಡನೆಯ ವಿಷಯವು:—ರಾಷ್ಟ್ರೀಯ ಅವಶ್ಯಕತೆಯೂ, ಇವುಗಳಲ್ಲಿ ಭಾವಿ ಆವಶ್ಯಕತೆಗಳ ಸಮಾವೇಶವೂ ಆಗುವುದು, ಇಂದು

ರಾಷ್ಟ್ರಕ್ಕೆ ಒಂದರ ಆವಶ್ಯಕತೆಯಿದ್ದರೆ ಮತ್ತೊಂದು ರಾಷ್ಟ್ರಕ್ಕೆ ಬೇರೊಂದು ವಸ್ತುವಿನ ಆವಶ್ಯಕತೆ ಇರಬಹುದು. ಯಾವರಾಷ್ಟ್ರಕ್ಕೆ ಯಾವುದರ ಆವಶ್ಯಕತೆಯಿರುವುದೋ ಆ ವಸ್ತುವಿನ ಪರಿಪೂರ್ಣತೆಯು ಯಾವ ವಿಧವಾದ ಶಿಕ್ಷಣದಿಂದಾಗುವುದೋ ಆ ಶಿಕ್ಷಣವೇ ರಾಷ್ಟ್ರೀಯ ಶಿಕ್ಷಣವೆನಿಸಿಕೊಳ್ಳಲು ಯೋಗ್ಯವಾಗುವುದು. ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ, ಅಮೆರಿಕಾ, ಹಿಂದೂಸ್ಥಾನ ಮೊದಲಾದ ದೇಶಗಳಿಗೆ ಬೇಕಾದ ಆವಶ್ಯಕತೆಗಳು (wants) ಒಂದಕ್ಕೊಂದು ವಿರೋಧವಾಗಿರುವುದರಿಂದ ಅಲ್ಲಲ್ಲಿಗೆ ತಕ್ಕಂತೆ ಬೇಕಾಗುವಂಥ ಅವಶ್ಯಕತೆಗಳು ಬೇರೆ ಬೇರೆ ಇರುವುದರಿಂದ ಆ ಮುಖ್ಯವಾದ ಆವಶ್ಯಕತೆಗಳನ್ನು ಪೂರ್ಣಗೊಳಿಸಲು ಯಾವಶಿಕ್ಷಣವು ಉಪಯೋಗವಾಗುವುದೋ ಅದೇ ವಂಶಪಾರಂಪರ್ಯ ರಾಷ್ಟ್ರೀಯಗುಣಗಳ ಪರಿಪೋಷಣ, ರಾಷ್ಟ್ರೀಯ ಅವಶ್ಯಕತ್ವಗಳ ಸಂಪೂರ್ಣ ಇತ್ಯಾದಿ ಫಲಗಳನ್ನು ಕೊಡುವ ಶಿಕ್ಷಣವು. ಇದರ ಹೆಸರೇ "ರಾಷ್ಟ್ರೀಯಶಿಕ್ಷಣ" (National Education). ಪ್ರಕೃತ "ರಾಷ್ಟ್ರೀಯಶಿಕ್ಷಣ" ವೆಂಬಭಿಧಾನದಿಂದ ಶಾಲೆಗಳಲ್ಲಿ ಕೊಡುತ್ತಿರುವ ಶಿಕ್ಷಣ ಅಷ್ಟೇನೂ ಉತ್ತಮವಾದುದಲ್ಲವೆಂದು ಹೇಳಬಹುದಾಗಿದೆ. ಏಕಂದರೆ ನಮ್ಮ ರಾಷ್ಟ್ರೀಯ ಗುಣಗಳು ಪೂರ್ಣವಾಗಿ ಸ್ಫೂರ್ತಿಸುವಂತಹ ಪ್ರಯೋಜನವು ಅದರಲ್ಲಿ ಎಳ್ಳಷ್ಟೂ ಇಲ್ಲವೆನ್ನುವುದು ಎಲ್ಲರೂ ಅರಿತ ವಿಷಯವೇ ಆಗಿರುವುದು. ಈ ಕಾರಣದಿಂದಲೇ ನಾವುಸಂಪೂರ್ಣ ಪಾಶ್ಚಾತ್ಯರೂ ಅಥವಾ ಸಂಪೂರ್ಣ ಭಾರತೀಯರೂ ಎನಿಸಿಕೊಳ್ಳಲಾರದೆ ಇಬ್ಬಂದಿಯಾಗಿ ತ್ರಿಶಂಕುಸ್ವರ್ಗದಲ್ಲಿ ತೂಗಾಡುತ್ತಲಿರುವೆವು.

ಆಧ್ಯಾತ್ಮಿಕ ಸ್ಥಾನಗಳಲ್ಲಿ ಕರ್ಮಶೂನ್ಯತೆಯೂ ನಿಜವಾದ ಭೌತಿಕ ಉನ್ನತಿಯ ಇಚ್ಛೆಯ ಸ್ಥಾನದಲ್ಲಿ ವಿಷಯವಾಸನಾಸಕ್ತಿಯೂ ಉತ್ಪನ್ನವಾಗಿ ಅಕರ್ಮಣ್ಯತೆಯು ಕಾರಣದಿಂದ ದ್ವಿವಿಧವಾದ ಪ್ರಗತಿಗಳು ನಿಂತು ಹೋದವು. ಭೋಗವಿಲಾಸಾಡಂಬರಟ್ಟಹಾಸಗಳಿಗಾಗಿ ದುಂದು ಖರ್ಚುಂಟಾಗಿ ಅದರಾವಶ್ಯಕಗಳು ದಿನೇ ದಿನೇ ಅಧಿಕವಾಗಿ ಬೆಳೆಯುತ್ತಬಂದರೂ ದ್ರವ್ಯಾರ್ಜನೆಗೆ ಮಾತ್ರ ಅನ್ಯಮಾರ್ಗವಿಲ್ಲವಾಯಿತು. ನಮ್ಮಸ್ವಾರ್ಥ ಸಾಧನೆಗೆ ನಾವು ಅನೇಕ ಉಪಾಯಗಳನ್ನು ಹುಡುಕತೊಡಗಿದೆವು. ಇದರ ಫಲವೇನಾಯಿತು? ನಮ್ಮ ಉನ್ನತ ಉಚ್ಛಾದಶೆಯಿಂದ ಅಧೋಗತಿಗೆ ಬಿದ್ದುಹೋದೆವು. ಅನೇಕ ಶತಾಬ್ದಗಳಿಂದ ನಮ್ಮ ಹಿರಿಯರು

ಕಷ್ಟಪಟ್ಟು ಕೂಡಿಸಿದ್ದ ಆದರ್ಶಗಳಿಗೆ ತಿಲತರ್ಪಣವನ್ನು ಬಿಟ್ಟೆವು. ಈಗಲಾದರೂ ನಮ್ಮ ಹಿರಿಯರು ನಮಗೆ ಆಸ್ತಿಯಾಗಿ ಬಿಟ್ಟುಹೋದ ಪೂರ್ವಾದರ್ಶಗಳ ಹಕ್ಕನ್ನು ಮತ್ತೆ ಗಳಿಸಿ ಉದ್ಧಾರವಾಗುವುದು ಆರ್ಯಾವರ್ತದ ಪ್ರಜೆಗಳ ಕರ್ತವ್ಯವು. ಭೌತಿಕ (Science) ತೆಯ ವಿನಹ ಮತ್ತ್ಯಾವುದರ ಕಡೆಗೂ ಲಕ್ಷ್ಯಗೊಡದೆ ಭೌತಿಕಸಾಗರದಲ್ಲೇ ಮುಳುಗಿರುವವರಿಗೆ ಈ ವಿಷಯವು ಹೇಳನವಾಗಿ ತೋರಬಹುದು. ಈ ಕಾರಣದಿಂದವರು ಆಧ್ಯಾತ್ಮಿಕ ಉನ್ನತಿಯ ಹೆಸರು ಕೇಳಿದ ಕೂಡಲೇ ಸಿಟ್ಟಾಗುವರು. ಆದರೆ ಇದು ಮೂಢತನವೆನ್ನುವುದನ್ನು ನಾವಿಲ್ಲಿ ಹೇಳಬೇಕಾದುದಿಲ್ಲ. ಎಲ್ಲೆಲ್ಲಿಯೂ ಯಾವಾಗಲೂ ಭೌತಿಕತೆಯೇ ಅಗ್ರಾಸನವನ್ನು ವಹಿಸಿದರೆ, ಆತ್ಮಿಕ, ಗೃಹಸ್ಥ, ಸಾಮಾಜಿಕ, ರಾಷ್ಟ್ರೀಯ, ಶಾಂತಿಯೂ ಉನ್ನತಿಯೂ ಎಂದಿಗೂ ಆಗಲಾರದಾದ್ದರಿಂದ ಈ ಚತುರ್ವಿಧಶಾಂತಿಗಾಗಿಯಾದರೂ ಆಧ್ಯಾತ್ಮಿಕ ಉನ್ನತಿಯ ಆದರ್ಶವಾಗುವದು ಅತ್ಯಾವಶ್ಯಕವು. ಈ ಕಾರಣದಿಂದಲಾದರೂ "ಆಧ್ಯಾತ್ಮಿಕ ಉನ್ನತಿಯ ಕಡೆಗೆ ನಿಮ್ಮ ಲಕ್ಷ್ಯವಿಲ್ಲವೋ" ಎಂದು ಕೇಳಬಹುದು. ಆಧ್ಯಾತ್ಮಿಕವಿಲ್ಲದ ಶರೀರ, ಗೃಹ, ಸಮಾಜ, ರಾಷ್ಟ್ರಗಳಿರುವುದು ಅಸಂಭವವೇ ಸರಿ. ಅದಕ್ಕೆ ನಮ್ಮ ಉತ್ತರವೇನೆಂದರೆ "ಹೌದು, ನಾವು ಭೌತಿಕ ಉನ್ನತಿಯನ್ನು ಅಪೇಕ್ಷಿಸುವುದು ಮಾತ್ರವಲ್ಲ, ಅದರ ಉನ್ನತ ಶಿಖರದಮೇಲೆ ಕುಳಿತುಕೊಳ್ಳಲು ಅಪೇಕ್ಷಿಸುತ್ತೇವೆಯಾದರೂ ಭೌತಿಕ ಮತ್ತು ಆಧ್ಯಾತ್ಮಿಕ ಉನ್ನತಿಗಳಲ್ಲಿ ನಮ್ಮಗಾವ ವಿರೋಧವೂ ಇಲ್ಲ. ಆಧ್ಯಾತ್ಮಿಕ ಉನ್ನತಿಯ ಸಲುವಾಗಿಯೇ ಭೌತಿಕ ಉನ್ನತಿಯು ಅತ್ಯಾವಶ್ಯಕವೆಂದು ಭಾವಿಸುವೆವು. "ಶರೀರಮಾದ್ಯಂ ಖಲುಧರ್ಮಸಾಧನಂ" ಎಂಬಂತೆ ಶರೀರಪೋಷಣೆ ಮಾತ್ರವಲ್ಲದೆ ಶರೀರವಿಕಾಸವೂ ಕೂಡ ಆಗಬೇಕು. ಆದರೆ ಆಧ್ಯಾತ್ಮಿಕ ಉನ್ನತಿಯ ಸಾಧನಗಳಾದ ಇವುಗಳು ಭೌತಿಕ ಉನ್ನತಿಗೂ ಸಾಧನಗಳೆಂದು ನಾವು ಭಾವಿಸಬೇಕು. "ತಸ್ಮಾತ್ ಸಕ್ತಃ ಸತತಂ ಕಾರ್ಯಕರ್ಮ ಸಮಾಚರ" ಎನ್ನುವುದೇ ನಮ್ಮಾಚರಣೆಯ ಆದರ್ಶವಾಗಿರಬೇಕು. ಭೌತಿಕ ಕಾರ್ಯಗಳನ್ನು ನಾವು ಅವಶ್ಯವಾಗಿಮಾಡಿದರೂ ಆಚರಣೆಯು ಆಧ್ಯಾತ್ಮಿಕವಾಗಿರಬೇಕು. ಯದ್ಯಪಿ ಪ್ರತ್ಯೇಕವ್ಯಕ್ತಿಯ ಹೃದಯದಲ್ಲಿ, ಗೃಹದಲ್ಲಿ, ರಾಷ್ಟ್ರದಲ್ಲಿ ಮತ್ತು ಸರ್ವಜಗತ್ತಿನಲ್ಲಿ ಶಾಂತಿಯು ಸರ್ವತ್ರ ನೆಲಸಿರಬೇಕಾದರೆ

ಮತ್ತು ಇತರ ಯಾವಪ್ರಕಾರದ ಉನ್ನತಿಗಾದರೂ ಇದರ ಆವಶ್ಯಕತೆಯು ಬೇಕಾಗಿದ್ದರೆ ನಮ್ಮಾದರ್ಶಗಳನ್ನು ಭೌತಿಕಕ್ಕನುಸಾರವಾಗಿ ತೆಗೆದುಕೊಂಡುಹೋಗಬೇಕು. ಸ್ವರ್ಗದಲ್ಲಿ ಕುಳಿತು ಈ ಜಗತ್ತಿಗವಶ್ಯಕವಾದ ಎಲ್ಲಾ ಕಾರ್ಯಗಳನ್ನೂ ನಾವು ಮಾಡಬೇಕು.

ಇದಕ್ಕಾಗಿ ನಮಗೀಗ ನಮ್ಮ ನಿಜವಾದ ಧರ್ಮದ ಶಿಕ್ಷಣವು ದೊರೆಯುವುದು ಅತ್ಯಾವಶ್ಯಕವಾಗಿರುವುದು. ಧಾರ್ಮಿಕಶಿಕ್ಷಣದ ಪ್ರಬಂಧವು ಅತಿಕಠಿಣವಾಗಿರುವುದರಿಂದ ಆ ಧಾರ್ಮಿಕಶಿಕ್ಷಣವು (Religious Education) ಅನಾವಶ್ಯಕವೆಂದು ಕೆಲವರು ಹೇಳಬಹುದು. ನಮ್ಮಾದರ್ಶ ರಕ್ಷಣೆಯಾಗಬೇಕಾದರೆ, ನಾವು ನಿಜವಾದ ಭಾರತೀಯರೆನಿಸಿಕೊಳ್ಳಬೇಕಾದರೆ ಮಾತ್ರ ನಮಗೆ ಉಪನಿಷತ್ತು ಮತ್ತು ಗೀತೆಯ ಕರ್ಮಯೋಗದ ಶಿಕ್ಷಣವು ಕೂಡಲೇ ಬೇಕಾಗುವುದು. ಅದರ ಪ್ರಬಂಧವಾದರೋ ರಾಷ್ಟ್ರಕ್ಕೆ ಅತ್ಯಾವಶ್ಯಕವಾಗಿ ಬೇಕಾಗುವುದು. ಧಾರ್ಮಿಕ ಪ್ರಬಂಧವು ಶಿಕ್ಷಣವು ಕಷ್ಟವೆಂದು ಹೇಳುವುದು ಒಪ್ಪತಕ್ಕದ್ದಲ್ಲ. ಪ್ರತಿಯೊಂದು ಪಾಠಶಾಲೆಯಲ್ಲಿ, ಪ್ರತಿಯೊಂದು ಛಾತ್ರನಿವಾಸದಲ್ಲಿ, ಪ್ರತಿಯೊಂದು ಗ್ರಾಮ ಅಥವಾ ಪಟ್ಟಣದಲ್ಲಿ ಇದರ ಪ್ರಬಂಧವು ಉಚಿತವಾಗಿ ದೊರೆಯುವಂತೆ ಮಾಡಬಹುದು. ಪಾಶ್ಚಾತ್ಯ ಸಭ್ಯತೆಯ ಸಂಪರ್ಕದಿಂದ ನಾವು ನಮ್ಮ ಧರ್ಮವನ್ನು ಬೇರೆ ಬೇರೆಯಾಗಿ ಭಾವಿಸಿರುವೆವಲ್ಲದೆ ಹಿಂದೂಧರ್ಮದ ಕಾರಣದಿಂದ ಈ ದೇಶದೊಳಗೆ ಅಕರ್ಮಣ್ಯತೆಯು ಹಬ್ಬಿರುವುದೆಂದು ಅನೇಕರು ಭಾವಿಸಿರುವರು. ಆದರೆ ಇದಕ್ಕೆ ಮೂಲಕಾರಣವು "ಹಿಂದೂ ಧರ್ಮವಲ್ಲ, ಆ ಶಿಕ್ಷಣದ ಅಭಾವವು" ಆದುದರಿಂದ ಹಿಂದೂ ಧರ್ಮ ಶಿಕ್ಷಣದ ಅಭಾವವನ್ನು ಹೋಗಲಾಡಿಸುವುದು ಪ್ರಥಮ ಕರ್ತವ್ಯ. ಅಧರ್ಮ ಸಾಂಬ್ರಾಜ್ಯವು ಯಾವಾಗ ತಾನೇತಾನಾಗಿ ವ್ಯಾಪಿಸತೊಡಗಿತೋ ಆಗ ನಿಜಧರ್ಮದ ಶಿಥಿಲತೆಯು ಆಗುವುದರಲ್ಲಿದ್ದಿತಿಯೇನು? ಈ ವಿಷಯವು ಈಗ ಪರಿಷ್ಕಾರವಾಗಿ ತಿಳಿದಂತಾಯಿತು. ನಿಜಧರ್ಮದ ಪುನರುದ್ಧಾರವಾಗಬೇಕಾದರೆ ಈ ದೋಷಗಳನ್ನು ದೂರಮಾಡುವುದು ಮುಖ್ಯವಾದ ಕಾರ್ಯವು. ಇದಕ್ಕಾಗಿ ಉಪನಿಷತ್ ಮತ್ತು ಗೀತೆಯಂತಹ ಗ್ರಂಥಗಳ ಅನುವಾದ ಅಥವಾ ಮೂಲರೂಪದಿಂದ ಪ್ರಚಾರವಾಗಬೇಕಾದುದು ಅತ್ಯಾವಶ್ಯಕವು, ಅವುಗಳ ಆಧಾರದಿಂದ ಬರೆಯಲ್ಪಟ್ಟ ವ್ಯಾಖ್ಯಾನ

ಗಳೂ ಜೀವನಗಳೂ ಅತ್ಯಾವಶ್ಯಕವು. ಈಗಿನಕಾಲದ ವಿದ್ಯಾನಿಪುಣ "ಬಿ. ಎ., ಎಂ. ಎ." ಪದವೀಧರರಾದ ಅನೇಕರಿಗೆ "ಜಾನ್ ಜೋಸೆಫ್" (John Joseph) ವಿನಹ ಅರ್ಜುನ ಯಾರು? ಯುಧಿಷ್ಠಿರನಾರು? ಎಂಬುದು ಕೂಡ ಸ್ಮೃತಿಗೆ ಬರುವುದು ಕಷ್ಟವಾಗಿರುವುದು. ಧಾರ್ಮಿಕ ಮತ್ತು ನೈತಿಕ ದೃಷ್ಟಿಯಿಂದ ಅವಲೋಕಿಸಿದಲ್ಲಿ ಇದು ಕೇವಲ ಶೋಚನೀಯವಾದುದೆನ್ನುವುದು ವ್ಯಕ್ತವಾಗುವುದು. ಹಿಂದೂಸ್ಥಾನದ ಪ್ರಾಕೃತ ಭಾಷೆಗಳ ಉತ್ಪತ್ತಿಸ್ಥಾನವು ಸಂಸ್ಕೃತವಾಗಿರುವುದರಿಂದಲೂ ಇವುಗಳ ಸಾಹಿತ್ಯ ಮತ್ತು ಶಬ್ದ ಸಂಖ್ಯೆಯನ್ನು ಹೆಚ್ಚಿಸಲು ಸಂಸ್ಕೃತದ ಸಹಾಯವು ಅತ್ಯಾವಶ್ಯಕವಾದುದರಿಂದಲೂ ಅಲ್ಲದೆ ನಮ್ಮ ಪ್ರಾಚೀನ ಇತಿಹಾಸದ ಬಹು ಭಾಗವು ಸಂಸ್ಕೃತದಲ್ಲಿರುವುದರಿಂದಲೂ ಸಂಸ್ಕೃತಾಭ್ಯಾಸದಿಂದ ನಾವು ಪಡೆಯುವ ಪ್ರಯೋಜನವಿಷ್ಟೇಯೆಂದು ಹೇಳಲಾಗುವುದಿಲ್ಲ. ಪಾಶ್ಚಾತ್ಯ ವಿದ್ವಾಂಸರು ಸಂಸ್ಕೃತಭಾಷೆಯನ್ನು ಈಗಲೂ ಕೂಡ ಶೋಧಿಸುತ್ತಲೇ ಇರುವರು. ನಮ್ಮದಾದ ಈ ಕೆಲಸವನ್ನು ಪರದೇಶೀಯರು ಕಲಿತು ಅದರ ಫಲವನ್ನುಣ್ಣುತ್ತಿರುವಂತೆ ಬಿಟ್ಟು, ಅದನ್ನು ನೋಡುತ್ತಲಿರುವ ನಾವೆಂತಹ ಶೂರರು? ನಮ್ಮ ಹಕ್ಕಾದ ಈ ಕೆಲಸವನ್ನು ನಾವು ಸ್ವತಃ ಮಾಡತೊಡಗಿದೆವಾದರೆ, ಆಗ "ಇಷ್ಟುದಿನವೂ ನಾವು ಕೇವಲ ವ್ಯಕ್ತಿಮಾತ್ರವಾಗಿದ್ದೆವು. ಇನ್ನು ಮುಂದೆಯಾದರೂ ಸ್ವಲ್ಪ ರೂಪ ಬರಬಹುದೆಂದು" ತಿಳಿಯಬಹುದು. ಯಾರಲ್ಲಿ ಆತ್ಮಾಭಿಮಾನವಿಲ್ಲವೋ ಅವರು ಉಚ್ಚ ಮತ್ತು ಸ್ವತಂತ್ರ ಕಾರ್ಯಗಳನ್ನು ಸಾಧಿಸಲು ಯೋಗ್ಯರಲ್ಲ. ಅವರು ಯಾವಾಗಲೂ ಇತರರ ನೆರಳನಕೆಳಗೇ ನಡೆಯತಕ್ಕವರು. ಆದ್ದರಿಂದ ಆತ್ಮಾಭಿಮಾನವುಳ್ಳ ನಮ್ಮವರಿಂದ ಈ ಇತಿಹಾಸಶೋಧನಾ ಕೆಲಸವು ನಡೆಯಬೇಕಾಗಿರುವುದು. ವೃಥಾ ಅಭಿಮಾನವು ಮಾತ್ರ ಇರುವುದರಿಂದ ಪ್ರಯೋಜನವಿಲ್ಲ; ಅದರೊಡನೆ ಕಾರ್ಯತತ್ಪರತೆಯೂ ಇರಬೇಕು. ಆತ್ಮಾಭಿಮಾನಾಭಾವದಿಂದ ಕಾರ್ಯ ಶಿಥಿಲತೆಯು ಹೇಗುಂಟಾಗುವುದೋ ಹಾಗೆಯೇ ವೃಥಾಭಿಮಾನದಿಂದಲೂ ಆಗುವುದು. ಆಗಿಂದಾಗ್ಯೆ ಪಾಶ್ಚಾತ್ಯ ದೇಶೋನ್ನತಿಯೊಡನೆ ನಮ್ಮ ಉನ್ನತಿಯನ್ನು ಹೋಲಿಸಿ ನೋಡಿಕೊಳ್ಳಬೇಕು. ಇಂತಹ ಆತ್ಮೋನ್ನತಿಯನ್ನೂ ಆತ್ಮಾಭಿಮಾನವನ್ನೂ ಬಾಲಕರಲ್ಲಿ ತುಂಬುವ ಭಾರವು ಶಿಕ್ಷಕನನ್ನು ಸೇರಿರುವುದಾದ್ದರಿಂದ ಶಿಕ್ಷಕನು ವೃಥಾ ಅಭಿಮಾನವು ಬಾಲಕರ ಮನವನ್ನು ಪ್ರವೇಶಿಸದಂತೆ ನೋಡಿಕೊಳ್ಳಬೇಕು.

ಪ್ರತಿಯೊಬ್ಬ ಭಾರತೀಯನೂ ಸಂಸ್ಕೃತವನ್ನು ಕಲಿತೇ ತೀರ ಬೇಕೆಂದು ನಾವು ಬಲಾತ್ಕರಿಸುವುದಿಲ್ಲವಾದರೂ ಪ್ರತಿಯೊಂದು ವ್ಯಕ್ತಿಯೂ ಕೊನೆಗೆ ಕೆಲವರಾದರೂ ಕಲಿತರೆ ಪ್ರಯೋಜನವೆಂದು ಮಾತ್ರ ಹೇಳು ವೆವು. ಅನೇಕರು ಸಂಸ್ಕೃತವನ್ನು "ಮೃತಭಾಷೆ" (Dead language) ಎಂದು ಹೇಳುವರು. ಮೃತರು ಯಾರು ? ಭಾಷೆಯೋ ? ನಾವೋ ? ಎನ್ನುವುದನ್ನವರಿಗೆ ಹೇಳಬಲ್ಲವರಾರು ? ಕೊನೆಗೆ ನಮ್ಮ ರಾಷ್ಟ್ರೀಯಾ ದರ್ಶಗಳ ಪರಿಪೂರ್ಣತೆಗಾಗಿಯಾದರೂ ಸಂಸ್ಕೃತಾಭ್ಯಾಸವನ್ನು ಸ್ವಲ್ಪ ಮಾಡಬೇಕಾಗಿರುವುದು.

ಆತ್ಮಾಭಿಮಾನದ ವಿಷಯದಲ್ಲಿ ಹಿಂದೆ ನಾವು ಚರ್ಚಿಸಿದ್ದೇವಷ್ಟೆ. ಇದರ ಸಂಬಂಧವು ನಮ್ಮ ಇತಿಹಾಸದೊಡನೆ ಸೇರಿರುತ್ತದೆ. ಆತ್ಮಾಭಿ ಮಾನದ ಎರಡನೆಯ ಸ್ವರೂಪದ ಅರ್ಥವು ಸ್ವದೇಶಪ್ರೇಮ, ಸ್ವಾತಂತ್ರ್ಯ ವಿಚಾರವಾಗಿರುತ್ತದೆ. ಮೊದಲು ನಾವು ಹಿಂದೂಸ್ಥಾನದ ಶಿಕ್ಷಣದ ವಿಚಾರಮಾಡಲಪೇಕ್ಷಿಸುವೆವು. "ಹಿಂದೂಸ್ಥಾನದ ಇತಿಹಾಸ" ವೆಂಬ ಹೆಸ ರಿನಿಂದ ಯಾವ ಗ್ರಂಥಗಳು ಪ್ರಚಾರದಲ್ಲಿರುವವೋ ಅವುಗಳ ಸತ್ಯಾಸ ತ್ಯದ ವಿಷಯವಾಗಿ ನಾವಿಲ್ಲಿ ಹೆಚ್ಚಾಗಿ ಹೇಳಲಾರೆವು. ಈ ಸತ್ಯಾನ್ವೇಷ ಣದ ಕೆಲಸವು ಇತಿಹಾಸಶೋಧಕರ ಕೆಲಸವಾಗಿರುವುದು.

ಈಗ ನಾವು ಇತಿಹಾಸಬೋಧನಾಕಾರ್ಯಕ್ಕೆ ಮಾತ್ರ ಸಂಬಂಧಿ ಸಿರುತ್ತೇವೆ. ಪಾಶ್ಚಾತ್ಯದೇಶಗಳ ಹಾಗೆ ಪ್ರಜಾತಂತ್ರಾತ್ಮಕ ಸಂಸ್ಥೆ ಗಳು ನಮ್ಮ ಹಿಂದೂಸ್ಥಾನದಲ್ಲಿ ಬಹಳವಾಗಿಲ್ಲದಿದ್ದರೂ ಕೆಲವಾದರೂ ಇದ್ದೇ ಇದ್ದವು. ಆದರೂ ಇವುಗಳ ವಿಕಾಸವೂ ಪತನವೂ ಬಹು ಶೀಘ್ರಕಾಲದಲ್ಲಿಯೇ ಆಗಿಹೋದವು. ಇವುಗಳ ಇತಿಹಾಸವನ್ನೂ ಪತ ನದ ಕಾರಣವನ್ನೂ ನಮ್ಮ ಬಾಲಕರಿಗೆ ತಿಳಿಸುವುದು ಅತ್ಯಾವಶ್ಯಕವಾಗಿ ರುವುದು. ಪ್ರಕೃತ ವಿದ್ಯಾಭ್ಯಾಸಕ್ರಮದಲ್ಲಿ ಮಿಡಲ್ ಸ್ಕೂಲ್ ತರಗತಿ ಯವರೆಗೆ ಬಾಲಕರಿಗೆ ಹಿಂದೂಸ್ಥಾನದ ಇತಿಹಾಸವು (ಹಿಂದೂ ದೇಶದ ಚರಿತ್ರ) ಸ್ವಲ್ಪಮಟ್ಟಿಗೆ ಸ್ವಾರಸ್ಯವಾಗಿರುತ್ತದೆ. ಹೈಸ್ಕೂಲಿಗೆ ಹೋದ ನಂತರ ಅದೇ ಇತಿಹಾಸವು ಅವರಿಗೆ ಅಸಹ್ಯವಾಗಿ ತೋರುವುದು. ಇದರ ಮುಖ್ಯ ಕಾರಣವು ಬಾಲಕರ ಪವೃತ್ತಿಯು ಈ ಸಮಯದಲ್ಲಿ ಕಾರ್ಯ

ಕಾರಣ ವಿಮರ್ಶೆಯ ಕಡೆಗೆ ಸಾಗುವುದು. ಸರಂತು ಹಿಂದೂಸ್ಥಾನದ ಇತಿಹಾಸವು ಓದಿ ಬರೆಸಲ್ಪಡುವ ರೀತಿಯನ್ನು ನೋಡಿದರೆ ಅದರಿಂದ ಬಾಲಕರ ಮನೋವಿಕಾಸಕ್ಕೆ ತಕ್ಕ ಹುರುಪು ಅದರಲ್ಲಿಲ್ಲವೆಂದು ಹೇಳಬಹುದು. ರಾಜ ಮತ್ತು ಬಾದಷಹರ ಚರಿತ್ರೆಗಳು (ಪಾಶ್ಚಾತ್ಯರಿಂದ ಬರೆಯಲ್ಪಟ್ಟುದು) ಮೊದಲಾದ ಕಥೆಗಳನ್ನು ಪದೇ ಪದೇ ಓದುವುದರಿಂದ ಮನಸ್ಸಿಗುಂಟಾಗುವ ಬೇಸರವೇ ಇದರ ಪರಿಣಾಮವು. ಇಂಥಾ ವಿಚಾರಗಳು ಅವರ ಮನಸ್ಸು ಪ್ರವೇಶಿಸುವುದಿಲ್ಲವಾದ್ದರಿಂದ ಈ ಇತಿಹಾಸಗಳಲ್ಲಭಿರುಚಿಯುಂಟಾಗುವಂತಹ ಚರಿತ್ರೆಗಳನ್ನು ನಮ್ಮ ಆರ್ಯಾವರ್ತದವರಿಂದಲೇ ಬರೆಸಿ ಓದುವಂತೆ ಮಾಡಬೇಕು. ಹೀಗೆ ಮಾಡುವುದರಿಂದ ಚರಿತ್ರೆಯು ಪ್ರಥಮ ಪಠನಕಾಲದಲ್ಲಿಯೇ ನಮ್ಮ ಜನರಲ್ಲಿ ದ್ವೇಷವನ್ನು ಮಾಡುವ ಭಾವನೆಯು ಅಳಿದುಹೋಗುವದು. (ಹಿಂದು ಮುಸಲ್ಮಾನರ ದ್ವೇಷಕ್ಕೆ ಈ ಚರಿತ್ರಕಾರರ ಕುಯುಕ್ತಿಯೇ ಕಾರಣವೆಂದು ಹೇಳಿದರೂ ಹೇಳಬಹುದು.) ಈರೀತಿ ಪ್ರಥಮದಲ್ಲಿಯೇ ಇವರ ಮನಸ್ಸಿನಲ್ಲಿಂತಹ ದ್ವೇಷಭಾವ ಉತ್ಪನ್ನವಾದರೆ ಅದು ಜೀವಾವಧಿ ಹೋಗುವುದಿಲ್ಲ. ಸ್ವದೇಶಪ್ರೇಮದ ಶಿಕ್ಷಣಕ್ಕೂ ಇತಿಹಾಸಕ್ಕೂ ಸಮೀಪ ಸಂಬಂಧವಿರುವುದು. ಶಿಕ್ಷಕನು ಬೇಕಾದರೆ ತನ್ನ ಇತಿಹಾಸ ಬೋಧನೆಯ ಮೂಲಕ ಬಾಲಕರಲ್ಲಿ ದ್ವೇಷವನ್ನೋ ಅಥವಾ ಪ್ರೀತಿಯನ್ನೋ ಹುಟ್ಟಿಸಬಹುದು. ಸ್ವದೇಶಪ್ರೇಮ ಮತ್ತು ಸ್ವಾಭಿಮಾನಗಳನ್ನುತ್ಪನ್ನಮಾಡಬೇಕಾದರೆ ದೇಶದ ಇತಿಹಾಸವೇ ಮುಖ್ಯಸಾಧನವು. ಪ್ರಾಚೀನಾರ್ಯರ ಸಭ್ಯತೆಯು ಇತರ ಈಗಿನಕಾಲದ ಜನರ ಸಭ್ಯತೆಯೊಡನೆ ಹೋಲಿಸಲ್ಪಡುತ್ತಿದ್ದರೆ ಆಗ ನಮ್ಮ ಬಾಲಕರಲ್ಲಿ ಆತ್ಮಾಭಿಮಾನವು ಸ್ವಭಾವತಃ ತಾನಾಗಿಯೇ ವಿಕಾಸವಾಗುವುದು. ಇದಕ್ಕಾಗಿಯೇ ಪಾಶ್ಚಾತ್ಯರ ಉನ್ನತಿಯನ್ನು ನಮ್ಮ ಉನ್ನತಿಯೊಡನೆ ಆಗಾಗ್ಯೆ ಹೋಲಿಸಿ ಬಾಲಕರಿಗೆ ತಿಳಿಸುತ್ತಿದ್ದರೆ ಸತ್ಯವಾಗಿಯೂ ಸ್ವಾಭಿಮಾನವೂ ಸ್ವದೇಶಪ್ರೇಮವು ಅವರಲ್ಲಿ ಮೂರ್ತಿಭವಿಸುವವು. ಇದಲ್ಲದೆ ದೇಶವಾತ್ಸಲ್ಯವನ್ನು ಮತ್ತೊಂದು ರೀತಿಯಲ್ಲಿ ಕಲಿಸಬಹುದು. ಈ ವಿಷಯಕ್ಕಾಗಿ ಇತರ ದೇಶದವರು ಏನು ಮಾಡುತ್ತಿರುವರೆನ್ನುವುದನ್ನು ತಿಳಿದು ನಾವೂ ಹಾಗೆಯೇ ಮಾಡಬಹುದು. (ಸಶೇಷ)

---

೬೦

# ಮಾತೃಭಾಷೆ.

ಪ್ರಿಯಮಾತೆಯರೆ! ಪ್ರಿಯಸಹೋದರಿಯರೆ!

ಕ್ರಿಸ್ತಶಕ ೧೧ನೆಯ ಶತಾಬ್ದದಲ್ಲಿ ಒಬ್ಬ ಮುಹಮ್ಮದೀಯ ವಿದ್ವಾಂಸನು "ಭಾರತೀಯರು ಅನೇಕ ಶಾಸ್ತ್ರಗಳನ್ನೂ, ಕಲಾವಿಷಯಗಳನ್ನೂ, ವೇದಾಂತಾದಿ ದರ್ಶನಾದಿಗಳನ್ನೂ ಬಹುಮಟ್ಟಿಗೆ ತಿಳಿದುಕೊಂಡಿದ್ದಾರೆ. ಆದರಿಂದ ಅವರು ತಾವೇ ಎಲ್ಲವನ್ನೂ ಅರಿತವರೆಂತಲೂ, ತಮ್ಮ ಭಾಷೆಯೇ ಶ್ರೇಷ್ಠವಾದುದೆಂತಲೂ ಭಾವಿಸಿಕೊಂಡು ಇತರ ದೇಶೀಯರನ್ನು ತಿರಸ್ಕಾರದೃಷ್ಟಿಯಿಂದ ನೋಡುತ್ತಾರೆ" ಎಂದು ಬರೆದಿದ್ದಾನೆ.

ಅಷ್ಟು ಅಭಿಮಾನಪೂರಿತರಾಗಿದ್ದವರ ವಂಶದಲ್ಲಿ ಹುಟ್ಟಿದ ನಾವು ಮಾತೃಭಾಷೆಯಲ್ಲಿ ಬರೆದೋದುವದೂ ಕೊನೆಗೆ ಮಾತನಾಡುವುದೂ ಲಜ್ಜಾಕರವೆಂದು ಭಾವಿಸುತ್ತಿದ್ದೇವೆ. ಕೆಲವು ವರ್ಷಗಳ ಕೆಳಗೆ ಪುರುಷರಿಗೆ ಇಂಥಾ ದುರಭಿಪ್ರಾಯವಿದ್ದರೂ ಸ್ತ್ರೀಯರಿಗೋಸ್ಕರ ಮನೆಯಲ್ಲಿಯಾದರೂ ಮಾತೃ ಭಾಷೆಯಲ್ಲಿ ಮಾತನಾಡುತ್ತಿದ್ದರು. ಈಗ ಸ್ತ್ರೀಯರಲ್ಲಿ ಇಂಗ್ಲೀಷು ವಿದ್ಯಾಭ್ಯಾಸವು ಹರಡಿದಹಾಗೆಲ್ಲಾ ಮನೆಯಲ್ಲಿಯೂ ಇಂಗ್ಲೀಷು ಭಾಷೆಯಲ್ಲಿ ಮಾತನಾಡುವುದು ಹೆಚ್ಚುತ್ತಿದೆ. ಸುಧಾರಕರೆಂದೆನಿಸಿಕೊಂಡಿರುವವರ ಮನೆಗಳಲ್ಲಿ ಹಾಲುಕುಡಿಯುವ ಮಗುವಿಗೂ ಇಂಗ್ಲೀಷನ್ನೇ ಕಲಿಸುತ್ತಿದ್ದಾರೆ. ಸ್ತ್ರೀಯರ ವಿಶ್ರಾಂತಿನಿಲಯ (ಲೇಡಿಸ್ ಕ್ಲಬ್) ವೇ ಮೊದಲಾದ ಸ್ಥಳಗಳಿಗೆ ಇಂಗ್ಲೀಷನ್ನರಿಯದವರು ಪ್ರವೇಶಿಸುವದು ಅನುಚಿತವೆಂಬ ಭಾವನೆಯೂ ಉಂಟಾಗಿದೆ.

ಸೋದರಿಯರೆ! ನಾವು ಅಲ್ಪಸ್ವಲ್ಪ ಇಂಗ್ಲೀಷನ್ನು ಕಲಿತ ಮಾತ್ರದಿಂದ ಎಂದಿಗೂ ಇಂಗ್ಲೀಷ್ ಸ್ತ್ರೀಯರಾಗಲಾರೆವು. ನಾವು ಮಾತೃಭಾಷೆಯನ್ನು ಪೂರ್ತಿಯಾಗಿ ಮರೆತುಹೋದರೂ ಇತರರು ನಮ್ಮನ್ನು ಕರ್ನಾಟಕ ರಮಣಿಯರೆಂದೇ ಕರೆಯುವರಲ್ಲವೆ? ಯಾವ ಭಾಷೆಯಿಂದ ಲೋಕವು ನಮ್ಮನ್ನು ಗುರ್ತಿಸುವ ಒಂದು ಹೆಸರುಂಟಾಯಿತೋ ಆ ಮಾತೃಭಾಷೆಯನ್ನು ಮರೆಯುವದು ಮಹಾಪಾತಕವಲ್ಲವೆ?

ಭಾರತೀಯರು ಇಂಗ್ಲೀಷನ್ನು ಸಹಸ್ರ ವರ್ಷಗಳು ಓದಿದರೂ ಇವರಿಗೆ ವಾಙ್ಮಯ ನಿರ್ಣಯಾಧಿಕಾರವು ದೊರೆಯಲಾರದು. ಮತ್ತು ಇವರು ರಚಿಸಿದ ಗ್ರಂಥಗಳು ಭಾಷಾದೃಷ್ಟಿಯಿಂದ ನೋಡಿದರೆ ಲಾಲಿತ್ಯ, ಮಾಧುರ್ಯಾದಿ ಗುಣಸಂಪನ್ನಗಳಾಗಿರಲಾರವೆಂದು ತಿಳಿದವರು ಹೇಳುತ್ತಾರೆ. ಇದರಿಂದ ನಾವು ಅವಮಾನಿತರಾದೆವೆಂದು ಎಣಿಸಬಾರದು.

ಏಕೆಂದರೆ, ಆಸ್ಟ್ರೇಲಿಯ ಮೊದಲಾದ ಅಧಿನಿವೇಶ ರಾಷ್ಟ್ರಗಳಲ್ಲಿ ವಾಸವಾಗಿರುವವರು ಇಂಗ್ಲೆಂಡ್ ದೇಶೀಯರ ವಂಶಸ್ಥರಾದರೂ ಅವರಲ್ಲಿ ಉತ್ತಮ ಕವಿಗಳಾಗಲಿ, ಗ್ರಂಥಕರ್ತರಾಗಲಿ ಹುಟ್ಟಲಿಲ್ಲವೆಂತಲೂ, ತಮ್ಮ ದೇಶವನ್ನು ಬಿಟ್ಟು ಇಂಡಿಯಾದೇಶದಲ್ಲಿ ಎರಡು ಪುರುಷಾಂತರಗಳು ವಾಸಮಾಡಿದವರಿಗೆ ಗ್ರಂಥನಿರ್ಮಾಣಶಕ್ತಿಯು ಲೋಪವಾಗಿ ಹೋಗುವದೆಂತಲೂ ಯೂರೋಪ್ ದೇಶದ ವಿಜ್ಞರು ಹೇಳುತ್ತಾರೆ. ಅನೇಕ ವರ್ಷಗಳು ಸಂಸ್ಕೃತವನ್ನು ಓದಿದ ಮ್ಯಾಕ್ಸ್ ಮುಲ್ಲರ್ ಮೊದಲಾದ ಪಾಶ್ಚಾತ್ಯ ವಿದ್ವಾಂಸರು ಸಂಸ್ಕೃತದಲ್ಲಿ ಒಂದು ಶ್ಲೋಕವನ್ನಾಗಲಿ, ಒಂದು ವಾಕ್ಯವನ್ನಾಗಲಿ ರಚಿಸಲಿಲ್ಲವೆಂತಲೂ, ಕೊನೆಗೆ ಆ ಭಾಷೆಯಲ್ಲಿ ಚನ್ನಾಗಿ ಮಾತನಾಡುವದಕ್ಕೂ ಅವರಿಗೆ ಸಾಧ್ಯವಾಗಲಿಲ್ಲವೆಂತಲೂ ಹೇಳುತ್ತಾರೆ. ಅದೇ ಸಂಸ್ಕೃತ ಭಾಷೆಯಲ್ಲಿ ಭಾರತರಮಣಿಯರು ಅನೇಕ ಕಾವ್ಯಗಳನ್ನು ರಚಿಸಿದ್ದಾರೆ. ಪ್ರತಿಯೊಂದು ಜಾತಿಗೂ ಸ್ವಭಾಷೆಯಲ್ಲಿರುವಷ್ಟು ಶಕ್ತಿಯು ಪರಭಾಷೆಯಲ್ಲಿರುವದಿಲ್ಲವೆಂಬುದು ಇದರಿಂದ ಚನ್ನಾಗಿ ತಿಳಿಯುಬರುತ್ತದೆ.

ಮೊದಲಿನಿಂದಲೂ ಇಂಗ್ಲೀಷು ಭಾಷೆಯನ್ನೇ ಕಲಿತವರಿಗೆ ತಮ್ಮ ಪೂರ್ವಿಕರಲ್ಲಿದ್ದ ಕವಿಗಳು, ಜ್ಞಾನಿಗಳು ಮೊದಲಾದ ಪ್ರಖ್ಯಾತರಾದವರ ಹೆಸರುಗಳೇ ತಿಳಿದಿರುವುದಿಲ್ಲ. ಒಂದುವೇಳೆ ತಿಳಿದಿದ್ದರೂ ಆಂಗ್ಲೇಯ ಭಾಷೋಚ್ಚಾರಣೆಯಿಂದ ವಿಕೃತನಾಮರಾಗಿ "ಹೋಮರ್ ಆಫ್ ಇಂಡಿಯಾ" "ಷೇಕ್ಸ್‌ಪಿಯರ್ ಆಫ್ ಇಂಡಿಯಾ" ಇತ್ಯಾದಿ ಪಾಶ್ಚಾತ್ಯ ಕವಿಪ್ರಾಧಾನ್ಯಪೂರ್ವಕವಾಗಿ ತಿಳಿದುಕೊಂಡಿರುತ್ತಾರೆ. ಹೋಮರ್ ಕವಿಯು ಬರೆದಿರುವ ಕಾವ್ಯಕಥಾನಾಯಕನಾದ "ಮೆನಿಲಾ" ದುರ್ಬಲನೆಂಬ ಕಾರಣದಿಂದ ಅವನ ಪತ್ನಿಯಾದ "ಹೆಲೆನಾ" ಬುದ್ಧಿಪೂರ್ವಕವಾಗಿ

ಉಪಪತಿಯನ್ನನುಸರಿಸಿ ಮನೆಯನ್ನು ಬಿಟ್ಟು ಹೋದಳೆಂತಲೂ, ಇಂತಹ ಹೆಂಡತಿಯನ್ನು ಬಿಟ್ಟಿರಲಾರದೆ ಅವನು ತನ್ನ ಅಣ್ಣ ಅಕಿಲೀಸ್ ಮೊದಲಾದ ವೀರರೊಡನೆ ಯುದ್ಧಕ್ಕೆ ಹೊರಟನೆಂತಲೂ ತಿಳಿಯಬರುತ್ತದೆ. ಇವರನ್ನೂ, ಇವರ ಚರಿತ್ರೆಗಳನ್ನೂ, ಇಂತಹ ಕಾವ್ಯವನ್ನು ರಚಿಸಿದ ಕವಿಯನ್ನೂ ಪ್ರಮಾಣವಾಗಿಟ್ಟುಕೊಂಡು ಅಕಳಂಕ ಚರಿತ್ರರಾದ ಸೀತಾರಾಮರನ್ನೂ, ಪರಮಪಾವನವಾದ ರಾಮಾಯಣವನ್ನೂ, ತತ್ಕರ್ತನಾದ ವಾಲ್ಮೀಕಿಯನ್ನೂ ಪರಿಗಣಿಸುವದೇ ವಿಶೇಷ ಕೀರ್ತಿಕರವೆಂದು ಭಾವಿಸುವಷ್ಟು ದುಸ್ಥಿತಿಗೆ ನಾವು ಇಳಿದಿದ್ದೇವೆ. "ಪೂಜನೀಯಳಾದ ಸೀತಾದೇವಿಯನ್ನು ಬಿಟ್ಟು" "ಹೆಲೆನಾ" ಎಂಬಾಕೆಯನ್ನು ಭಾರತೀಯರು ಆದರ್ಶವಾಗಿ ತೆಗೆದುಕೊಳ್ಳುವರೇ ? ಎಂದು ಬಂದುಸಲ ನಿವೇದಿತಾ ಸೋದರಿಯು ಕೇಳಿದಳಂತೆ.

ತಾಯಿಯ ಹಾಲು ಕುಡಿದು ಬೆಳೆದ ಮಗುವಿಗೂ, ಹಸುವಿನಹಾಲು ಕುಡಿದು ಬೆಳೆದ ಮಗುವಿಗೂ ಎಷ್ಟು ಭೇದವಿರುತ್ತದೆಯೋ ಸ್ವಭಾಷೆಯಲ್ಲಿ ಶಾಸ್ತ್ರಾಭ್ಯಾಸವನ್ನು ಮಾಡಿದವರಿಗೂ, ಪರಭಾಷೆಯಲ್ಲಿ ಶಾಸ್ತ್ರಾಭ್ಯಾಸವನ್ನು ಮಾಡಿದವರಿಗೂ ಅಷ್ಟು ಭೇದವಿರುತ್ತದೆ. ಅನ್ಯಭಾಷೆಗಳನ್ನು ಪ್ರಥಮದಲ್ಲಿ ಕಲಿತು ಅನಂತರ ಆ ಭಾಷೆಯಲ್ಲಿ ಶಾಸ್ತ್ರಾಭ್ಯಾಸವನ್ನು ಮಾಡುವದು ದ್ರಾವಿಡ ಪ್ರಾಣಾಯಾಮದಂತೆ ಇದೆ. ಈಗ ಇಂತಹ ಪ್ರಾಣಾಯಾಮವೇ ನಮ್ಮ ದೇಶದಲ್ಲಿ ನಡೆಯುತ್ತಿದೆ. ತರ್ಕ, ವೇದಾಂತಾದಿ ಪೂರ್ವಶಾಸ್ತ್ರಗಳನ್ನು ಕಲಿಯಬೇಕಾದರೆ ಸಂಸ್ಕೃತವನ್ನು ಕಲಿಯಬೇಕು. ರಸಾಯನ, ವಿಜ್ಞಾನಾದಿ ಶಾಸ್ತ್ರಗಳನ್ನು ಕಲಿಯಬೇಕಾದರೆ ಇಂಗ್ಲೀಷನ್ನು ಕಲಿಯಬೇಕು. ಇವುಗಳನ್ನೆಲ್ಲಾ ಮಾತೃಭಾಷೆಯಲ್ಲಿಯೇ ಕಲಿಯಲು ಅನುಕೂಲವಿದ್ದರೆ, ಕಾಲವೂ, ಧನವೂ ಇಷ್ಟು ಹೆಚ್ಚಾಗಿ ವ್ಯಯವಾಗುತ್ತಿರಲಿಲ್ಲ ; ಮತ್ತು ಅಲ್ಪ ಪರಿಶ್ರಮದಿಂದ ಇವುಗಳನ್ನು ಅಪೇಕ್ಷಿಸಿದವರೆಲ್ಲರೂ ಕಲಿಯಬಹುದು. ಎಷ್ಟು ಕಠಿನವಾದ ಶಾಸ್ತ್ರ ವಿಷಯವಾದರೂ, ಕಲಾವಿಷಯವಾದರೂ ತನ್ನ ಭಾಷೆಯಲ್ಲಿದ್ದರೆ ಮನುಷ್ಯನು ಸುಲಭವಾಗಿ ತಿಳಿದುಕೊಳ್ಳಬಲ್ಲನು; ಮತ್ತು ಆ ಭಾಷೆಯನ್ನರಿತವರೆಲ್ಲರಲ್ಲಿಯೂ ಆಯಾ ವಿದ್ಯೆಗಳು ಸುಲಭವಾಗಿಯೂ, ಶೀಘ್ರವಾಗಿಯೂ ಹಬ್ಬಿ ಜನರ ಉನ್ನತಸ್ಥಿತಿಗೆ ಕಾರಣಭೂತಗಳಾಗುತ್ತವೆ.

ಸ್ವಭಾಷೆಯಲ್ಲಿ ವಿಜ್ಞಾನ, ರಸಾಯನ, ವಿದ್ಯಚ್ಛಾಸ್ತ್ರ ಇವೇ ಮೊದಲಾದ ವಿದ್ಯೆಗಳು ಇಲ್ಲದೆ, ಪರಭಾಷೆಯನ್ನು ಅಭ್ಯಾಸಮಾಡಿ, ಇವುಗಳನ್ನು ಕಲಿಯಬೇಕಾದವರು ಮನೆಯಲ್ಲಿ ಅನ್ನವಿಲ್ಲದೆ, ನೆರೆಹೊರೆಯವರ ಮನೆಗಳಿಗೆ ತಿರುಗಿ ಅನ್ನವನ್ನು ಸಂಪಾದಿಸಿಕೊಳ್ಳುವವನೊಡನೆ ಸಮಾನರು. ನಮ್ಮ ದೇಶದಲ್ಲಿ ಅನೇಕರಿಗೆ ಪರಾನ್ನವನ್ನು ಅಪೇಕ್ಷಿಸುವದು ವಿಹಿತಧರ್ಮವೆಂಬ ಭಾವವು ಇರುವುದರಿಂದ ನಮಗೆ ಅದೊಂದು ತಪ್ಪಾಗಿ ತೋರಲಾರದು. ಆದರೆ ಈಗ ಪ್ರಾಣಸಹಿತವಾಗಿರುವ ಪಾಶ್ಚಾತ್ಯದೇಶಗಳ ಕಡೆಗೆ ದೃಷ್ಟಿಯನ್ನು ತಿರಿಗಿಸಿ ನೋಡಿರಿ. ವಿದ್ಯಾವಿಷಯದಲ್ಲಿ ಇತರ ದೇಶಗಳಿಗಿಂತಲೂ ಹಿಂದೆ ಬೀಳದಿರಲು ಅವರು ಮಾಡುತ್ತಿರುವ ಪ್ರಯತ್ನಗಳನ್ನು ನೋಡಿದರೆ ಯಾರು ತಾನೇ ಆಶ್ಚರ್ಯಾನಂದಪೂರಿತರಾಗದೆ ಇರಬಲ್ಲರು ? ವಿದ್ಯಾವಿಷಯದಲ್ಲಿ ಅವರಿಗೆ ಇಷ್ಟು ಸ್ಪರ್ಧೆ ಏಕೆ ? ಕಾರಣವು ಗೊತ್ತೇ ಇದೆ. ಪ್ರಸ್ತುತದಲ್ಲಿ ಅಪೇಕ್ಷಿಸಿದ ಶಾಸ್ತ್ರವಿಷಯಗಳನ್ನು ಕಲಿಸುವ ವಿದ್ಯಾಪೀಠಗಳೂ, ಗ್ರಂಥಗಳೂ ಇಂಗ್ಲಂಡು ದೇಶದಲ್ಲಿಯೇ ಇರುವದರಿಂದ ಅವರು ಬೇರೆ ದೇಶಗಳಿಗೆ ಹೋಗದೆ, ಬೇರೆಭಾಷೆಯನ್ನು ಕಲಿಯದೆ, ಸಕಲ ವಿದ್ಯಗಳನ್ನೂ ಕಲೆಗಳನ್ನೂ ವೃತ್ತಿಗಳನ್ನೂ ಅಭ್ಯಾಸಮಾಡಲು ಅವಕಾಶವಿದೆ. ಇಂಗ್ಲೀಷಿನವರಿಗೆ ಶಾಸ್ತ್ರಸಂಬಂಧವಾದ ಗ್ರಂಥಗಳೊಂದೂ ಇರಲಿಲ್ಲವೆಂದು ಭಾವಿಸೋಣ. ಆಗ ಅವರ ವಿದ್ಯಾಸ್ಥಿತಿಯು ಹೇಗೆ ಇರುತ್ತಿತ್ತು? ಯಾವ ವಿದ್ಯೆಯನ್ನು ಕಲಿಯಬೇಕಾದರೂ ಪರಭಾಷೆಗಳಾದ ಜರ್ಮನ್ನೋ ಫ್ರೆಂಚನ್ನೋ ಕಲಿತು ಆಮೇಲೆ ಅವರಿಗೆ ಇಷ್ಟವಾದ ವಿದ್ಯೆಯನ್ನಾಗಲಿ, ವೃತ್ತಿಯನ್ನಾಗಲಿ ಕಲಿಯಬೇಕಾಗಿತ್ತು, ಅಲ್ಲವೆ? ಆಗ ಅವರ ಸಂಪತ್ತು ಈಗ ಇರುವಂತೆ ಇರುತ್ತಿತ್ತೇ? ಹೊಗೆಗಾಡಿಯನ್ನು ನಡಿಸುವ ವಿಧವನ್ನು ತಿಳಿಯಲು ಜರ್ಮನಿಗೂ, ನಾವಿಕಾಶಾಸ್ತ್ರವನ್ನು ಕಲಿಯಲು ಫ್ರೆಂಚ್‌ದೇಶಕ್ಕೂ ಆಕಾಶಯಾನ ವಿಷಯವನ್ನು ಅರಿಯಲು ಇಟಲಿ ದೇಶಕ್ಕೂ "ದೇಹಿ" ಎಂದು ಹೋಗಬೇಕಾದ ಆಂಗ್ಲೇಯರು ಸ್ವದೇಶಾಭಿವೃದ್ಧಿಯನ್ನು ಹೇಗೆ ಮಾಡುತ್ತಿದ್ದರು ? ಆದುದರಿಂದ ಮಾತೃಭಾಷೆಯಲ್ಲಿ ಸಕಲ ವಿದ್ಯಾಸಾಧನೆಗಳಿರುವದು ನಾಗರಿಕ ರಾಷ್ಟ್ರಗಳ ಪ್ರಥಮಲಕ್ಷಣವೆಂದು ತಿಳಿಯಬೇಕು.

ಕೆಲವರು ಹಾಗಾದರೆ ಸಂಸ್ಕೃತವನ್ನೂ ಇಂಗ್ಲೀಷನ್ನೂ ಕಲಿಯು ಬಾರದೆ ಎಂತಲೂ, ಆಯಾ ಭಾಷೆಗಳನ್ನು ಕಲಿಯಲು ಅನುಕೂಲವಿರು ವಾಗ ಮಾತೃಭಾಷೆಯನ್ನು ಕುರಿತು ಇಷ್ಟು ವಿಚಾರವೇಕೆ ಎಂತಲೂ, ಕೇಳಬಹುದು. ಇಂಗ್ಲೀಷು, ಸಂಸ್ಕೃತ, ಫ್ರೆಂಚ್ ಮೊದಲಾದ ಇತರ ಭಾಷೆಗಳನ್ನು ಕೈಲಾದವರು, ಧನವಂತರು ಕಲಿತುಕೊಳ್ಳುವದೇ ಉತ್ತಮ. ರಾಜಭಾಷೆಯು ಲೋಕದಲ್ಲಿರುವ ಎಲ್ಲಾ ಭಾಷೆಗಳಿಗಿಂತಲೂ ಹೆಚ್ಚು ಗ್ರಂಥ ಭಂಡಾರವನ್ನುಳ್ಳದ್ದೂ, ಪ್ರಖ್ಯಾತಿಯುಳ್ಳದ್ದೂ ಆದ ಇಂಗ್ಲೀಷು ಭಾಷೆಯನ್ನು ಕಲಿಯುವದು ನಾಗರೀಕವನ್ನು ಹೆಚ್ಚಿಸುವದಕ್ಕೂ ದೇಶಾಭಿವೃದ್ಧಿಗೂ ಅತ್ಯವಶ್ಯಕವಾಗಿದೆ ಆದರೆ ಸಾಮಾನ್ಯ ಜನರೆಲ್ಲಾ ಇಂಗ್ಲೀಷನ್ನು ಕಲಿತು ಶಾಸ್ತ್ರಗಳನ್ನು ಓದಲು ಭರತಖಂಡದಲ್ಲಿ ಇನ್ನು ಸಾವಿರ ವರ್ಷಗಳಾದರೂ ಸಂಭವಿಸಬಹುದೇ? ಸಂಸ್ಕೃತವೂ ಇಷ್ಟೆ. ದೇವ ಭಾಷೆಯೆಂದು ನಮಗೆ ಅದರಲ್ಲಿ ಭಕ್ತಿಯೇನೋ ಇದೆ. ಆದರೆ ದೇಶದಲ್ಲಿ ಸಂಸ್ಕೃತ ಪಂಡಿತರೆಷ್ಟು ಜನರಿದ್ದಾರೆ? ಸಂಸ್ಕೃತವು ನಮ್ಮ ಕರ್ಣಾಟಕಭಾಷೆಗೆ ಸಹಾಯವಾಗುವದೇಹೊರತು ಎಂದಿಗೂ ನಮ್ಮ ಭಾಷೆಯಾಗಲಾರದು. ಆದಕಾರಣ ಅವರವರ ಮಾತೃಭಾಷೆಗಳಲ್ಲಿಯೇ ವಿದ್ಯಾದಾನವನ್ನು ಮಾಡುವ ಮಾರ್ಗಗಳನ್ನು ಏರ್ಪಾಟು ಮಾಡತಕ್ಕದ್ದು ಅವಶ್ಯಕವು.

ಈಗ ನಮ್ಮ ದೇಶದಲ್ಲಿ ಅನೇಕ ಯುವಕರು ಜರ್ಮ, ಅಮೇರಿಕಾ, ಇಂಗ್ಲೆಂಡ್ ಮೊದಲಾದ ದೇಶಗಳಿಗೆ ಹೋಗಿ ವಿವಿಧ ವಿದ್ಯೆಗಳನ್ನು ಕಲಿತು ಬರುತ್ತಿದ್ದಾರೆ. ಇದು ದೇಶದ ಮುಂದಿನ ಅಭ್ಯುದಯಕ್ಕೆ ಒಳ್ಳೆಯ ಲಕ್ಷಣವೇಸರಿ ಆದರೆ ಈ ವಿಧವಾಗಿ ಎಷ್ಟು ಜನರು ಪರ ದೇಶಕ್ಕೆ ಹೋಗಿ ವಿದ್ಯಾಭ್ಯಾಸವನ್ನು ಮಾಡಬಲ್ಲರು? ವಿಶೇಷ ಹಣ ವನ್ನು ಖರ್ಚುಮಾಡಿ, ಇತರ ಕಷ್ಟಗಳನ್ನು ಸಹಿಸಿಕೊಂಡು, ಲಕ್ಷ ಜನ ರಿಗೆ ಒಬ್ಬನು ಹೋದರೆ ಮಿಕ್ಕವರಿಗೆ ಇವುಗಳೆಲ್ಲ ತಿಳಿಯುವಬಗೆ ಹೇಗೆ? ಜ್ಞಾನಾರ್ಜನೆಯನ್ನು ಮಾಡಬೇಕೆಂಬ ಅಭಿಲಾಷೆಯನ್ನುಳ್ಳವರಿಗೂ ಜ್ಞಾನವು ದೊರೆಯುವ ಮಾರ್ಗವಿಲ್ಲದಿರುವದು ಶೋಚನೀಯ ವಾದುದು, ದೇಶದಲ್ಲೆಲ್ಲಾ ಶಾಸ್ತ್ರಜ್ಞಾನಾಭಿವೃದ್ಧಿಯುಂಟಾಗಬೇಕಾದರೆ

ದೇಶಭಾಷೆಗಳಲ್ಲಿ ತಕ್ಕ ಗ್ರಂಥಗಳೂ, ಆಯಾ ಶಾಸ್ತ್ರಗಳನ್ನು ಬೋಧಿಸುವ ಪಾಠಶಾಲೆಗಳೂ ಇರಬೇಕು.

ಈಗ ಪಾಠಶಾಲೆಗಳಲ್ಲಿ ನಡೆಯುತ್ತಿರುವ ವಿದ್ಯಾಭ್ಯಾಸದ ಪದ್ಧತಿಯನ್ನು ನೋಡೋಣ; ೧ನೆಯ ಫಾರಂ ಮೊದಲುಗೊಂಡು ನಮ್ಮ ಹುಡುಗರಿಗೆ ಭೂಗೋಳವನ್ನೂ, ಅಂಕಗಣಿತ, ರೇಖಾಗಣಿತ, ಪದಾರ್ಥ ವಿಜ್ಞಾನ ಮೊದಲಾದ ವಿಷಯಗಳನ್ನೆಲ್ಲಾ ಇಂಗ್ಲೀಷಿನಲ್ಲಿ ಬೋಧಿಸುತ್ತಾರೆ. ಆಗ ವಿದ್ಯಾರ್ಥಿಗಳಿಗೆ ಇಂಗ್ಲೀಷು ಭಾಷೆಯಲ್ಲಿ ತಪ್ಪಿಲ್ಲದೆ ಎರಡು ವಾಕ್ಯಗಳನ್ನು ಬರೆಯುವದಕ್ಕೂ ಬರುವದಿಲ್ಲ. ತನ್ನ ಮನಸ್ಸಿನ ಭಾವವನ್ನು ಇಂಗ್ಲೀಷಿನಲ್ಲಿ ಹೇಳುವದಕ್ಕೂ ಬರುವದಿಲ್ಲ. ಇಂತಹವರಿಗೆ ರೇಖಾಗಣಿತವೇ ಮೊದಲಾದ ವಿಷಯಗಳನ್ನು ಇಂಗ್ಲೀಷಿನಲ್ಲಿ ಬೋಧಿಸುವದರಿಂದ ಪ್ರಯೋಜನವೇನು? ಇದರಿಂದ ವಿದ್ಯಾರ್ಥಿಗಳು ತಮ್ಮ ಪಾಠಗಳನ್ನು ಕಂಠಪಾಠಮಾಡಿ ತೇರ್ಗಡೆಯನ್ನು ಹೊಂದಬೇಕಾಗಿದೆ. ಇಂತಹ ಕಠಿಣ ವಿಷಯಗಳನ್ನೆಲ್ಲಾ ಇಂಗ್ಲೀಷಿನಲ್ಲಿ ಕಲಿಸಿ ಹುಡುಗರ ಮೇಧಾಶಕ್ತಿಯನ್ನು ಹಾಳುಮಾಡುತ್ತಿದ್ದೇವೆ. ಈಗ ಸ್ಕೂಲ್ ಫೈನಲ್ ಪರೀಕ್ಷೆಗೆ ಓದುವವರ ಧಾರಣಾಶಕ್ತಿಯೆಲ್ಲಾ ಇಂಗ್ಲೀಷಿನಲ್ಲಿರುವ ಭಿನ್ನ ಭಿನ್ನ ವಿಷಯಗಳನ್ನು ಗಟ್ಟಿಮಾಡುವದರಲ್ಲಿಯೇ ವ್ಯಯವಾಗುತ್ತಿದೆ.

ಇಂತಹ ಕಠಿನವಾದ ಶಾಸ್ತ್ರವಿಷಯಗಳನ್ನು ಮಾತೃಭಾಷೆಯಲ್ಲಿ ಬೋಧಿಸಿದರೆ ವಿದ್ಯಾರ್ಥಿಗಳು ಸುಲಭವಾಗಿ ಗ್ರಹಿಸಿ ಗುರುವಿನ ಪ್ರಶ್ನೆಗೆ ಉತ್ತರವನ್ನು ತಮ್ಮ ಮಾತಿನಲ್ಲಿ ಹೇಳಬಲ್ಲರು. ಈ ವಿಧವಾದ ವಿದ್ಯಾಭ್ಯಾಸದಿಂದ ಈಗ ಬಿ. ಎ. ವಿದ್ಯಾರ್ಥಿಗಳಿಗಿರುವಷ್ಟು ಜ್ಞಾನವನ್ನು ಸ್ಕೂಲ್ ಫೈನಲ್ ವಿದ್ಯಾರ್ಥಿಗಳಿಗೆ ಉಂಟುಮಾಡಬಹುದು.

ಬೀಜಗಣಿತ ಶಿಲ್ಪ ಮೊದಲಾದವುಗಳನ್ನೆಲ್ಲಾ ಆಂಗ್ಲೇಯ ಭಾಷೆಯಲ್ಲಿ ಕಲಿಯದಿದ್ದರೆ ಆ ಭಾಷೆ ಚೆನ್ನಾಗಿ ಬರಲಾರದೆಂದು ಭಾವಿಸುವದು ಸರಿಯಲ್ಲ. ಕಾವ್ಯಗಳು, ಉಪನ್ಯಾಸಗಳು, ತತ್ವಗಳು, ರಾಜಕೀಯೋಪನ್ಯಾಸಗಳು ಇವೇಮೊದಲಾದವುಗಳನ್ನು ರಾಜಭಾಷೆಯಲ್ಲಿ ಓದುವದರಿಂದ ಅದರಲ್ಲಿ ಪ್ರವೀಣರಾಗಬಹುದು. ವಿದ್ಯಾರ್ಥಿಗಳು ಇಂಗ್ಲೀಷು ಭಾಷೆಯಲ್ಲಿ ಶಾಸ್ತ್ರವಿಷಯಗಳನ್ನು ಕಲಿಯಲು ಉಪಯೋಗಮಾಡುವ ಕಾಲ

ವನ್ನು ಇಂಗ್ಲೀಷು ವಾಙ್ಮಯವನ್ನು ಪಠಮಾಡಿಕೊಳ್ಳಲು ಉಪಯೋಗಿಸಿದರೆ ಇಂಗ್ಲೀಷು ಗ್ರಂಥಕಾರರೊಡನೆ ಸಮಾನವಾದ ಆಂಗ್ಲಸಾಹಿತ್ಯವನ್ನು ಪಡೆಯಬಹುದು.

ಇಂಗ್ಲೀಷನ್ನರಿಯದವರು ಬೀಜಗಣಿತ, ರೇಖಾಗಣಿತ, ವೃತ್ತ, ದೀರ್ಘವೃತ್ತ ಸಂಬಂಧಗಳಾದ ಸಿದ್ಧಾಂತಗಳು ಇತ್ಯಾದಿ ವಿಷಯಗಳನ್ನು ಕುರಿತು ತಾಯ್ನುಡಿಯಲ್ಲಿ ಪರಸ್ಪರ ಮಾತನಾಡಿಕೊಳ್ಳುವಕಾಲ ಬಂದರೆ ಅದು ನಿಶ್ಚಯವಾಗಿ ದೇಶಾಭ್ಯುದಯ ಚಿಹ್ನವೆಂದು ತಿಳಿಯಬಹುದು. ಶರೀರದ ರಕ್ತವು ಕೆಟ್ಟುಹೋದರೆ ಮನುಷ್ಯನು ರೋಗಗ್ರಸ್ತನಾಗುವಂತೆ ಮಾತೃಭಾಷೆಯು ಹೀನಸ್ಥಿತಿಗೆ ಬಂದರೆ ಮಾತೃಭೂಮಿಯು ದುರ್ದಶಾಗ್ರಸ್ತವಾಗುತ್ತದೆ. ಮಾತೃಭಾಷೆಯನ್ನು ಆಂಗ್ಲೇಯಭಾಷೆಯೊಡನೆ ಸಮಾನವಾದ ಸ್ಥಿತಿಗೆ ಬರುವಂತೆ ಮಾಡಿ ತನ್ಮೂಲಕ ಮಾತೃಭೂಮಿಯ ದುಸ್ಥಿತಿಯನ್ನು ತೊಲಗಿಸಬೇಕಾದ ಭಾರವು ಆಂಗ್ಲ ವಿದ್ಯಾವಿಶಾರದರಾದ ಕರ್ಣಾಟಕ ಸೋದರ ಸೋದರಿಯರಮೇಲಿದೆ.

ಪ್ರಿಯಮಾತೆಯರೆ! ಪ್ರಿಯಸಹೋದರಿಯರೆ! ನಮ್ಮ ಸೋದರರು ಸತತವೂ ಉದ್ಯೋಗ ನಿರತರಾಗಿರುವದರಿಂದ ಅವರಿಗೆ ಈ ವಿಷಯಗಳನ್ನು ಆಲೋಚಿಸಲು ವಿಶೇಷ ಅವಕಾಶವು ದೊರೆಯುವದಿಲ್ಲ. ಆದಕಾರಣ ವಿದುಷೀಮಣಿಯರಾದ ನೀವುಗಳು ಸಮಾಜಗಳಲ್ಲಿ ಆಲೋಚಿಸಿ ಭಾಷೆಯ ಸ್ಥಿತಿಯನ್ನು ನವೀನಕಾಲಕ್ಕೆ ಸರಿಹೋಗುವಂತೆ ತಿದ್ದಿಕೊಂಡು ಅದರಲ್ಲಿರುವ ಲೋಪಗಳನ್ನು ಸರಿಪಡಿಸಿಕೊಳ್ಳಬೇಕು. ಮೇಲೆ ಹೇಳಿದಂತೆ ಪಾಠಶಾಲೆಗಳಲ್ಲಿ ಶಾಸ್ತ್ರವಿಷಯಗಳನ್ನು ಮಾತೃಭಾಷೆಯಲ್ಲಿ ಬೋಧಿಸುವಂತೆಯೂ, ಇತಿಹಾಸಗಳು, ಉಪನ್ಯಾಸಗಳು ಇತ್ಯಾದಿಗಳನ್ನು ಇಂಗ್ಲೀಷಿನಲ್ಲಿ ಬೋಧಿಸುವಂತೆಯೂ ಏರ್ಪಾಟು ಮಾಡಬೇಕೆಂದು ಪಾಲಕರನ್ನು ಪ್ರಾರ್ಥಿಸಬೇಕು. ಭೂಪತನವಾದ ಮೊದಲ್ಗೊಂಡು ಭೂಕಯಸವಾಗುವವರೆಗೂ ಯಾವಭಾಷೆಯನ್ನು ಮಾತನಾಡುತ್ತೇವೆಯೋ ಅಂತಹ ಮಾತೃಭಾಷೆಯನ್ನು ಉದ್ಧಾರಮಾಡಲು ಸೋದರಿಯರು ವಿಶೇಷ ಶ್ರದ್ಧೆಯನ್ನು ವಹಿಸಬೇಕೆಂದು ಪ್ರಾರ್ಥಿಸುತ್ತೇನೆ

---

೬೦

# ಕು ರೂ ಪ

(ಒಂದು ಸಣ್ಣ ಕಥೆ)

ಅನುವಾದಕ.—ಸಂಪಾದಕ.

ನಗರದಲ್ಲೆಲ್ಲಿಯೂ ಹಾಹಾಕಾರವೆದ್ದಿತು. ಕಳಿಂಗರಾಜನ ಆಸ್ಥಾನದ ರಾಜಪುರೋಹಿತನೂ ರಾಜಕರ್ಮಚಾರಿಯೂ ಸಪರಿವಾರರಾಗಿ ಪ್ರಾಣದಂಡನೆಯ ಶಿಕ್ಷೆಯನ್ನು ವಹಿಸಬೇಕೆಂದು ರಾಜಾಜ್ಞೆಯಾಗಿದ್ದಿತು. ಈ ವರ್ತಮಾನವನ್ನು ತಿಳಿದ ನಗರವಾಸಿಗಳು ಹಾಹಾಕಾರಗೊಳಿಸುತ್ತಿದ್ದರು.

ಪ್ರಥಮ ಮಂತ್ರಿಯೂ ಆಸ್ಥಾನದ ಉಚ್ಚಪದವೀದರರೂ ದಂಡಿತ ವ್ಯಕ್ತಿಗಳಪರವಾಗಿ ಮಹಾರಾಜನಲ್ಲಿ ಭಿಕ್ಷಾರ್ಥಿಯಾಗಿ ಹೋಗುತಿದ್ದರು. ಹೀಗೆ ಹೋದವರು ಕೋಪಾಗ್ನಿಯಿಂದ ಜ್ವಲಿಸುತ್ತಿರುವ ಮಹಾರಾಜನ ಕಣ್ಣುಗಳನ್ನು ನೋಡಿ ಹೆದರಿ ಬಾಯಿಬಿಟ್ಟು ಹೇಳಲಸಮರ್ಥರಾಗಿ ಮುಂದಿಟ್ಟ ಹೆಜ್ಜೆಯನ್ನು ಹಿಂತಿರುಗಿಸಿದರು.

ಯಥಾಸಮಯದಲ್ಲಿ ಲಕ್ಷೋಪಲಕ್ಷ ಸ್ತ್ರೀಪುರುಷರ ಸಮುಖದಲ್ಲಿ ಮುಖ್ಯೋದ್ಯೋಗಸ್ಥ ಮತ್ತು ಪುರೋಹಿತನ ವರುಂಡವು ಮುಂಡದಿಂದ ಬೇರೆ ಮಾಡಲ್ಪಟ್ಟಿತು. ನೆರೆದಿದ್ದ ಜನಸ್ತೋಮವು ತ್ರಾಹಿ ! ತ್ರಾಹಿ ! ಎಂದು ಮೊರೆಯಿಡುತ್ತಾ ಎದ್ದಿತು.

ಈರೀತಿ ಶಿರವನ್ನರ್ಪಿಸಲು ಈ ಹತಭಾಗ್ಯರಾದ ಪುರೋಹಿತನೂ ರಾಜಕರ್ಮಚಾರಿಯೂ ಮಾಡಿದ ಅಂತಹ ಕ್ರೂರ ಅಪರಾಧವಾದರೂ ಏನಿರಬಹುದು? ದ್ರವ್ಯಕ್ಕೆ ಆಸೆಬಿದ್ದು, ಮಿಥ್ಯಾಪ್ರಶಂಸೆಗೊಳಪಟ್ಟು ಮಹಾರಾಜನಿಗೆ ಕುರೂಪಿಯಾದ ಕನ್ಯೆಯನ್ನು ವಿವಾಹಮಾಡಿಸಿದ್ದೇ ಪುರೋಹಿತನ ಮತ್ತು ರಾಜಕರ್ಮಚಾರಿಯ ಮಹಾಪರಾಧ. ಇಷ್ಟುಮಾತ್ರಕ್ಕೆ ಆ ಹತಭಾಗ್ಯನು ತನ್ನ ಜೀವಕ್ಕೆ ತರ್ಪಣ ಬಿಡಬೇಕಾಯಿತು. ಪುರೋ

ಹಿತಸೆ ಮತ್ತು ರಾಜಕರ್ಮಚಾರಿಯು ರಕ್ತಬಲಿಯಿಂದ ಕೂಡ ಮಹಾ ರಾಜನ ಕೋಪಾಗ್ನಿಯು ಶಾಂತವಾಗಲಿಲ್ಲ. ಅಂದಿನಿಂದ ಸದಾ ಚಿಂತೆ ಯಲ್ಲಿಯೇ ಮುಳುಗಿದ್ದನು. ಮಾತುಮಾತಿಗೂ ರೇಗುತಿದ್ದುದರಿಂದ ಯಾವ ಅಧಮನೂ ಇವನೊಡನೆ ಮಾತನಾಡಲು ಧೈರ್ಯವುಳ್ಳವನಾಗಲಿಲ್ಲ.

ಯಾವ ರಾಜಪತ್ನಿಯು ಕಾರಣದಿಂದ ಇಂತಹ ಭೀಷಣ ಕಾಂಡವು ನಡೆಯುತ್ತಿದ್ದಿತೋ ಆ ಹತಭಾಗಿನಿಯ ವಿಷಯವನ್ನು ಬರೆಯಬೇಕೆಂದರೆ ಹೃದಯಕಂಪದಿಂದ ಲೇಖನಿಯು ಮುಂದರಿಯಲಾರದು. ಹಾಹಾ ! ಅವಳು ಹಾಲಿಗೆಬಿದ್ದ ನೊಣದಂತೆ ತಲ್ಲಣಿಸುತ್ತಿದ್ದಳು. ನೊಂದ ಮನವುಳ್ಳ ರಾಣಿಯು ತನ್ನ ದುರ್ದೈವವನ್ನು ನಿಂದಿಸಿಕೊಳ್ಳುತ್ತ, ತದ್ದುಃಖಕಮು ಸಾರ್ಥವಾಗಿ ಕಣ್ಣೀರು ಸುರಿಸುತ್ತಾ ಕಾಲಕಳೆಯುತ್ತಿದ್ದಳು.

ಈರೀತಿ ಕೆಲವು ದಿನಗಳು ಕಳೆದವು. ತಾನು ಪ್ರಪಂಚ ಸುಖ ದಿಂದ ವಂಚಿತಳಾಗಿದ್ದರೂ ಪತಿಸೇವೆಯಾದರೂ ದೊರೆತರೆ ಸಾಕೆಂದೆಣಿಸಿ ಅನುನಯ ವಿನಯ ಭಕ್ತಿ ವಿಶ್ವಾಸದಿಂದ ಕಷ್ಟಪಟ್ಟು ಪತಿಯ ಉಚ್ಛಿಷ್ಟ ಅನ್ನಾದರೂ ಉಣ್ಣುವ ಅಧಿಕಾರವನ್ನು ಪಡೆದಳು. ಇಷ್ಟು ಅಧಿಕಾರ ವನ್ನು ಪಡೆದ ರಾಣಿಯು ತನಗೆ ಸ್ವರ್ಗವು ಕೈಗೆಟುಕಿದಷ್ಟು ಸಂತೋಷ ಪಟ್ಟಳು. ಸ್ನೇಹ, ಪ್ರೀತಿ ಮತ್ತು ಶ್ರದ್ಧೆಯಿಂದ ಪತಿಯ ಚಿತ್ರಪಠ ವನ್ನು ಪೂಜೆಮಾಡುತ್ತಾ ಪತಿಯುಚ್ಛಿಷ್ಟದಿಂದಲೇ ತೃಪ್ತಳಾಗಿ ಕಾಲ ಕಳೆ ಯುತಿದ್ದಳು.

ಮಹಾರಾಜನ ಹೃದಯದಲ್ಲಿ ಶೋಕವು ಮನೆಮಾಡಿಕೊಂಡಿತು. ದಿನೇದಿನೇ ರಾಜನು ಕ್ಷಯಿಸಹತ್ತಿದನು. ರಾಜವೈದ್ಯನು ರೋಗಪರೀಕ್ಷೆ ಮಾಡಲು ಬಂದನು. ಮಂತ್ರಿಯು ರೋಗಿಯ ಪರ್ಯಂಕದ ಬಳಿ ನಿಂತು ನೀರವವಾಗಿ ಅಶ್ರುವರ್ಷವನ್ನು ಸುರಿಸುತ್ತಿದ್ದನು.

ಮಂತ್ರಿಯು ಹೊರಟುಹೋದನಂತರ ವೃದ್ಧದಾಸಿಯು ರಾಜನ ಬಳಿ ಬಂದು, "ಮಹಾರಾಜ! ರಾಣಿಯು ಕೇವಲ ನಿನ್ನುಚ್ಛಿಷ್ಟವನ್ನು ಮಾತ್ರ ತಿಂದು ಕಾಲ ಕಳೆಯುತ್ತಿರುವಳು. ಅವಳ ದುಃಖವನ್ನು ನೋಡುವುದಕ್ಕೆ ಕಷ್ಟವಾಗಿದೆ" ಎಂದು ಹೇಳಲು, ಮಹಾರಾಜನು ಹೊದ್ದಿಕೆಯಿಂದ ಮುಖವನ್ನು ಮುಚ್ಚಿಕೊಂಡು ಮತ್ತೊಂದು ಕಡೆ

ತಿರುಗಿ ಮಲಗಿದ್ದನ್ನು ಕಂಡ ದಾಸಿಯು ಬಂದದಾರಿಯಲ್ಲಿಯೇ ಹಿಂತಿರುಗಿದಳು. ಆ ಕೊಠಡಿಯೆಲ್ಲವೂ ನಿಶ್ಶಬ್ದತೆಯಿಂದ ತುಂಬಿದ್ದಿತು.

ಮಹಾರಾಜನು ವಿಷಪಾನಮಾಡಿರುವನೆಂಬ ಸುದ್ದಿಯು ನಿಮಿಷ ಮಾತ್ರದಲ್ಲಿ ಅರಮನೆಯಲ್ಲೆಲ್ಲಾ ವ್ಯಾಪಿಸಿತು. ರಾಜಪತ್ನಿಯು ಒಂದೇ ಉಸುರಿಗೆ ಮಹಾರಾಜನ ಬಳಿಗೆ ಓಡಿಬಂದಳು. ಪರ್ಯಂಕದ ಕೆಳಗೆ ಒಂದು ಸ್ವರ್ಣಪಾತ್ರದಲ್ಲಿ ಅರಸನು ಕುಡಿದು ಮಿಕ್ಕಿದ್ದ ಸ್ವಲ್ಪ ವಿಷವಿರುವುದನ್ನು ರಾಣಿಯು ಕಂಡಳು. ರಾಜನು ಕುಡಿದ ನಂತರ ಬಟ್ಟಲನ್ನು ಮಂಚದ ಕೆಳಗೆ ಬಿಸಾಡಿದ್ದನು.

ರಾಣಿಯು ಪರ್ಯಂಕದ ಬಳಿಗೆ ಹೋಗಿ ನೋಡಲು ಪ್ರಾಣಹೀನವಾದ ರಾಜನ ದೇಹವು ಹಾಸಿಗೆಯ ಒಂದು ಮೂಲೆಯಲ್ಲಿ ಉರುಳಿದ್ದಿತು. ರಾಣಿಯು ಕೈಜೋಡಿಸಿಕೊಂಡು "ದೇವ! ತಮ್ಮ ಚರಣಸ್ಪರ್ಶ ಮಾಡುವ ಯೋಗ್ಯತೆಯು ಇಂದಿನವರೆಗೂ ಈ ಹತಭಾಗಿನಿಗೆ ದೊರೆಯಲಿಲ್ಲ; ತಮ್ಮ ಅಂತಿಮ ಕಾಲದಲ್ಲಿ ತಮ್ಮ ಪವಿತ್ರದೇಹವನ್ನು ಸ್ಪರ್ಶಮಾಡುವುದೂ ಮಹಾಪರಾಧವೇ ! ಈ ಅಧಿಕಾರವು ನನಗಿಲ್ಲದಿದ್ದರೂ ತಮ್ಮುಚ್ಛಿಷ್ಟವನ್ನುಣ್ಣುವ ಅಧಿಕಾರವಾದರೂ ಇದೆ. ಆದುದರಿಂದ ಈ ದಾಸಿಯು ಇಂದು ತಮ್ಮುಚ್ಛಿಷ್ಟವನ್ನು ತಿಂದು ತನ್ನ ಜನ್ಮಸಾರ್ಥಕತೆಯನ್ನು ಮಾಡಿಕೊಳ್ಳುವಳು" ಎಂದು ಹೇಳಿ ವಿಷದಬಟ್ಟಲನ್ನು ತೆಗೆದುಕೊಂಡು ವಿಷವನ್ನು ಕುಡಿಯಲು ಬಾಯಿಯಸಮೀಪಕ್ಕೆ ತೆಗೆದುಕೊಂಡುಹೋದಾಗ ಪರ್ಯಂಕದಲ್ಲಿ ಶಯನಿಸಿದ್ದ ಮಹಾರಾಜನೆದ್ದು ರಾಣಿಯ ಕೈಯಲ್ಲಿದ್ದ ವಿಷದಬಟ್ಟಲನ್ನು ಕಿತ್ತು ದೂರ ಬಿಸುಟು ಇಷ್ಟುದಿನವೂ ಕಣ್ಣೆತ್ತಿ ಸಹ ನೋಡದಿದ್ದ ಕುರೂಪಿ ರಾಣಿಯನ್ನು ತನ್ನ ಬಾಹುಗಳಲ್ಲಿ ಬಂಧಿಸಿದನು. ರೋದಿಸುತ್ತ ಪರ್ಯಂಕದಬಳಿ ನಿಂತಿದ್ದ ಇತರ ರಾಣಿಯರು ಬೆಪ್ಪಾಗಿ ನೋಡುತ್ತಿದ್ದರು.

ಹೊರಗೆ ವಸಂತಕಾಲದ ತಂಗಾಳಿಯಿಂದ ನಿಂಬೆಯ ಎಲೆಗಳು ನಿಧಾನವಾಗಿ ಅಲ್ಲಾಡುತ್ತಿದ್ದವು. ಪ್ರಾಸಾದದ ಶಿಖರದಲ್ಲಿ ಕುಳಿತಿದ್ದ ಕೋಗಿಲೆಯು "ಕುಹೂ ! ಕುಹೂ !" ಎಂದು ಶಬ್ದಿಸತೊಡಗಿತು.

ಈಗ ಮಹಾರಾಜನ ಮನಸ್ಸಿಗೆ ಕುರೂಪಳಾಗಿದ್ದ ಪತ್ನಿಯ ಮುಖ ಬಿಂಬವು ಪೂರ್ಣಚಂದ್ರಸದೃಶವಾಗಿ ಕಂಡುಬಂದಿತು. [illegible]

ಹತ್ಯೆಯುಸಲುವಾಗಿ ಚಿಂತಿಸಿದನು. ಮತ್ತೆ ಚಿಂತಿಸಿ ಫಲವೇನು? ಪ್ರಪಂಚವಮಾಯೆ ಇಷ್ಟೇ. ಗುಣವು ಪೂಜ್ಯವಲ್ಲದೆ ರೂಪಿನಲ್ಲಿಯೂ, ಸೌಂದರ್ಯದಲ್ಲಿಯೂ ಏನಿದೆ? ಇದನ್ನು ತಿಳಿದೂ ತಿಳಿದು ಮೋಹಪರವಶವಾಗುವ ಮಾನವಪ್ರಕೃತಿ ಯೆಂತಹದು

"ಗುಣವೇ ಪೂಜ್ಯವಲ್ಲದೆ ರೂಪವಲ್ಲ."

---

# ಅಂಚೆಮನೆಯಿಂದ

---

## ಪತ್ರಾಂಕ ೧.

ನನ್ನ ಚಿಕ್ಕತಂಗಿಯರೆ,

ಈ ಕಾಗದವನ್ನು ನಿಮಗೆ ಬರೆಯುವುದು, ನಿಮ್ಮನ್ನು ಕುರಿತು ಬಂದೆರಡು ಅವಶ್ಯಕವಾದ ಮಾತುಗಳನ್ನು ನಿಸ್ಸಂಕೋಚವಾಗಿ ಹೇಳಬೇಕೆಂಬ ಉದ್ದೇಶದಿಂದ. ಉಪದೇಶವು ನನ್ನ ಕಾರ್ಯವಲ್ಲ. ಪ್ರೀತಿಯ ಗೆಳೆಯರಂತೆ ಸರಳಚಿತ್ತದಿಂದ ಮಾತಾಡುವುದೇ ಇದರ ಮುಖ್ಯ ಧ್ಯೇಯವು. ಆದುದರಿಂದ ನಾನು ಬರೆಯುವುದೆಲ್ಲವೂ ನಿಮ್ಮ ಮೇಲಿನ ಪವಿತ್ರ ಸೋದರಿಸ್ನೇಹ, ಮರ್ಯಾದೆ, ಹಾಗೂ ಅನುಕಂಪದಿಂದಲೇ ಎಂದು ತಿಳಿಯುವುದು.

ಮೊಟ್ಟಮೊದಲು ಇಹಸಂಸಾರಕ್ಕೆ ನೀವೆಷ್ಟೊಂದು ಅವಶ್ಯಕರು ಮತ್ತು ಎಂತಹ ಅಗ್ರಸ್ಥಾನವನ್ನು ಹೊಂದಿರುವಿರೆಂಬುದನ್ನು ನಿಮ್ಮ ನೆನಪಿಗೆ ತರಲಿಚ್ಛಿಸುವೆನು. ಏಕೆಂದರೆ, ನಿಮ್ಮಲ್ಲನೇಕರು ಎಷ್ಟೋಬಾರಿ ನಿರಾಶ ಚಿತ್ತರಾಗಿ ಮನಸ್ಸಿನಲ್ಲಿ "ನಾನು ಹುಡುಗಿಯಾಗಿ ಹುಟ್ಟಿದೆನೇಕೆ? ಏಕೆ ಹುಡುಗನಾಗಿ ಹುಟ್ಟಲಿಲ್ಲ" ಎಂದು ಹೇಳಿಕೊಳ್ಳುವಿರೆಂದು ನಾನು ಬಲ್ಲೆನು. ಅಷ್ಟೇಕೆ, ಎಷ್ಟೋಬಾರಿ ನನ್ನ ಬಾಯಿಂದಲೂ ಅಂತಹ ಉದ್ಗಾರಗಳು ಹೊರಟಿರುವವು. ಇದರ ಕಾರಣವೇನೆಂದರೆ, ನಮ್ಮ ಸಮಾಜದ ಮತ್ತು ಸಂಸಾರದ ಪರಿಸ್ಥಿತಿ ಅಥವಾ ಸಮಾವರಣವು, ಬಾಲಿಕೆಯರ ಹೃದಯ ವಿಕಾಸಕ್ಕೆ ಎಡೆಗೊಡದಿರುವುದು. ಎಷ್ಟೋಜನ ತಂದೆ ತಾಯಿಗಳು, ಮಗನು ಹುಟ್ಟಲೆಂದು ಹಂಬಲಪಡುವರು. ಆದರೆ ಹೆಣ್ಣು ಹುಟ್ಟಿತೆಂದರೆ

ಆದರಿಸ ಬೇಕಾದುದು ಹಾಗಿರಲಿ, ಕಣ್ಣೆತ್ತಿ ನೋಡುವುದೂ ಇಲ್ಲ. ಹುಡುಗಿಯರು ಕೇವಲ ಪಾತ್ರೆ ಪದಾರ್ಥಗಳೆಂದೂ, ತಂದೆ ತಾಯಿಗಳ ಇಷ್ಟ ಬಂದಂತೆ ಯಾರಾದರೊಬ್ಬ ವರನಿಗೆ ಅವಕಾಶವು ದೊರತೊಡನೆಯೇ ದಾನಮಾಡಿ ಕೊಟ್ಟುಬಿಟ್ಟರಾಯಿತೆಂದು ಭಾವಿಸುವ ಎಷ್ಟೋ ಜನರನ್ನು ನಾನು ನೋಡಿರುವೆನು. ಇಷ್ಟೊಂದು ಅಂತರಾಯಗಳಿದ್ದರೂ ನೀವು ನಿಮ್ಮ ಜನ್ಮವನ್ನು ನಿಂದಿಸಿಕೊಳ್ಳಬೇಕಾದ ಅವಶ್ಯಕತೆ ಇಲ್ಲವೆಂದು ಮತ್ತೆ ನಿಮಗೆ ಒತ್ತಿಹೇಳುವೆನು. ಹುಡುಗಿಯರು ಹೆಚ್ಚಿಲ್ಲದಿದ್ದರೆ ಹುಡುಗರಷ್ಟೇ ಪ್ರಧಾನರೆಂಬುದನ್ನು ನೀವು ಅರಿತುಕೊಳ್ಳಬೇಕಾದುದು ಮೊದಲನೆಯ ಕೆಲಸ.

ಬಾಲ್ಯವೇ ನಿಮ್ಮ ಮುಂದಿನ ಹೆಣ್ತನದ ಹಾಗೂ ತಾಯ್ತನದ ತಳಹದಿಯು. ನೀವೆಂತಹ ಗೃಹಿಣಿಯರು ಮತ್ತು ತಾಯಿಯರಾಗುವಿರೆಂಬುದು ನಿಮ್ಮ ಎಳೆತನದ ಪರಿಸ್ಥಿತಿಯನ್ನನುಸರಿಸಿರುವುದು. ಆದುದರಿಂದಲೇ ಈಗ ನೀವು ನಿಮ್ಮ ಆತ್ಮೋನ್ನತಿಯ ವಿಷಯದಲ್ಲಿ ಉದಾಸೀನರಾಗುವುದು ಒಳ್ಳೆತಲ್ಲ. ಒಂದು ಜನಾಂಗದ ಲಾಲನೆ ಪಾಲನೆಗಳ ಪವಿತ್ರಭಾರವು ನಿಮ್ಮದು. ಅದರ ಸಂಸ್ಕೃತಿಯ ರಕ್ಷಣೆಯ ಕಾರ್ಯವು ನಿಮ್ಮದು. ಜನಾಂಗದ ಮೇಲ್ಮೆಯನ್ನು ಕಾಯ್ದುಕೊಂಡು, ಅದರ ಪ್ರಗತಿಯನ್ನು ಉದ್ದೀಪನಗೊಳಿಸುವುದು ನಿಮ್ಮ ಕೈಯಲ್ಲಿ. ತಾಯಿಯರೇ ಒಂದು ದೇಶದ ಮುಂದಿನ ವೀರರನ್ನೂ, ಸಾಧ್ವಿಯರನ್ನೂ ತರಬೇತುಮಾಡುವ ವಿದ್ಯಾಶಾಲೆಯು; ಹೃದಯವು ಹೊಸಹೊಸ ವಿಷಯಗಳನ್ನು ತಿಳಿದುಕೊಳ್ಳುವಹಾಗೂ ಬಹು ಸುಲಭವಾಗಿ ಆಳಲ್ಪಡಬಹುದಾದ ಸ್ಥಿತಿಯಲ್ಲಿರುವಾಗ ಅವರು ನಿಮಗೆ ದೊರಕುವರು.

ಪ್ರತಿಯೊಬ್ಬ ಮಹಾತ್ಮನೂ, ಪ್ರತಿಯೊಬ್ಬ ವೀರಪುರುಷನೂ, ತಾಯಿಯ ಅಡಿಗಳಲ್ಲಿಯೇ ತನ್ನ ಪ್ರತಿಭೆಯನ್ನು ಹೊಂದಿರುವನು. ಆ ದೇಶವತ್ಸಲತೆಯ ಕಿಡಿಯನ್ನು, ಒಮ್ಮೆಗೆ ಹತ್ತಿಕೊಂಡ ಕಾಡಿಲೆ ಮೊಗಲ್ ಸಾಮ್ರಾಜ್ಯವನ್ನು ತನ್ನ ಉರಿಗಳಿಂದ ಅರ್ಧಪಾಲು ಸುಟ್ಟು ಹಾಕಿದ ದೇಶವತ್ಸಲತೆಯ ಕಿಡಿಯನ್ನು, ಛತ್ರಪತಿ ಶಿವಾಜಿಯ ಹೃದಯದಲ್ಲಿಟ್ಟವಳು ವೀರಮಾತೆ ಜೀಜಾಬಾಯಿಯಲ್ಲವೆ ?

ನಿಮ್ಮಲ್ಲಿ ಕೆಲವರು "ನಾನು ಹೆಣ್ತನದ ಹಾಗೂ ತಾಯ್ತನದ ಹೊರೆಯನ್ನು ಹೊರಲಾರೆ" ನೆಂದು ಹೇಳಬಹುದು. ಆದರೆ ಜ್ಞಾಪಕದಲ್ಲಿರಲಿ; ನಾನು ತಾಯ್ತನವೆಂದು ಹೇಳುವದು ಕೇವಲ ಮಕ್ಕಳನ್ನು ಹೆತ್ತ ತಾಯಿಯರಿಗಲ್ಲ ಪ್ರತಿಯೊಬ್ಬ ಸ್ತ್ರೀಯೂ ಪತ್ನಿಯಾಗದಿರಬಹುದು; ಆದರೆ ಪ್ರತಿಯೊಬ್ಬ ಸ್ತ್ರೀಯೂ ತನ್ನ ನೈಸರ್ಗಿಕವಾದ ಗುಣಗಳಿಂದ ತಾಯಾಗಿರುವಳು. ನಿಮ್ಮಲ್ಲಿ ಪ್ರತಿಯೊಬ್ಬರೂ ಆ ತಾಯ್ತನದ ಗುರುತುಗಳಾದ ಸದ್ಗುಣಗಳನ್ನು ಹೊಂದಿರುವಿರಿ. ನಿಮ್ಮ ವಾತ್ಸಲ್ಯಕ್ಕೂ ಅನುಕಂಪಕ್ಕೂ ವಶೀಭೂತರಾಗದಿರಲು ಯಾರಿಂದಲೂ ಸಾಧ್ಯವಿಲ್ಲ. ತಾಯ್ತನದ ಶಕ್ತಿಯು ಬಹು ಮುಖ್ಯವಾದುದು, ಅಪಾರವಾದುದು. ಪ್ರತಿಯೊಂದು ರಾಷ್ಟ್ರದಲ್ಲಿಯೂ ಪ್ರತಿಯೊಂದು ಜನಾಂಗದಲ್ಲಿಯೂ ಒಂದಲ್ಲೊಂದು ವಿಧದಿಂದ ಪವಿತ್ರವಾದ ತಾಯ್ತನದ ಪೂಜೆಯು ನಡೆಯುತ್ತಿರುವುದನ್ನು ನೋಡುವಿರಿ. ಆದುದರಿಂದ ಇನ್ನಾದರೂ ನೀವು ಮುಂದಿನ ತಾಯಿಯರಾಗಬೇಕೆಂಬುದನ್ನು ನೆನಪಿನಲ್ಲಿಟ್ಟುಕೊಳ್ಳಿ. ಮತ್ತು ನಿಮ್ಮ ಆ ಉಚ್ಚ ಪದವಿಗೆ ಯೋಗ್ಯರಾಗುವಂತೆ ನಿಮ್ಮ ಜೀವನವನ್ನು ತಿದ್ದಿಕೊಳ್ಳಿ.

"ಪ್ರೇಮಾಯತನ" ಇತಿ ನಿಮ್ಮ
ತುಂಗಭದ್ರಾ, 14-10-25 ಸು ಶು ತಿ.

---

# ಮಾನವ ಸುಖಬೋಧಾಮೃತ

(ಹಿಂದಿನ ಸಂಚಿಕೆಯಿಂದ ಮುಂದರಿಸಿದ್ದು)

## ೫. ಪಾತಿವ್ರತ್ಯ.

---

ತೊರೆಯದಿರು ಮಾನಿನಿ ! ವಿವೇಕವ |
ಪೊರೆವೆ ಸತ್ಯದಮಾರ್ಗ ಮುಳಿಯದೆ |
ಮೆರೆವ ನಿನ್ನ ಯಶೋದಯದೊಳಿರೆ ವಿವೇಕಬೋಧೆಗಳ ||

ಧರದಿ ನಿನ್ನಂಗಗಳವು ಕಾಂತಿಯು |
ರ್ಗಪಿ ಸೌಂದರ್ಯವನ್ನು ಪೆರ್ಚಿಸಿ |
ತರಜದಂದದಿಗೈಸಿ ಮನ್ನಣೆಯಿತ್ತು ಮೆರೆಯಿಪುವು ||೧||
ನಿರುಪಮಾನಂದಕರವೆನಿಪಾ |
ಸುರಭಿಯೆಂಬಾ ಯೌವನದೆ ನೀ |
ಮೆರೆಯುತಿರೆ ಮಾನವರ್ಕಳ ದಿಟ್ಟಿಗಳರ್ಥವೇನೆನುತ ||
ಧರದೊಳರಿಯೌ ನಿನ್ನ ಚಿತ್ತತೆ |
ಮರುಳಮಾಡಿಸುತಿರುವ ಮೋಹಾ |
ಕರದನಾತಿ ಹೃದಯವಂ ನೀಡದಲೆ ಕಾಯುತಿರು ||೨||
ಪುರುಷನಿಗೆ ನಿಜಗೆಳತಿಯಲ್ಲದೆ |
ಪರಪುರುಷನ ದಾಸ್ಯಳಲ್ಲವು |
ನಿರುತವಲ್ಲಧಗೊದಗಿದಳಲನು ನೀನು ವಾರಿಸುತ ||
ಮರುಳದಿಂ ಸಸೋಕ್ತಿಯಾಡುತ |
ಹರಿಸಿಯಾನನ ಕೋಟಲೆಯನಾ |
ತುರದೊಳಿನಿಯಗೆ ಧರ್ಮಮಾರ್ಗದ ಬೋಧೆಯೊರೆಯುತಿರು ||೩||
ನಿಜಸತಿಯಳಾದವಳು ಪತಿಯಂ |
ಭಜಿಸುತವನಂ ತನ್ನೊಲುಮೆಗೆ ಸ |
ಹಜತನದೊಳೇವಶ್ಯಗೈದಿಸಿ ತನ್ನ ಹೃದಯದೊಳು ||
ಅಜನು ತಾ ಸರಸಿಜದೊಳಿಹಪರಿ |
ನಿಜಮಮತೆಯಿಂ ತೋರಿ ನಿರ್ಜರ |
ಕುಜದವೊಲು ಪತಿಯಿಷ್ಟವೆಲ್ಲವ ಸಲ್ಲಿಸುತ್ತಿಹಳು ||೪||
ಗಮನದಲಿ ಹಂಸೆಯನು ಪೋಲುತೆ |
ವಿಮಲಮಾನಸಳಾಗಿ ಪದಪಿನೊ |
ಳೆ ಮೆರೆವನಿಗರ್ವವನು ತೋರುತೆ ಗೃಹದಕಾರ್ಯಗಳ ||
ಸಮಯವರಿತೆಸೆಯುತಲಿ ಕರೆಯದ |
ರಮನೆಗಂ ತಾಪೋಗದಲೆ ಪ್ರ |
ವಿಮಲಸುಗುಣ ಕಿರೀಟವಾಂತುರೆಸಂತ ಮೆರೆಯುವಳು ||೫||
ಪತಿಯಸುಗುಣಾವಳಿಯ ಗಣಿಸುತೆ |
ಸತಿಗೆ ಪತಿಯೇ ದೈವವೆನ್ನುತೆ |
ಹಿತವಚನಸುಧೆಯನ್ನು ಪಾನವಗೈದು ಸತ್ಯವನು ||

ಸತತಬಿಡದಂತಿರುತತಿವಿಧೇ |
ಯುತಿಯುತೋರುತೆ ಸಾಹ್ವಯೀಯುತೆ |
ಚತುರಕಳೆಗಳನರಿದ ಸಾಧ್ವೀಮಣಿಯು ಮಾನ್ಯಳಲೆ ||೬||

ಪತಿಯುಳಲವಾರಿಸುತೆ ಸುತರಿಗೆ |
ಹಿತದಬುದ್ಧಿಯ ನೊರೆವುತಂ ಗೃಹ |
ಕೃತ್ಯದಮರ್ಮವಾರೊಳುಸಿರದೆ ತನ್ನಿರುವಿಕೆಯನು ||
ಸುತರುಕಂಡನು ಸರಿಪಸರಿಯುಸು |
ಮತಿಸಿ ನಡೆವಂತೆ ನಡೆದೊಡೆ ಮಾ |
ನಿತೆಯಿವಳೆಂಬತೇದೊಳಿಹಳ್ಳೆ ಸಾಧ್ವಿಪತಿಸುಖದೆ ||೭||

ಮಾಡೆನ್ನೆಯ ಚಾರುನೋಡುವ |
ನೋಡೆಕಾರ್ಯವ ಜವದೆಮಾಡಲು |
ಮೂಡಿದಾಮುಮತೆಯುದು ಕಾರಣಮಲ್ತೆಮಾನಿನಿಗೆ ||
ನಾಡಿಗಚ್ಚರಿಯಾಗಿ ಪಾಡುತೆ |
ಬೇಡಿಕೊಂಬಳು ಗೃದಕಪ್ಪಿಗೆ |
ಮಾಡುತಿಹಾಸ್ಯವನು ಕಾಂತದೆನೋಡಿ ನಗುತಿಹಳು ||೮||

ಜನುಮಸಾರ್ಥಕಗೊಳಿಸೆನೀಸ |
ಜ್ಜನರಸೇವಿಸುತ ವರಸದ್ಬೋ |
ಧನೆಯುಹ ಮಧುವನೀಂಟೆ ಮನಕೆಶಾಂತಿಯನು ||
ಅನುಗೊಳಿಸುತಲಿ ವೇದಗೋಚರ |
ನೆನಿಸಿ ಭಕ್ತರಭೀಷ್ಟ ಸಲ್ಲಿಸು |
ತನುಪಮಪದವನೀವದೇವನ ಕೃಪೆಯನಾರ್ಜಿಸಿರು ||೯||

ಅವನಿಂತಪ್ಪಸುದತಿಯು ತಾ |
ನೋವದಲೆ ಸಂಸೃತಿಯನಾನುತ |
ಜೀವಿಸುತ್ತಲೆ ಭಾವಜಾರಿಯ ಪದವಪೂಜೆಸಿರೆ ||
ಭೂವರರಿಗಿಂತಧಿಕಸೌಖ್ಯವ |
ಭಾವದೊಳು ತಾಳುವಗೆ ಜನನಂ |
ಸಾವುಗಳಿಲ್ಲದಾಪದದ ಪತಿಕಾಣ್ಬದಚ್ಚರಿಯೆ ||೧೦||

ಭೂಭಾರಭಂಜನಭಗವಂತನ ಲೀಲಾಭೂಮಿಯೆನಿಸಿದ ಕರ್ಮಕ್ಷೇತ್ರ ಭಾರತವರ್ಷದ ಭಾವೀಭಾಗ್ಯೋದಯವು ದೃಗ್ಗೋಚರವಾಗುತ್ತಲಿದೆ. ಈಗ ಲೀಗ ಭಾರತೀಯ ಅಂತರಾತ್ಮನ ಆಶೆಯು ಆಶಾತೀತ ಸಫಲತೆಯನ್ನು ಸಾಧಿಸುವ ಶಕ್ತಿಯನ್ನುಳ್ಳುದೆಂದು ಕಾಣುತ್ತಲಿದೆ. "ಕುಲಕಮಲೆ" ಯರೆನಿಸಿದ ಮಹಿಳಾಮಣಿಗಳ ಮಾನವು ಅಭಿಮಾನವನ್ನಾಹಗೊಳ್ಳುತ್ತಲಿದೆ. ಭಾರತ ಮಾತೆಯು ಮಾತೃಸ್ಥಾನವನ್ನುಳ್ಳ ಮಾನಿನಿಯರ ಮನ್ನಣೆಯನ್ನು ಮನಃ

ಅಖಿಲ ಭಾರತ ರಾಷ್ಟ್ರಮಹಾಸಭೆಯ (ಕಾನಪುರ)



40 ನೇ ಅಧಿವೇಶನದ ಮಾನ್ಯ ಅಧ್ಯಕ್ಷರು.

ಪೂರ್ವಕ ಇಚ್ಛಿಸುತ್ತಿದ್ದಾಳೆ. ಸುದೈವದಿಂದ, ಆ ಸತ್ಕಾರ್ಯ ಸಂಯೋಗವು ಸಮೀಪಿಸುತ್ತಿದೆ. ಆದ್ದರಿಂದಲೇ ಜಗಜ್ಜನನಿಯ ಜೀವಜ್ಯೋತಿಯು ಜನಜಾಗೃತಿಯನ್ನುಂಟುಮಾಡಿರುವುದು. ಜನನೀಜನ್ಮಭೂಮಿಯ ಲವಮಾತ್ರ ಲಜ್ಜೆಯನ್ನಾದರೂ ಉಳಿಸಿದ ಲಜ್ಜಾವತಿ ಲಲನೆಯರ ಚಾರುಚರಿತಾರ್ಥವು ಕೃತಾರ್ಥವೆನಿಸಿತು. ಧನ್ಯ ಸ್ತ್ರೀಜನ್ಮ ! ಧನ್ಯ ಭಾರತ !!

"ಭಾರತ ಕೋಗಿಲೆ" ಶ್ರೀಮತಿ ಸರೋಜಿನಿದೇವಿಯವರ "ಚರಿತ್ರ ಚಿತ್ರಣ" ದ ಆವಶ್ಯಕತೆಯಿಲ್ಲ. ಕಾರಣ, ಆ ಮಹಿಳಾಮಣಿಯ ಸ್ವನಾಮಧನ್ಯತೆಯು ಸಮಸ್ತರಿಗೂ ತಿಳಿದದ್ದೇ ಆಗಿದೆ. ಆದ್ದರಿಂದ ಅವರ "ಗುಣಗಾನ" ವನ್ನು ಮಾಡುವುದೆಂದರೆ ಸೂರ್ಯನಿಗೆ ನೀರಾಜನವನ್ನೆತ್ತಿದಂತೆ ಎಂದರೂ ತಪ್ಪಲ್ಲ. ಭಾರತೀಯ ಭವಿಷ್ಯವನ್ನು ಉಜ್ವಲಗೊಳಿಸುವ ರಾಷ್ಟ್ರಮಹಾಸಭೆಯು ಓರ್ವಮಹಿಳೆಗಿಂತಹ ಮಹಾಮರ್ಯಾದೆಯನ್ನಿತ್ತುದು ಸಹಸ್ರಮುಖ ಶ್ಲಾಘೆ

ನೀಯುವೇಸರಿ! ಆ ಮನ್ನಣೆಯು ಶ್ರೀಮತಿ ಸರೋಜಿನಿಯವರಿಗಲ್ಲ, ಅದು ಭಾರತೀಯ ಭಗಿನೀಮಂಡಳಕ್ಕೆ! ದೇಶಸೇವೆಯೇ ಈಶಸೇವೆಯೆಂದು ಗ್ರಹಿಸಿ ನಿಜಪ್ರಾಣವನ್ನರ್ಪಿಸಿದ ಘನಮಹಿಮರಿಗೆ ದೊರೆಯುವ ಈ ಪುಣ್ಯಪದವು ಇಂದು ಶ್ರೀಮತಿಯವರಿಂದ ಸಮಸ್ತ ಸ್ತ್ರೀಸಮುದಾಯಕ್ಕೆ ಲಭಿಸುವುದಾಯಿತು. ತತ್ಪ್ರಯುಕ್ತ ಅವರಿಗೆ ನಾವು ಚಿರಕೃತಜ್ಞರಾಗಬೇಕಾಗಿದೆ. ನಾಲಿಗೆಯಿಂದಲ್ಲ ಕಾರ್ಯದಿಂದ. "ತಾಯಿತಂಗಿಯರೇ, ಗೃಹವಿಜ್ಞಾನಕ್ಕೆ" ಗಮನಕೊಡಿರಿ. ನಿಮ್ಮಿಂದಾಗುವ ಕೆಲಸಕ್ಕೆ ನೀವೇಕೆ ಪರಮುಖಾಪೇಕ್ಷಿಗಳಾಗಬೇಕು? ಅಡಿಗೆ ಮಾಡುವ ಕೆಲಸವು ಹೇಗೆ ನಿಮ್ಮ ಜನ್ಮಸಿದ್ಧ ಅಧಿಕಾರವೋ ಹಾಗೆಯೇ ಭಾಗ್ಯಚಕ್ರ (ಚರಕ) ವೂ ನಿಮ್ಮ ಕೈಯಿಂದ ಸ್ಪರ್ಶಿಸಲ್ಪಡಲಿ" ಎಂದು ಅವರು ಬೃಹತ್ ಭಗಿನೀಮಂಡಳದಲ್ಲಿ ಹೇಳಿರುವರು. ಆದ್ದರಿಂದ ಇವಿಷ್ಟರ ಇಂಗಿತವನ್ನರಿತ ನಾವು "ಗೃಹಿಣೀಗೌರವ" ವನ್ನುಳಿಸಿದಂತಾಯಿತು.

"ಸ್ವಪ್ನಗಳನ್ನು ನೋಡುತ್ತಿರುವ ನಾನು ಇಂದು "ವ್ಯವಹಾರವಿಧಿಗಳನ್ನು" ಹೇಳುತ್ತೇನೆ—ಸೋದರರೇ ಮುಂದುವರಿಯಿರಿ. ಮುಂದುವರಿದು ಜಯಹಾರವನ್ನು ಹೊಂದಿರಿ."

"ಸನ್ಮಿತ್ರ್ಯರೇ! ನೀವು ನಿಮ್ಮ ನ್ಯಾಯವಾದ ವೀರತ್ವವನ್ನು ಮತ್ತು ಕೃತಜ್ಞತೆಯಾದ ಸಜ್ಜನತನವನ್ನು ಹೀಗೆಂದು ಹೇಳಿ ವ್ಯಕ್ತಪಡಿಸುತ್ತಿಲ್ಲವೇ? ನೀವು ನಮ್ಮ ಗೃಹಲಕ್ಷ್ಮಿಯರು, ಉಪಾಸಿಕೆಯರು, ನಮ್ಮಂತಃಕರಣದ ಶ್ರದ್ಧೆಯ ಸಂಚಾರಮಾಡುವವರು, ನಮ್ಮ ಆಶೆಯ ಅಸ್ಥಿರತೆಯನ್ನು ತೊಲಗಿಸುವವರು, ನಮ್ಮ ಹೃದಯದ ಕೋಮಲ ಕುಸುಮಗಳು. ತಾಯಂದಿರೇ! ತಂಗಿಯರೇ!! ಓ ಪತಿಪರಾಯಣೆಯರೇ!!! ನಾವುಗಳು ಸ್ವಾತಂತ್ರ್ಯ ಮಾರ್ಗದಮೇಲೆ ಹೆಜ್ಜೆಯನಿಟ್ಟಿದ್ದೇವೆ. ನಮಗೆ ನಿಜದೃಷ್ಟಿಯಿದೆ. ಗುಣಗೌರವದ ದೂರದೃಷ್ಟಿಯಿದೆ. ನೀನು ನಿನ್ನ ಪ್ರತಿಭೆಯಿಂದ ನಮ್ಮ ಪ್ರಕಾಶವನ್ನು ಪ್ರಜ್ವಲಿತಗೊಳಿಸು. ಮತ್ತು ಆ ದೂರವರ್ತಿ ಧ್ಯೇಯವನ್ನುಸಾಧಿಸಲು ನಮ್ಮ ಉನ್ನತಿಯ ದೇವ್ರೋಕದೇಶದೊಡನೆ ಪೂರ್ಣಾಶೆಯ ಪುರಸ್ಕಾರವಾಗಿ ಸೇರಿಸಿ ಬಿಡು."

"ಬೇಕಾದರೆ ನೀನು ನನ್ನ ಜೀವನದ ಸಮಸ್ತ ಆಶೆಗಳನ್ನೂ ಭಂಗಗೊಳಿಸು ಅಥವಾ ನನ್ನ ಪ್ರೇಮದೊಡನೆ ವಿಶ್ವಾಸಘಾತವನ್ನುಮಾಡಿ ಸಕಲ ಸುಖಸ್ವಪ್ನಗಳನ್ನೂ ನಷ್ಟಮಾಡು! ಆದರೂ ನಾನು ನಿಜದುಃಖವನ್ನು ಸಾರ್ವಜನಿಕ ಸುಖಸಮುದ್ಭವದಲ್ಲಿ ಶಾಂತಗೊಳಿಸುವೆನು. ದೈವ (fato) ವೇ! ನೀನು ನನ್ನ ಅಸ್ಥೂಲ, ಅಚಲ, ಅಜೇಯ ಆತ್ಮವನ್ನು ಸ್ವಾಧೀನಪಡಿಸುವ ವ್ಯರ್ಥಾಯತ್ನವನ್ನು ಮಾಡುತ್ತೀಯೆ!"

ಓಂ

# ಸರಸ್ವತಿ

ಸಂಪುಟ ೫ { ಕ್ರೋಧನ ವರ್ಷ · ಮಾರ್ಗಶಿರ ಮಾಸ } ಸಂಚಿಕೆ ೮

## ನಿವೇದನ

**ಪೂಜ್ಯ ಚಂದಾದಾರರಲ್ಲಿ ವಿನಂತಿ:—**

ಈಗ ಎರಡು ತಿಂಗಳುಗಳಿಂದಲೂ ಪ್ರವಾಸದಲ್ಲಿದ್ದುದರಿಂದ ಎರಡು ಮೂರು ಸಂಚಿಕೆಗಳು ಹೊರಡಲು ತಡವಾದುವು. ಇದಕ್ಕಾಗಿ ಸರಸ್ವತಿಯು ತಮ್ಮಲ್ಲಿ ಕ್ಷಮೆ ಬೇಡುವಳು. ಇನ್ನು ನಾಲ್ಕು ಸಂಚಿಕೆಗಳಾದರೆ ಸರಸ್ವತಿಗೆ ಐದು ವರ್ಷಗಳು ತುಂಬುವವು. 6 ನೆಯ ವರ್ಷದಿಂದ ಕೆಲವು ಬದಲಾವಣೆಗಳನ್ನು ಮಾಡಬೇಕೆಂದಿದೆ. ಈಗ ನಾಲ್ಕು ಫಾರಂಗಳು ಅಂದರೆ 32 ಪುಟಗಳುಮಾತ್ರ ಕೊಡುತ್ತಲಿದೆ. 6ನೆಯ ಸಂಪುಟದಿಂದ 5 ಫಾರಂಗಳು ಅಂದರೆ 40 ಪುಟಗಳು ಕೊಡಬೇಕೆಂದು ನಿಶ್ಚಯಿಸಿದೆ. ಅಲ್ಲದೆ ಸಾಧ್ಯವಾದಷ್ಟು ಚಿತ್ರಪಟಗಳನ್ನೂ, ಸ್ತ್ರೀಯರಿಗೆ ಮುಖ್ಯವಾದ "ಗೃಹವಿಜ್ಞಾನ" "ಸುಲಭಚಿಕಿತ್ಸೆ" "ಮಾತೃವಿಜ್ಞಾನ" "ಸ್ಫೂರ್ತಿ ಸ್ಥೈರ್ಯ ಧೈರ್ಯ" ವನ್ನುಹೆಚ್ಚಿಸುವ ಕಾದಂಬರಿಗಳನ್ನೂ "ಸುಖಲತಾ" ಎನ್ನುವ ನಾವಲೂ "ಷಾಜಹಾನ್" ಎನ್ನುವ ವಂಗಕವಿ ದ್ವಿಜೇಂದ್ರಲಾಲ್ ರಾಯರವರಿಂದ ರಚಿತವಾದ ವಂಗನಾಟಕದ ಭಾಷಾಂತರವನ್ನೂಮತ್ತು ಅನೇಕ ಮುಖ್ಯ ವಿಷಯಗಳನ್ನೂ ಪ್ರಕಟಿಸುವೆವು. ಚಂದಾ ಎಂದಿನಂತೆ ಮೂರು ರೂಪಾಯಿಗಳು ಮಾತ್ರವೇ. ವಿದ್ಯಾರ್ಥಿಗಳಿಗೂ, ವಾಚನಾಲಯಗಳಿಗೂ, ಬಡವರಾದ ಸ್ತ್ರೀಯರಿಗೂ ಎರಡು ರೂಪಾಯಿಗಳ ಚಂದಾಕ್ಕೆ ಕೊಡಲು ನಿರ್ಧರಿಸಿರುವೆವು. ಸ್ತ್ರೀಯರು ಈ ಸರಸ್ವತಿಗೆ ಬೇಕಾದ ಲೇಖನಗಳನ್ನು ಬರೆದುಕಳುಹಿಸಿದಲ್ಲಿ ಅವುಗಳನ್ನು ಅತ್ಯಾನಂದದಿಂದ ಪ್ರಕಟಿಸುವೆವು. ಇದುವರಿವಿಗೂ ಆದರಿಸಿದ ಸೋದರ ಸೋದರಿಯರು ಮುಂದೆಯೂ ಸರಸ್ವತಿಯನ್ನಾದರಿಸಬೇಕೆಂದು ಪ್ರಾರ್ಥನೆ.

# ರಾಷ್ಟ್ರೀಯ ಶಿಕ್ಷಣಸ್ವರೂಪವು.

(ಹಿಂದಿನ ಸಂಚಿಕೆಯಿಂದ ಮುಂದರಿಸಿದ್ದು)

ಇಲ್ಲಿಯವರೆಗೆ ರಾಷ್ಟ್ರೀಯ ಆದರ್ಶಗಳ ಪರಿಪೋಷಕ ಶಿಕ್ಷೆಯು ಸಂಕ್ಷೇಪವಿಚಾರ ಮಾಡಿದ್ದಾಯಿತು. ಈಗ ರಾಷ್ಟ್ರೀಯ ಆವಶ್ಯಕತೆಗಳ (National wants) ವಿಚಾರ ಮಾಡೋಣ: ಎಲ್ಲದಕ್ಕಿಂತಲೂ ಪ್ರಾಥಮಿಕ ಶಿಕ್ಷಣ (Primary Education)ವು ಅತ್ಯವಶ್ಯಕವಾಗಿರುವುದು. ಹಿಂದುಸ್ಥಾನದಲ್ಲಿ ಓದುಬರಹ ತಿಳಿದವರ ಸಂಖ್ಯೆಯು ತೀರ ಕಡಿಮೆಯೆನ್ನುವುದು ಎಲ್ಲರೂ ಅರಿತ ವಿಷಯವಾಗಿರುವುದು. ಓದುಬರಹ ಕಲಿಯುವುದು ಆತ್ಮಿಕ ಮತ್ತು ಭೌತಿಕ ಉನ್ನತಿಯ ಮುಖ್ಯ ಸಾಧನವು. ಕೇವಲ ಈ ದೃಷ್ಟಿಯಿಂದಲಾದರೂ ಸರ್ವರೂ ಓದುಬರಹ ಕಲಿಯುವುದು ಅತ್ಯಾವಶ್ಯಕವು. ಪ್ರತಿಯೊಬ್ಬ ಮನುಷ್ಯನಿಗೂ ತನ್ನ ಕೆಲಸಕಾರ್ಯಗಳು ಪೂರೈಸಿದ ನಂತರ ಪ್ರತಿನಿತ್ಯವೂ ಸ್ವಲ್ಪಕಾಲ ವಿರಾಮ ದೊರೆಯುವುದು. ಈಕಾಲದ ಸತ್ ಅಥವಾ ದುರ್ವಿನಿಯೋಗವು ಶಿಕ್ಷಣವನ್ನವಲಂಬಿಸಿರುವುದು. ಅನೇಕರು ಈಕಡೆ ದೃಷ್ಟಿಯಿಡುವುದಿಲ್ಲ. ಆದರೆ ಯಾರು ಶಿಕ್ಷಣದ ಮುಖ್ಯ ತತ್ವವನ್ನು ತಿಳಿದಿರುವರೋ ಅವರು ಇದನ್ನು ಮುಖ್ಯವಾಗಿ ಎಂದೂ ಮರೆಯಲಾರರು. ಮುಖ್ಯಮುಖ್ಯವಾದ ಪ್ರಾಂತಿಕ ಸರ್ಕಾರದವರು ಪ್ರಾಥಮಿಕಶಿಕ್ಷಣದ ಕಡೆ ಈಗ ಹೆಚ್ಚು ಲಕ್ಷ್ಯ ಕೊಡುತ್ತಿರುವದು ಬಹಳ ಆನಂದಕರವಾದ ವಿಷಯವು. ಆದರೆ ಅವರು ಈ ಸಂಬಂಧದಲ್ಲಿ ಸ್ಥಾನಿಕ ಸ್ವರಾಜ್ಯದ ಅಧಿಕಾರಗಳನ್ನು ಹೆಚ್ಚಿಸಲಿಲ್ಲ. ಈ ವಿಷಯದಲ್ಲಿ ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷ ಸಹಾಯವನ್ನು ಕೊಡಲು ಅನೇಕರು ವಚನಕೊಟ್ಟಿರುವುದರಿಂದ ನಾವು ಈ ವಿಚಾರದಲ್ಲಿ ಸುಮ್ಮನಿರದೆ ಕ್ಷಿಪ್ರದಲ್ಲಿಯೇ ಶಿಕ್ಷೆಯ ಶಿಕ್ಷಣದ ಪ್ರಕಾಶವನ್ನು ಹಿಂದುಸ್ಥಾನದ ಮೂಲೆಮೂಲೆಗೂ ತೆಗೆದುಕೊಂಡು ಹೋಗಬೇಕು. ಹಿಂದುಸ್ಥಾನದ ನಿಜವಾದ ಉನ್ನತಿಯು ಇದರಲ್ಲಿಯೇ ಇರುವುದು. ತಮ್ಮ ದೇಶದ ಸಮಸ್ಯೆಗಳನ್ನು ತಿಳಿದುಕೊಳ್ಳುವುದು ಮತ್ತು ಅದರ ಮೀಮಾಂಸೆ

ಯಲ್ಲಿ ಭಾಗತೆಗೆದುಕೊಳ್ಳುವುದೂ ಸ್ವಲ್ಪ ಮಹತ್ವದಮಾತಲ್ಲ. ಪ್ರಾಥಮಿಕ ಶಿಕ್ಷಣವು ಅವಶ್ಯಕವೆಂದು ಈಗ ಹೇಳಿಯಾಯಿತಷ್ಟೆ. ಆದರೆ ಅದನ್ನು ರಾಷ್ಟ್ರದ ಇತರ ಅವಶ್ಯಕತೆಗಳಿಂದ ವಿಚ್ಛಿನ್ನವಾಗಿಡಕೂಡದು. ಸಾಮಾನ್ಯ ಶಿಕ್ಷಣ ಮತ್ತು ಔದ್ಯೋಗಿಕ ಶಿಕ್ಷಣಗಳ ಸಂಯೋಗವಿರುವುದು ಸಾತ್ವಿಕದೃಷ್ಟಿಯಿಂದ ಅತ್ಯಾವಶ್ಯಕವೇ ಆಗಿರುವುದು. ಔದ್ಯೋಗಿಕ ಶಿಕ್ಷೆಯು ವಿನಹ ಆಗುವ ಪರಿಣಾಮವೇನೆಂದರೆ, ಪ್ರಕೃತ ಎಲ್ಲ ಕಡೆಗಳಲ್ಲಿಯೂ ಕಾಣುತ್ತಿರುವದು. ಹೇಳುವುದು ಹೆಚ್ಚು, ಮಾಡುವುದು ಸ್ವಲ್ಪ. ಹೇಳುವುದು ಒಂದೊಂದುವೇಳೆ ಅವಶ್ಯಕವಾದರೂ ಈ ಕಾರ್ಯವು ಜನಸಾಮಾನ್ಯರದಲ್ಲ. ವಿಶೇಷ ಶಿಕ್ಷಣ ಹೊಂದಿ ಅನುಭವ ಹೊಂದಿರುವವರು ಮಾತ್ರ ಈ ಕಾರ್ಯಕ್ಕರ್ಹರು. ಬರೀ ಉಪದೇಶಕರಿಂದ ಯಾವ ರಾಷ್ಟ್ರದ ಉನ್ನತಿಯೂ ಆಗುವುದಿಲ್ಲ. ಅದಕ್ಕಾಗಿ ಕಾರ್ಯತತ್ಪರರೂ ಇರಬೇಕು. ಆದುದರಿಂದ ಸಾಮಾನ್ಯ ಶಿಕ್ಷಣದ ಜೊತೆಯಲ್ಲಿಯೇ ಕ್ರಮಾನುಸಾರವಾಗಿಯೂ ಮತ್ತು ದೇಶದ ಅವಶ್ಯಾನುಸಾರವಾಗಿಯೂ ಔದ್ಯೋಗಿಕಶಿಕ್ಷೆಯು ಕೊಡಬೇಕಾಗುವುದು.

ಹಿಂದದೇಶದ ಪ್ರಧಾನ ಉದ್ಯೋಗವು ಕೃಷಿಯಾಗಿದೆ. ಇದು ಎಂದೆಂದಿಗೂ ಸ್ಥಿರವಾಗಿ ನಿಲ್ಲತಕ್ಕ ಉದ್ಯೋಗವಾದ್ದರಿಂದ ಗ್ರಾಮಪಾಠಶಾಲೆಗಳಲ್ಲಿ ಕೃಷಿಯ ಪ್ರತ್ಯಕ್ಷಶಿಕ್ಷೆಯು ಸಹಾ ಅತ್ಯಾವಶ್ಯಕವು. ಎಲ್ಲ ಗ್ರಾಮಗಳಲ್ಲಿಯೂ ಪ್ರಯೋಗಾತ್ಮಕಶಿಕ್ಷೆಯು ಕೊಡುವುದು ಸಾಧ್ಯವಿಲ್ಲ. ಇದಕ್ಕೆ ಅನೇಕ ಸಲಕರಣೆಗಳು ಬೇಕಾಗಿರುವುದು. ಕೆಲವು ಗ್ರಾಮಗಳಲ್ಲಿ ಬೇರೆ ಉದ್ಯೋಗಗಳ ಶಿಕ್ಷಣವನ್ನು ಸಹ ಕೊಡಬಹುದು. ಎಲ್ಲಿ ಯಾವ ಉದ್ಯೋಗವು ಪ್ರಚಲಿತವಾಗಿರುವುದೋ ಅಥವಾ ಆಗಬಹುದೋ ಅದನ್ನು ಪ್ರಚಾರದಲ್ಲಿ ತರುವುದು ಅತ್ಯಾವಶ್ಯಕವು. ಪಟ್ಟಣಗಳಲ್ಲಿಯೂ ಕೂಡ ಒಂದಿಲ್ಲದಿದ್ದರೆ ಮತ್ತೊಂದು ಉದ್ಯೋಗವು ದೊರತೇ ದೊರೆಯುವುದು. ದೊಡ್ಡದೊಡ್ಡ ಕಾರ್ಖಾನೆ ಮತ್ತು ಗಿರಣಿಗಳಿಂದ ಮನೆಯ ಕೈಕಸುಬುಗಳು ನಶಿಸಿಹೋಗುತ್ತಿರುವುದು. ಇವುಗಳ ಅಭಿವೃದ್ಧಿಯು ರಾಷ್ಟ್ರದ ಉನ್ನತಿಗೆ ಮೂಲಕಾರಣವಾಗಿರುವುದು. ಯದ್ಯಪಿ ಈ ಮನೆಯ ಕೈಕಸಬುಗಳು ಆಧುನಿಕವಿಜ್ಞಾನದ ಆಧಾರದಮೇಲೆ ಸ್ಥಾಪಿಸಲ್ಪಟ್ಟರೆ ನಮ್ಮ ಆರ್ಥಿಕಪರಾಧೀನತೆಯು ಬಹುಮಟ್ಟಿಗೆ ಕಡಮೆ ಆಗು

ವುದು. ಜನಗಳ ನಿಕೃಷ್ಟಾವಸ್ಥೆಯು ದೂರವಾಗುವುದು. ಇದಲ್ಲದೆ ಪಟ್ಟಣಗಳಲ್ಲಿ ಹೆಚ್ಚು ಜನಸಮೂಹವು ಒಂದಾಗಿ ಸೇರುವುದರಿಂದ ಉಂಟಾಗುವ ರೋಗಾದಿಗಳ ಅನರ್ಥಗಳು ಸಹಾ ಕಡಮೆಯಾಗುವವು. ನಾವು ಕೇಳಿರುವಂತೆ ಪಾಶ್ಚಾತ್ಯದೇಶಗಳಲ್ಲಿ ಈ ಮನೆಯ ಕೈ ಕಸಬುಗಳು ತುಂಬಾ ಅಭಿವೃದ್ಧಿಹೊಂದುತ್ತಿರುವುದು ಮಾತ್ರವಲ್ಲದೆ ಕೆಲಸಮಾಡತಕ್ಕವರಿಗೂ, ಅವರಿಂದ ದೇಶಕ್ಕೂ ಬಹಳ ಲಾಭವುಂಟಾಗಿ ದೇಶವು ಉನ್ನತಸ್ಥಿತಿಗೆ ಬರುವುದು. ಆದುದರಿಂದ ಗ್ರಾಮಶಿಕ್ಷಣ (Rural Education) ಮತ್ತು ಮನೆಯ ಕೈಕಸಬು(Home Industries)ಇವುಗಳನ್ನುಮುಖ್ಯವಾಗಿ ವೃದ್ಧಿಗೊಳಿಸಬೇಕು. ಈ ಶಿಕ್ಷಣಗಳನ್ನು ಸಾಧ್ಯವಾದಮಟ್ಟಿಗೂ ಉಚಿತವಾಗಿಯೇ ಕೊಡಬೇಕು.

ಸಾಮಾನ್ಯಶಿಕ್ಷೆಯು ಔದ್ಯೋಗಿಕಶಿಕ್ಷೆಯ ಜೊತೆಯಲ್ಲಿಯೇ 7—8 ವರ್ಷಗಳು ಕೊಟ್ಟನಂತರ ಬೇಕಾದರೆ ಬೇರೆ ಮಾಡಬಹುದು. ಪ್ರತಿಯೊಂದು ರಾಷ್ಟ್ರದಲ್ಲಿಯೂ ಸಾಮಾನ್ಯಜನರ ಸಂಖ್ಯೆಯು ಹೆಚ್ಚಾಗಿಯೇ ಇರುವುದರಿಂದ ಅವರಿಗಾಗಿ ಕೆಲವುದಿನಗಳ ಮಟ್ಟಿಗೆ ಮೇಲ್ಕಂಡ ಎರಡುವಿಧವಾದ ಶಿಕ್ಷಣಗಳನ್ನೂ ಒಟ್ಟಿಗೇ ಕೊಡಬಹುದು. ನಾವು ಅವರಿಗೆ ಎಲ್ಲ ವಿಧದಲ್ಲಿಯೂ ಉಚ್ಚಶಿಕ್ಷಣವನ್ನು ಕೊಟ್ಟೆವಾದರೆ ಉನ್ನತಿ ಅವನತಿಯು ಅವರನ್ನೇ ಸೇರಿರುವುದು. ರಾಷ್ಟ್ರದ ಮಹತ್ವವು ರಾಷ್ಟ್ರಜನರನ್ನವಲಂಬಿಸಿರುವುದರಿಂದ ಪ್ರತಿಯೊಬ್ಬನೂ ತಾನು ಶಿಕ್ಷೆಹೊಂದುವಾಗ ತನ್ನರಾಷ್ಟ್ರಾಭಿವೃದ್ಧಿಯನ್ನೇ ಮುಖ್ಯಗುರಿಯಾಗಿಟ್ಟುಕೊಳ್ಳಬೇಕು. ಯಾರ ಬುದ್ಧಿಯು ಯಾವ ವಿದ್ಯೆಯಲ್ಲಿ ಪ್ರವೇಶಿಸುವದೋ ಅದನ್ನಭ್ಯಾಸ ಮಾಡಿದರೆ ಅವರ ಬುದ್ಧಿಯು ವಿಕಾಸಹೊಂದುವುದರಮೂಲಕ ರಾಷ್ಟ್ರಾಭಿವೃದ್ಧಿಯಾಗುವುದು.

ಪ್ರಕೃತಶಿಕ್ಷಣದ ಪ್ರಭಾವದಿಂದ ಶಿಕ್ಷಿತ ಮತ್ತು ಅಶಿಕ್ಷಿತ ಸಮಾಜದಲ್ಲೊಂದು ದೊಡ್ಡ ತರ್ಕವೆದ್ದಿರುವುದು. ಇದನ್ನು ಪ್ರತಿಮನೆಗಳಲ್ಲಿಯೂ ನಾವು ನೋಡಬಹುದು. ನೂತನ ವಿದ್ಯಾಭ್ಯಾಸಕ್ರಮವನ್ನು ಅರಿಯದ ತಂದೆಯು ಹೇಳುವುದನ್ನು ಕೇಳಲಿಷ್ಟವಿಲ್ಲದ ಮಗನಿಗೂ ತಂದೆಗೂ ಮನಸ್ತಾಪ ಉಂಟಾಗುವುದು. ವಿದ್ಯಾಭ್ಯಾಸದ ವಿಷಯದಲ್ಲಿ ಈ ಕಾಲಕ್ಕೆ ತಕ್ಕಂಥ ಸಲಹೆಯನ್ನು ಕೊಡಲು ತಂದೆಯು ಅಸಮರ್ಥನಾಗಿರುವುದರಿಂದ

ಮಕ್ಕಳಿಗೆ ತಂದೆಯಲ್ಲಿ ಅನಾದರಣೆಯುಂಟಾಗುವುದಕ್ಕೆ ಕಾರಣವಾಗುವುದು. ಯಾರಿಗೆ ಎಂತಹ ಶಿಕ್ಷಣಬೇಕೋ ಅಂತಹ ಶಿಕ್ಷಣವು ದೊರಕದೆ, ಬಾಲಕಂಗೆ ಪ್ರಯೋಜನವೂ ಆಗದೆ, ಬಹಳ ಶ್ರಮಪಟ್ಟನಂತರ ಕೊನೆಗೆ ಮಿಡಲ್ ಸ್ಕೂಲಿನವರೆಗೆ ಮಾತ್ರ ದೇಶಭಾಷೆಯಲ್ಲಿ ಪಾಠವು ಕಲಿಸಲ್ಪಡುವುದು. ಆದರೆ ಬೇಕಾದಷ್ಟು ಜ್ಞಾನವು ಇಷ್ಟುಮಾತ್ರದಿಂದಲೇ ದೊರೆಯುವುದೆಂದು ಹೇಳಲಾಗುವದಿಲ್ಲ. ಮಿಡಲ್ ಸ್ಕೂಲಾದನಂತರ ಹೈಸ್ಕೂಲಿನ ತರಗತಿಗಳ ಪಾಠಗಳನ್ನು ಪರಭಾಷೆಯಲ್ಲಿ ಶಿಕ್ಷಣ ಕೊಡುವರು. ಇದರಿಂದಾಗತಕ್ಕ ಪರಿಣಾಮಗಳು ಬಹಳವಿದ್ದಾಗ್ಯೂ ನಮ್ಮ ವಿಷಯಕ್ಕೆ ಸಂಬಂಧಪಡುವಷ್ಟು ಪರಿಣಾಮಗಳನ್ನು ಮಾತ್ರ ನಾವು ಯೋಚಿಸುವ.

ಆಂಗ್ಲಭಾಷೆಯ ಮೂಲಕ ಪ್ರಾಪ್ತವಾದ ಜ್ಞಾನವು ಬಾಲಕನ ಮನೆಯ ಮತ್ತು ಸಮಾಜದವರಿಗೆ ಬರಲಾರದು. ಮಾತೃಭಾಷೆಯ ಜ್ಞಾನವು ಪರಿಪೂರ್ಣವಾಗಿರುವುದಿಲ್ಲ. ಸಮಯವೊದಗಿದಾಗ ಬಾಲಕನು ತನ್ನ ಇಂಗಿತವನ್ನು ಮಾತೃಭಾಷೆಯಮೂಲಕ ಇತರರಿಗೆ ತಿಳಿಸಲೂ ಕೂಡ ಅಶಕ್ತನಾಗುವನು. ಹೀಗಿರುವಲ್ಲಿ ಇತರರಿಗೆ ಉಪದೇಶ ಮಾಡುವುದು ಸಾಧ್ಯವೇ ? ಈ ಕಾರಣದಿಂದ ದೇಶಭಾಷೆಯಮೂಲಕ ಶಿಕ್ಷಣಕೊಡದಿದ್ದಲ್ಲಿ ಹಿಂದೂದೇಶಭಾಷೆಗಳು ಮತ್ತು ಅವುಗಳ ಸಾಹಿತ್ಯದ ಉನ್ನತಿಯು ನಿಂತುಹೋಗುವದಲ್ಲದೆ ಅವುಗಳ ಪ್ರಗತಿಯೂ ಕೂಡ ಮಂದವಾಗುವುದು.

---

## ಸ್ತ್ರೀಯರ ರೂಪ

ಈ ಬಾಹ್ಯಸೌಂದರ್ಯದ ಉತ್ಕಟೇಚ್ಛೆಯಲ್ಲಿ ತಲೆ ಮೇಲಾಗಿ ಬಿದ್ದಿದ್ದ ಯಕ್ಷನ ದೃಷ್ಟಿಯು ಬಹುಮಟ್ಟಿಗೆ ವಿಕೃತವಾಗಿ ಹೋಗಿತ್ತು. ಅವನು ಜಗತ್ಸೃಷ್ಟಿಯಲ್ಲೆಲ್ಲಾ ತನ್ನಂತಹ ಕಾಮಾಂಧ ಸ್ತ್ರೀಪುರುಷ ದ್ವಂದ್ವಗಳನ್ನು ಕಾಣಹತ್ತಿದನು. ಮೇಘವು ನದಿಗಳನ್ನು ಕಾಡುಹೋಗುತ್ತಾ ನೀರನ್ನು ಹೀರುವದು. ಅದುದರಿಂದ ಅವನ ಸಂದೇಶದಲ್ಲಿ [illegible]

ತವಾಗಿರುವ ನದಿಗಳೆಲ್ಲವೂ ಮೇಘದ ನಾಯಕಿಯರು. ಪ್ರಣಯಕುಪಿತ ಳಾಗಿ, ಹುಬ್ಬುಗಳನ್ನು ಗಂಟುಹಾಕಿಕೊಂಡಿರುವ "ವೇತ್ರವತಿ" ಯನ್ನು ಅವನು ಬಲಾತ್ಕಾರದಿಂದ ಚುಂಬಿಸಿ ಅಧರಪಾನವಮಾಡುವನು. "ನಿರ್ವಿಂಧ್ಯೆ" ಎಂಬ ಚತುರನಾಯಕಿಯು ಅವನನ್ನು ಒಲಿಸುವ ಸಲವಾಗಿ ಎಷ್ಟೋ ಪೂಯಗಳನ್ನು ಹೂಡುವಳು. ವಿಪ್ರಲಬ್ಧಳಾದ ಸಿಂಧುವು ತನ್ನ ಉತ್ಕಟ ವಿರಹಾಗ್ನಿಯಿಂದ ಬಳಲಿ ಕೃಶಳಾಗಿ ಅವನ ಸೌಭಾಗ್ಯವನ್ನು ಪ್ರಕಟಿಸು ತ್ತಿರುವಳು; ಇತ್ಯಾದಿ

ಭಗವಾನ್ ಜೀಮೂತನ ಈ ವಿಚಿತ್ರ ಮದನಲೀಲೆಯು "ಗಂಭೀರೆ" ಎಂಬ ನಾಯಕಿಯಲ್ಲಿ ತನ್ನ ಪರಕಾಷ್ಟತೆಯನ್ನುಹೊಂದುವುದು. ಆಕೆಯು ಪ್ರಿಯಸಂಗಮದಲ್ಲಿ ಅಷ್ಟೊಂದು ಕಾತರಳು. ಯಕ್ಷನು ಅವಳ ವಿಷ ಯದಲ್ಲಿ ಮೇಘಕ್ಕೆ ಕೊಡುವ ಆದೇಶವನ್ನುಕೇಳಿ:—

"ತಸ್ಮಾದಸ್ಯಾ ಕುಮುದವಿಶದಾ ನ್ಯರ್ಹಸಿತ್ವಂ ನಧೈರ್ಯಾನ್।
ಮೋಘೀಕರ್ತುಂ ಚಟುಲಶಫರೋ ದ್ವರ್ತನಪ್ರೇಕ್ಷಿತಾನಿ॥
ಬಿರಿದಕನ್ನೈದಿಲ್ಗಳಿಂದ ಸುವಿಶದವಾಗಿ ।
ಮೆರೆಯುವಾಕೆಯಕಣ್ಣಸುಳಿಮಿಾಂಗಳಂ ಮಾಡು ।
ವರೆನೋಟಮಂ ವ್ಯರ್ಥವಾಗಿಸಿ ಕಳೆವಧೈರ್ಯವಂತಳೆಯುದಿಹುದುನೀನು ॥

ಇಂತಹ ಪ್ರಲೋಭವನ್ನು ಸಹಿಸಲು ಸಾಧ್ಯವೆ? ಘೃತಾಹೃತಿ ನ್ಯಾಯದಂತೆ ಜೀಮೂತನು ಒಮ್ಮೆಗೆ ಲಾಲಸಾಗ್ನಿಯಲ್ಲಿ ಜಾರಿಬಿದ್ದನು.

ಯಕ್ಷನ ಈ ವಿಧವಾದ ರೂಪ ತೃಷ್ಣೆ ಹಾಗೂ ವಿಷಯ ವ್ಯಾಮೋ ಹಕ್ಕೆ ಶಾಂತಿಯು ಬರುವದಾದರೋ ಹೇಗೆ? ಅವಧಿಯು ಮುಗಿಯುವ ಮೊದಲು ಪ್ರೇಯಸಿಯನ್ನು ನೋಡಲು ಸಾಧ್ಯವಿಲ್ಲ. ಮೇಘವು ತನ್ನ ಸಂದೇಶವನ್ನು ತೆಗೆದೊಯ್ಯುವ ಮಾತು ಹಾಗಿರಲಿ.

"ಮಾಭೂದೇವಂ ಕ್ಷಣಮಪಿಚತೇ ವಿದ್ಯುತಾವಿಪ್ರಯೋಗ" ಎಂಬ ತನ್ನ ಅಂತ್ಯ ಆಶಿಷದಂತೆ ವಿದ್ಯುದ್ವಿಯೋಗವನ್ನು ಹೊಂದದೆ, ಮಳೆ, ಗಾಳಿ, ಗುಡುಗು, ಮಿಂಚುಗಳದ್ವಾರಾ ತನ್ನ ಘೃಣೆಯನ್ನು ತೋರಹತ್ತಿ ದನು. ಅಂದಿನ ಆ ಪ್ರಳಯೋಪಮ, ಅತಿವೃಷ್ಟಿಯು ಭಯಾನಕ ಕಾಳ

ರಾತ್ರಿಯಲ್ಲಿ ಉನ್ಮತ್ತಪ್ರಾಯನಾದ ಜ್ಞಾನಶೂನ್ಯನಾದ ಆ ಯುವಕನಗತಿಯೇನಾಯಿತೆಂಬುದನ್ನು ಹೇಳಬಲ್ಲವರಾರು ?

ಇದೇ ರೂಪೋನ್ಮಾದದ ಪೂರ್ಣಾಹುತಿಯು:—ಯಾವ ಹೆಂಗಸೂ ತನ್ನ ಪತಿಯನ್ನು ಇಂತಹ ರೂಪೋನ್ಮಾದಕದ ಕರಾಳಾಗ್ನಿಯಲ್ಲಿ ಕಯ್ಯಾರೆ ತಳ್ಳಲಾರಳು. ಅದೆಂತಹ ಸರ್ವಭಕ್ಷಕ ಕಾಳರಾಕ್ಷಸನೆಂಬುದನ್ನು ಅವರು ಚೆನ್ನಾಗಿ ಬಲ್ಲರು. ಅದು ಕೇವಲ ತನ್ನ ಉಪಾಸಕರನ್ನಲ್ಲ, ಸ್ತ್ರೀಯರನ್ನೂ ಹಾಗೂ ಅವರ ನಿತ್ಯಧ್ಯೇಯವೂ ಕಾರ್ಯಕ್ಷೇತ್ರವೂ ಆದ ಗೃಹಜೀವನವನ್ನೂ ಒಮ್ಮೆಗೆ ಭಸ್ಮೀಭೂತವಾಗಿ ಮಾಡುವುದೆಂಬುದನ್ನು ಅವರು ಬಲ್ಲರು. ಸತಿಪತಿಗಳ ಪ್ರೇಮವು ಚಿರಸ್ಥಾಯಿಯಾಗಿಯೂ, ಸುಖಪ್ರದವಾಗಿಯೂ, ಧರ್ಮಸಂಗತವಾಗಿಯೂ ಇರಬೇಕಾದರೆ ಅವರ ಮಾನಸಿಕಸೌಂದರ್ಯದ ಅವಲಂಬನದಿಂದಲೇ ಹುಟ್ಟಿರಬೇಕು. ಕಾಳಿದಾಸನ ಕುಮಾರಸಂಭವ, ಹಾಗೂ ಶಾಕುಂತಲದಲ್ಲಿ ಇದು ಬಹುಚೆನ್ನಾಗಿ ವರ್ಣಿತವಾಗಿದೆ ಪಾರ್ವತಿಯು ತನ್ನ ಅಚ್ಚಳಿಯದ ರೂಪರಾಶಿಯಿಂದ ಮಹಾದೇವನನ್ನು ಒಲಿಸಲು ಹೊರಟಳು. ಸಕಲ ದೇವತೆಗಳೂ ಆಕೆಯ ಪ್ರಯತ್ನದಲ್ಲಿ ಶುಭಕಾಂಕ್ಷಿಗಳು. ವಸಂತನು ತನ್ನ ಚಿತ್ತಾಪಹಾರಕವಾದ ಪರಿಕರಗಳೊಂದಿಗೆ ಸಿದ್ಧನಾಗಿರುವನು. ನವವಿಕಸಿತ ಕುಸುಮಗಳ ಮನೋಜ್ಞವಾದ ಪರಿಮಳದಿಂದ ಮತ್ತನಾಗಿ ಮೆಲ್ಲನೆ ಹಾರಾಡುತ್ತಿರುವ ತಂಗಾಳಿ ; ಮಂಜುಳ ಕುಹೂಕಂಠದಿಂದ ಸ್ಥಾಣುವಿನ ತಪೋವನವನ್ನು ಪುಳುಕಿತವನ್ನಾಗಿ ಮಾಡುತ್ತಿರುವ ಕೋಗಿಲೆ, ಪಾರ್ಶ್ವದಲ್ಲಿ ಬಿಲ್ಲನ್ನು ಹೆದೆಗೇರಿಸಿ ದಾಸಾನುದಾಸನಂತೆ ರತಿಪತಿಯು ನಿಂತಿರುವನು, ಆದರೂ ಆಕೆಯ ರೂಪವು ವ್ಯರ್ಥ. ಕೋಣನ ಮುಂದೆ ಕಿನ್ನರಿಯಂತೆ ಆಕೆಯಕಡೆ ದೃಷ್ಟಿಹಾಕುವ ಮಾತುಹಾಗಿರಲಿ, ತನ್ನ ಮನೋವಿಕಲ್ಪಕ್ಕೆ ಕಾರಣನಾದ ಮನ್ಮಥನನ್ನು ಒಮ್ಮೆಗೆ ಉರಿಗಣ್ಣಿನಿಂದ ದಹಿಸಿಬಿಟ್ಟನು. ರೂಪ ಸನ್ಮಾನ-ಪರ್ಯಾಯದಿಂದ ಕಾಮ ಸನ್ಮಾನಕ್ಕೆ ಬದಲಾಗಿ ಕಾಮದಹನ. ಭಯಚಕಿತನಾದ ಹಿಮವಂತನು ಲಜ್ಜೆಯಿಂದಲೂ ಭಯದಿಂದಲೂ ಭೀತಳಾದ ಪಾರ್ವತಿಯನ್ನು ಎತ್ತಿಕೊಂಡು ತೀವ್ರಗತಿಯಿಂದ ಪಲಾಯನಮಾಡಿದನು. ಬಳಿಕ ಪಾರ್ವತಿಯು ತನ್ನ ರೂಪ ಯೌವನಗಳು ಎಷ್ಟೊಂದು ವ್ಯರ್ಥವೆಂದು ತಿಳಿದು

ರುದ್ರಾಕ್ಷವಲ್ಕಗಳನ್ನು ಧರಿಸಿ ನಿಷ್ಠೆಯಿಂದ ತಪಸ್ಸುಮಾಡಿ ಪರಶಿವನನ್ನು ಒಲಿಸಿದಳು.

ಈ ರೂಪಗುಣಗಳ ಮೇಲಾಟವು ಶಾಕುಂತಲದಲ್ಲಿ ಮತ್ತೊಂದು ವಿಧದಿಂದ ವರ್ಣಿತವಾಗಿರುವುದು. ಅದರ ಕಾರಣವು ನಾಯಕನಾಯಕಿಯರ ಅದೂರದರ್ಶಿತೆ ಮತ್ತು ಕಾಮುಕತನವೆಂದು ಹೇಳಬಹುದು. ದುಷ್ಯಂತನು ವಿಲಾಸಲೋಲುಪ್ತನಾದ ಪ್ರಾಪಂಚಿಕ ಪುರುಷನು. ಐಗುಪ್ತದ ಬಾದಷಹರ "ಹ್ಯಾರಿಮ್" "Haream" ನ ಕೂಗಿನಂತೆ ಅವನ ಅಂತಃಪುರದಲ್ಲಿಯೂ ವಿಪ್ರಲಬ್ಧರಾದ ಹಂಸಪದಿಕೆಯರ ಹಾರ್ದಿಕ ಉದ್ಗಾರಗಳು. ಅವನು ಶಕುಂತಲೆಯಲ್ಲಿ ಮೊದಲು ಕಂಡದು ಅವಳ ಅಚ್ಛಳಯದ ಅಸ್ಪೃಷ್ಟವಾದ ರೂಪ ಮತ್ತು ಯೌವನಗಳೇ ಹೊರತು ಅವಳ ಸ್ವರ್ಗೀಯವಾದ ಸರಳಗುಣವನ್ನಲ್ಲ. ಶಕುಂತಲೆಯೂ ಹಾಗೆಯೇ. ಮುಗ್ಧಳಾದ ಹೆಂಗಸಿನಂತೆ ತನ್ನ ಸೌಂದರ್ಯದ ಹಾಗೂ ಯೌವನದ ಹೊಳಪಿನಿಂದ ರಾಜನ ಮನಸ್ಸನ್ನು ಸೆಳೆಯುವ ಪ್ರಯತ್ನಮಾಡಿದಳು ಆದರೆ ಎಂದಿಗೆ ಅವಳಾಕರ್ಷಕತ್ವವು ದುಷ್ಯಂತನ ವಿಲಾಸಿತೆಗೆ ಬಲಿಯಾಯಿತೋ, ಅಂದೇ ದುಷ್ಯಂತನ ಹೃದಯಾವನ್ನಾಳುತಿದ್ದ ಅವಳ ರೂಪಪ್ರತಿಭೆಯೂ ಮಾಯವಾಯಿತು. ಮುನಿಪಾಲಿತೆಯಾದ ಅನಾಗರಿಕಳಾದ ಆಅಡವಿಯ ಹುಡುಗಿಗಿಂತಲೂ ನಗರದ ನೂತನ ಹಂಸಪದಿಕೆಯರು ಅವನಿಗೆ ಚಿತ್ತಾಕರ್ಷಕರಾದರು. ಅವನು ಶಕುಂತಲೆಯನ್ನು ತನ್ನ ರಾಣಿವಾಸದಲ್ಲಿಟ್ಟುಕೊಳ್ಳುವ ಮಾತಿರಲಿ, ಅವಳ ನೆನಪೇ ಇಲ್ಲವೆಂದು ಹೇಳಬಿಟ್ಟನು. ಅರಣ್ಯದಲ್ಲಿ ಅಲೆದ ಮುಗ್ಧಹೃದಯೆಯಾದ ಸರಳಬಾಲಿಕೆಗೆ ಅರಣ್ಯವೇ ಗತಿಯಾಯಿತು. ದುಷ್ಯಂತನ ಈ ರೂಪೋನ್ಮಾದವು ಶಾಂತವಾಗಬೇಕಾದರೆ ಕೆಲವು ವರ್ಷಗಳೇ ಕಳೆಯಿತು. ಅಷ್ಟರಲ್ಲಿ ಶಕುಂತಳೆಯೂ ತನ್ನ ದುಡುಕುತನದ ಫಲವನ್ನು ಚನ್ನಾಗಿ ಉಂಡಿದ್ದಳು. ಅವಳ ರೂಪಯೌವನದ ಪ್ರತಿಭೆಯೂ ನಾಶವಾಗಿ, ಅವಳ ಸರಳತೆಯು ಸ್ವರ್ಗೀಯ ಪ್ರೇಮವಾಗಿ ತೋರ್ಪಟ್ಟಿತ್ತು. ತನ್ನ ತಂದೆಯಿಲ್ಲದ ಅಭಾಗ್ಯಪುತ್ರನ ಲಾಲನಪಾಲನಗಳಲ್ಲಿ ಅವಳು ಸುಖಿತಳಾಗಿದ್ದಳು. ಮತ್ತೆ ದುಷ್ಯಂತನು ಅವಳನ್ನು ಕಂಡಾಗ ಅವಳು ಸಂಪೂರ್ಣಗೃಹಿಣೀ. ಅವಳ ಸಮಸ್ತ ಪ್ರಪಂಚವೂ ಅವಳಾ ಅವಿಶ್ವಾಸಿಯಾದ ಪತಿ ಮತ್ತು ಅಭಾಗ್ಯ ಪುತ್ರನೆಂ

ಬುದನ್ನು ತಪೋವನದ ಮೃಗಪಕ್ಷಿಗಳೂ ಹೇಳುತ್ತಿದ್ದವು. ದುಷ್ಯಂತನು ಅಷ್ಟೊಂದು ಪ್ರೇಮವನ್ನು, ಅಷ್ಟೊಂದು ವಿಶ್ವಾಸವನ್ನು ಮತ್ತೆ ನಿರಾಕರಿಸುವ ಸ್ಥಿತಿಯಲ್ಲಿರಲಿಲ್ಲ. ಅವನಾರೂಪೋನ್ಮಾದದ ಬೇಗೆಯಿಂದ ತೃಷಿತವಾದ ಹೃದಯವು ಅಂತಹ ಪ್ರೇಮವನ್ನೇ ಅಪೇಕ್ಷಿಸುತ್ತಿತ್ತು. ಅವಳ ಹೆರಳುಹಾಕದ ಕೇಶದಲ್ಲಿ, ಮಲಿನವಾದ ವಸ್ತ್ರದಲ್ಲಿ ಅವಳ ಯಥಾರ್ಥ ಸೌಂದರ್ಯವನ್ನು ಕಂಡನು. ಆ ಸೌಂದರ್ಯವು ಅವನನ್ನಂತಹ ದೀನಾವಸ್ಥೆಗೆ ತಂದಿತೆಂಬುದನ್ನು ವರ್ಣಿಸುವುದು ಪ್ರಕೃತಕಾರ್ಯವಲ್ಲ. ನಾರಿಯರ ದೈಹಿಕಸೌಂದರ್ಯದಮೇಲೆ, ಅವರ ಮಾನಸಿಕ ಸೌಂದರ್ಯವು ಹೊಂದುವ ವಿಜಯವರ್ಣನೆಯನ್ನು ಸಂಸ್ಕೃತಸಾಹಿತ್ಯದಲ್ಲೆಷ್ಟೋಕಡೆ ನೋಡಬಹುದು?

ಒಟ್ಟಿನಲ್ಲಿ, ಸ್ತ್ರೀಯರ ದೈಹಿಕಸೌಂದರ್ಯವು ಮಾನವಜಾತಿಯ ಅಧಃಪತನಕ್ಕೆ ಎಷ್ಟರಮಟ್ಟಿಗೆ ಕಾರಣವಾಗುವ ಸಂಭವವಿರುವದೋ, ಅವರ ಮಾನಸಿಕರೂಪವೂ ಅದೇಪರಿಮಾಣದಲ್ಲಿ ಉದ್ಧಾರಮಾಡುವ ಶಕ್ತಿಯನ್ನುಳ್ಳದ್ದಾಗಿರುವುದು. ಈ ಎರಡುವಸ್ತುಗಳ ಸಂಮಿಳನವು ಯೋಗ್ಯರೀತಿಯಿಂದ ಯಾರೆಡೆಯಲ್ಲಾಗುವದೋ ಆಕೆಯೇ ಧನ್ಯೆ. ಅಂತಹ ರಮಣೀರತ್ನೆಯರಿಂದಲೇ ಈ ಮರ್ತ್ಯಲೋಕವು ವಾಸಯೋಗ್ಯವಾಗಿರುವುದು. ಇಂತಹವರನ್ನು ಉದ್ದೇಶಿಸಿಯೇ ಕವಿಯು ಹೇಳಿರುವನು:—

“ಅಸಾರೇಭೂತೇಸಂಸಾರೇಸಾರಃಸಾರಂಗಲೋಚನಾ” ಎಂದು.

ಅಸ್ತು! ನನ್ನ ಸಂಕಲ್ಪವು ನೆರವೇರಿತು. ಆ ರೂಪನಿಂದೆಯ ಪಾತದಿಂದುಂಟಾದ ಪಾಪಕ್ಕೂ ಪ್ರಾಯಶ್ಚಿತ್ತವಾಯಿತು.

---

# ಅಂಚೆಯ ಮನೆಯಿಂದ.

---

(ಹಿಂದಿನಸಂಚಿಕೆಯಿಂದ ಮುಂದರಿಸಿದ್ದು.)

## ಪತ್ರಾಂಕ—೨.

ನನ್ನ ಪ್ರಿಯ ತಂಗಿಯರೇ,—

ನನ್ನ ಹಿಂದಿನಪತ್ರದಲ್ಲಿ ಬಾಲ್ಯದೆಸೆಯ ವಿಷಯವಾಗಿಯೂ, ನಿಮ್ಮ ಪ್ರಾಮುಖ್ಯ ಜೀವಿತದವಿಷಯವಾಗಿಯೂ ತಿಳಿಸಿದ್ದೆನಷ್ಟೆ. ಈ ಪತ್ರದಲ್ಲಿ ನಿಮ್ಮ ಜೀವನಧ್ಯೇಯದ ವಿಷಯವಾಗಿ ಕೆಲವು ಮಾತುಗಳನ್ನು ಹೇಳುವೆನು.

ನಾನೂ ನೀವೂ ನಾನಾವಿಧವಾದ ಅಸ್ಪಷ್ಟವಾದನೇಕ ವಿಚಾರಗಳನ್ನು ಹೊಂದಿರಬಹುದು. ಆದರೆ ನಮ್ಮಲ್ಲೆಷ್ಟು ಜನರು ಜೀವನದ ಮುಖ್ಯಧ್ಯೇಯಗಳನ್ನು ಹೊಂದಿರುವೆವು? ಅನೇಕರೀವಿಷಯಕ್ಕೆ ಹೌದೆಂಬ ಉತ್ತರವನ್ನಿತ್ತರೂ ಅಸ್ಪಷ್ಟ ಮತ್ತು ಪರಸ್ಪರ ವಿರೋಧವಾದ ವಿಚಾರಗಳ ಮಧ್ಯೆ ಮೇಲ್ಕಂಡ ವಿಷಯಗಳನ್ನು ಸಂಪೂರ್ಣವಾಗಿ ಮರೆತಿರಬಹುದು.

ನೀವು ಸ್ತ್ರೀಯರೆಂಬುದನ್ನೂ, ಎಂದೆಂದೂ ಸ್ತ್ರೀಯರೇ ಆಗಿರುವಿರೆಂಬುದನ್ನೂ ಮುಂದಿನ ಬಾಲಕಿಯರ ಅಭಿವೃದ್ಧಿಯ ಸೂತ್ರವು ನಿಮ್ಮ ಕೈಯಲ್ಲಿರುವುದೆಂಬುದನ್ನು ಮತ್ತೊಂದಾವರ್ತಿ ನಿಮ್ಮ ಜ್ಞಾಪಕಕ್ಕೆ ತರುವೆನು. ನೀವು ಹೀಗೆಯೇ ಇರಬೇಕೆಂದು ಸಂಕಲ್ಪಗೊಳಿಸಿದುದಾವುದೋ? ಅದೇ ನಿಮ್ಮ "ಧ್ಯೇಯಗಳು". ಅಲ್ಲದೆ ನಿಮ್ಮಲ್ಲಿ ಪ್ರತಿಯೊಬ್ಬರೂ ನಿಮ್ಮಷ್ಟಕ್ಕೆ ನೀವೇ ಪರೀಕ್ಷೆಮಾಡಿಕೊಂಡು ನಿಮ್ಮಲ್ಲಿ ಯಾವುದಾದರೂ ಉತ್ತಮಧ್ಯೇಯವಿರುವುದೇ ಎಂದು ನೋಡಿಕೊಳ್ಳಿ. ಇಲ್ಲದಿದ್ದರೆ ಯಾವವಿಧವಾದ ಜೀವಿತವನ್ನು ನಡೆಸಲು ನಿಮಗಿಷ್ಟವಿದೆಯೋ ಅದಕ್ಕೆ ತಕ್ಕಂತೆ ನಿಮ್ಮ ಧ್ಯೇಯವನ್ನು ರಚಿಸಿಕೊಳ್ಳಿರಿ.

ನೀವು ಪ್ರತಿಯೊಬ್ಬರೂ ಶಾರೀರಕ ಮತ್ತು ಮಾನಸಿಕ ಬಲವುಳ್ಳವರಾಗಿರಬೇಕೆಂದು ಇಚ್ಛಿಸುವಿರೆಂದು ನಾನು ಧೈರ್ಯವಾಗಿ ಹೇಳಬಲ್ಲೆನು. " ಶರೀರ ಮತ್ತು ಮಾನಸಿಕಪುಷ್ಟಿಯು " ಎಲ್ಲ ಧ್ಯೇಯುಗಳನ್ನೂ ಮೀರಿಸಿದ ಮುಖ್ಯ ಪುರುಷಾರ್ಥವೆನ್ನುವುದು ನೀವರಿತ ವಿಷಯವು. ಆದ್ದರಿಂದ ಇಚ್ಛೆ ಮತ್ತು ಅಗತ್ಯ ಇವುಗಳ ಸಹಾಯದಿಂದ ಈ ಮಾನಸಿಕ ಮತ್ತು ಶಾರೀರಕ ಶುದ್ಧಿಯನ್ನು ಹೊಂದಲೆತ್ನಿಸಬೇಕು.

ಪ್ರಥಮದಲ್ಲಿ ನಿಮ್ಮ ಮನಸ್ಸು ಶುದ್ಧಿಯಾಗಿರುವಂತೆ ಪ್ರಯತ್ನಿಸಬೇಕು, ನಿಮ್ಮ ಮನೋಭಾವಗಳೇ ಇತರ ಎಲ್ಲ ಕಾರ್ಯಗಳನ್ನೂ ಆಳುವುದರಿಂದ ನಿಮ್ಮ ಮನೋಭಾವಗಳು ಪರಿಶುದ್ಧವಾಗಿರಬೇಕಾದದು ಅತ್ಯಾವಶ್ಯಕವು. ಮಲಿನಮನಸ್ಸಿನಿಂದ ಉತ್ತಮ ಜೀವಿತವನ್ನು ಪಡೆಯುವುದು ಅಸಾಧ್ಯವು. ಬರೀ ಅಂಗಸಾಧನೆಮಾತ್ರದಿಂದ ಮನೋಪಾರಿಶುದ್ಧವುಂಟಾಗದು. ನಿಮ್ಮ ಇಂದ್ರಿಯಗಳನ್ನು ಮೊಟ್ಟಮೊದಲು ಜೈಸುವ ಪ್ರಯತ್ನ ಮಾಡಬೇಕು. ಆದರೆ ಅಂತಹ ನಿಗ್ರಹವು ಮನೋಪಾರಿಶುದ್ಧವಿಲ್ಲದೆ ಕ್ರೂರವಾಗಿ ಪರಿಣಮಿಸುವುದು. ಆದ್ದರಿಂದ ನಿಮ್ಮ ಮನಸ್ಸನ್ನು ಪರಿಶುದ್ಧವಾಗಿಟ್ಟುಕೊಂಡರೆ ನಿಮ್ಮ ಶರೀರವೂ ಶುದ್ಧಿಯಾಗುವುದು. ನಿಮ್ಮ ಮನಸ್ಸು ದುರಾಲೋಚನೆಗಳನ್ನು ಪೂರ್ಣಮಾಡಿಕೊಳ್ಳುವಂತಾಗಲಿ, ಕೆಟ್ಟನಡವಳಿಕೆಗಳಿಗೆ ಪ್ರವೇಶಿಸುವುದಕ್ಕಾಗಲಿ ಎಡೆಗೊಡಬೇಡಿ. ಅದೇಸಮಯದಲ್ಲಿ ನೀವು ಕಲ್ಮಷ ಮನಸ್ಸನ್ನು ಹೊಂದಿರುವಿರೆಂಬ ಭಾವವು ಕೂಡ ನಿಮ್ಮ ಮನಸ್ಸಿನಲ್ಲಿ ಪ್ರವೇಶಿಸಕೂಡದು. "ಸೋಮಾರಿಯಾದ ಮನಸ್ಸು ಸೈತಾನನ ವಾಸಗೃಹ" ಎನ್ನುವ ಗಾದೆಯ ಅರ್ಥವನ್ನು ಮಾತ್ರ ಮರೆಯಬೇಡಿ. ಇಂತಹ ಕೆಟ್ಟಪ್ರವೃತ್ತಿಯಿಂದ ಮನಸ್ಸನ್ನು ದೂರಮಾಡಬೇಕಾದರೆ ನೀವು ಸದಾ ಉತ್ತಮವಾದ ಮತ್ತು ಘನವಾದ ವಿಷಯಗಳ ಚಿಂತನೆ, ಭಗವಂತನ ನಾಮಸ್ಮರಣೆ, ಇವುಗಳ ವಿಷಯವಾಗಿ ಚಿಂತಿಸುತ್ತಿರಬೇಕು ಜ್ಞಾನವನ್ನು ಹುಡುಕಿ, ಸಾಧುಸಂತರ ಮಹಾಪುರುಷರ ಜೀವನಚರಿತ್ರೆಗಳನ್ನೋದಿದರೆ ಜ್ಞಾನವು ಸುಲಭವಾಗಿ ದೊರೆಯುವುದು ಮಾತ್ರವಲ್ಲದೆ ನಿಮ್ಮ ಮನವು ಸದಾ ಪರಿಶುದ್ಧವಾಗಿರುವಂತೆ ಮಾಡುವುದು. ಯಾವುದಾದರೊಂದು ಉತ್ತಮಮೂರ್ತಿಯನ್ನು

ನಿಮ್ಮಾರಾಧ್ಯದೇವತೆಯಾಗಿ ಮಾಡಿಕೊಳ್ಳಿ. ಅಂತಹ ಆರಾಧ್ಯದೇವತೆಯ ಸೇವೆಯಿಂದ ನಿಮ್ಮ ಉದ್ದೇಶವು ಸಫಲವಾಗುವುದು ಮಾತ್ರವಲ್ಲದೆ ಅನೇಕ ದುರಾಲೋಚನೆಗಳು ದೂರವಾಗುವುವು.

ಮನಸ್ಸು ಮುಖ್ಯವಾಗಿ ವಿಷಯಸುಖದ ವಿಷಯದಲ್ಲಿ ದಾರಿತಪ್ಪುವುದು. ಆಗಾಗ್ಯೆ ನೀವು ಇಂತಹ ಲಜ್ಜಾಹೀನವಾದ ಮಾಯೆಯಿಂದ ಭ್ರಮಿಸಿ ಅಂತಹ ಅಲ್ಪ ಸುಖಕ್ಕಾಶಿಸಬಹುದು. ಇದರಿಂದ ನಿಮ್ಮ ಭವಿಷ್ಯ ಜೀವಿತವೇ ಹಾಳಾಗಲವಕಾಶವುಂಟಾಗುವುದು. ಮೇಲ್ಕಂಡ ವಿಷಯಕ್ಕೆ ಸಂಬಂಧಪಟ್ಟ ಕಾದಂಬರಿಗಳು ಮತ್ತು ನಾಟಕಗಳನ್ನೋದುವುದರಿಂದ ಮನಸ್ಸು ಕೆಡಲು ಕಾರಣವಾಗುವುದು. ಇಂತಹ ಗ್ರಂಥಗಳನ್ನೋದುವುದರಿಂದ ತತ್ಕಾಲ ಸಂತೋಷವುಂಟಾಗುವುದಾದರೂ ಅದರ ಕುಪರಿಣಾಮವು ಅಂತ್ಯದಲ್ಲಿ ಗೋಚರವಾಗುವುದು. ಆದ್ದರಿಂದ ನೀವು ಇಂತಹ ಗ್ರಂಥಗಳನ್ನೋದುವುದನ್ನು ತ್ಯಜಿಸಿ ನಿಮ್ಮ ಮನಸ್ಸು ಶುದ್ಧವಾಗಿಯೂ ಮತ್ತು ಹತೋಟಿಯಲ್ಲಿರುವಂತೆಯೂ ಯತ್ನಿಸಿರಿ. ನೀವು ಈಗ ಭೋಗ ವಿಷಯವನ್ನು ಆರೋಗ್ಯ ಸಂಬಂಧದಿಂದ ಪರಿಶೀಲಿಸಿ ನೋಡಿ ಪ್ರಾಣಿ ಸಸ್ಯಮಾನವವರ್ಗದ ಜನಾಂಗದಸ್ಥಿರತೆಗೆ ಮೇಲ್ಕಂಡ ವಿಷಯದಲ್ಲಿನ ಜಾಗರೂಕತೆಯೇ ಮುಖ್ಯವೆಂಬುದನ್ನು ತಿಳಿದು ಅದರಂತೆ ನಡೆಯಲೆತ್ನಿಸಿರಿ. ಈಗ ಭೋಗವಿಷಯವು ಭಗವದತ್ತವಾದ ಒಂದು ವರವೆಂದು ತಿಳಿದು ನಡೆಯುವುದು ಉಚಿತವಲ್ಲದೆ ಕೇವಲ ಪಶುವೃತ್ತಿಗೆ ಸಂಬಂಧಿಸಿದ್ದಲ್ಲವೆನ್ನುವುದನ್ನು ಚನ್ನಾಗಿ ನೆನಪಿನಲ್ಲಿಡಿರಿ. ಈ ವಿಷಯವನ್ನು ಮತ್ತೊಂದು ಸಲ ವಿವರವಾಗಿ ನಿಮಗೆ ತಿಳಿಸುವೆನು. ನಿಮಗೀಗ ನಾನು ಒತ್ತಿ ಒತ್ತಿ ಹೇಳುವುದೇನಂದರೆ, ಈ ವಿಷಯ ಸುಖದವಿಚಾರದಲ್ಲಿ ಮಾತ್ರ ನಿಮ್ಮ ದೇಹ ಮತ್ತು ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳುವಿರೆಂದು ನಂಬುತ್ತೇನೆ.

ನಾನೀಲೇಖನವನ್ನು ಪೂರ್ತಿಮಾಡುವ ಮೊದಲು ಮತ್ತೊಂದಾವರ್ತಿ ನಿಮಗೆ ಜ್ಞಾಪಕಗೊಳಿಸುವುದೇನಂದರೆ, ಮುಖ್ಯಧ್ಯೇಯವಾದ "ಶಾರೀರಕ ಮತ್ತು ಮಾನಸಿಕ ವೃದ್ಧಿಯನ್ನು ಮರೆಯಬೇಡಿ. ಸದಾ ಉತ್ತಮಚಿಂತೆ, ಉತ್ತಮಕಾರ್ಯ, ಇವುಗಳಲ್ಲೇ ಮಗ್ನರಾಗಿ ಕುಮಾರ್ಗಕ್ಕೆ

ಗೊಡದೆ ನಿಮ್ಮ ಉತ್ತಮಜೀವಿತವನ್ನು ಸಾರ್ಥಕವಮಾಡಿಕೊಳ್ಳಿ. ಸದಾ ಈ ಕೆಳಗೆ ಕಂಡುಬರುವ ವಾಕ್ಯವನ್ನು ಜ್ಞಾಪಕದಲ್ಲಿಡಿ –" 'A perfect woman nobly planned".

ಪ್ರೇಮಾಯತನ
ತುಂಗಭದ್ರ

ನಿಮ್ಮ ಪ್ರೇಮಪಾತ್ರಳಾದ
ಸುಮತಿ.

---

# ಸುಮನಸಂಚಯ

---

## ಸ್ತ್ರೀಯರಿಗೆ ಎಂತಹ ಶಿಕ್ಷಣವು ಬೇಕು ?

"ಭಾರತಕೇಸರಿ" ಲಾಲಾ ಲಜಪತ್‌ರಾಯರು ಲಾಹೋರಿನ "ವೈದಿಕ ಕನ್ಯಾಪಾಠಶಾಲೆ" ಯ ವಾರ್ಷಿಕೋತ್ಸವ ಸಮಾರಂಭವಲ್ಲಿ ಸಭಾಧ್ಯಕ್ಷರಾಗಿದ್ದಾಗ ಮಾಡಿದ ಭಾಷಣದ ಸಾರಾಂಶವನ್ನು ಹಿಂದೀದೈನಿಕ "ಆಜ್" ಪತ್ರಿಕೆಯಿಂದ ಸಂಗ್ರಹಿಸಿ ನಮ್ಮ ವಾಚಕರ ಅವಗಾಹನೆಗಾಗಿ ಕೊಡಲ್ಪಟ್ಟಿದೆ.

ಈ ಸಮಯದಲ್ಲಿ ದೇಶಾಭಿವೃದ್ಧಿಗೆ ಸಂಬಂಧಪಟ್ಟ ಅನೇಕ ಕಾರ್ಯಗಳಿಗೆ ಸ್ತ್ರೀಯರ ಸಹಾಯವು ನಮಗತ್ಯಾವಶ್ಯಕವಾಗಿ ಬೇಕಾಗಿರುವುದು. ಅನ್ಯರು ನಮ್ಮನ್ನು ಭೀರುಸ್ವಭಾವದವರೆಂದು ತಿಳಿದುಕೊಳ್ಳದಂಥಾ ಶಕ್ತಿಯೇನಮಗೀಗ ಅವಶ್ಯಕವಾಗಿ ಬೇಕಾಗಿದೆ. ಈ ಅವಶ್ಯಕತೆಯು ಸ್ತ್ರೀಯರ ಸಂಪೂರ್ಣ ಸಹಾಯದಹೊರ್ತು ಪೂರ್ಣ ಹೊಂದಲಾರದು. ಸ್ತ್ರೀಯರಿಗೆ ಉತ್ತಮ ಭೋಜನ, ಭೂಷಣ, ವಸನಗಳು ಸರ್ವಾಧಿಕಾರವೂ ಇದೆ; ಅಲ್ಲದೆ ಅವರು ಸ್ವತಃ ಸುಖವಾಗಿದ್ದುಕೊಂಡು ಉತ್ತಮ ಸಂತತಿಯುಳ್ಳವರಾಗಿರುವುದು ಅವರ ಧರ್ಮವು. ಇದರಿಂದ ಅವರು ಉತ್ಸಾಹ, ಪ್ರೋತ್ಸಾಹದೊಡನೆ ಸ್ವದೇಶ, ಸ್ವಜನ ಸೇವೆಯನ್ನು ಮಾಡಬಲ್ಲರು. ಇಂದಿನ ಸ್ತ್ರೀಯರಲ್ಲಿ ಬಟ್ಟೆಬರೆಗೆ ಬೇಕಾದಷ್ಟು ವೆಚ್ಚಮಾಡಿ, ಆಹಾರ ಆರೋಗ್ಯದಕಡೆಗೆ ಹೆಚ್ಚು ಗಮನ ಕೊಡುವದಿಲ್ಲ. ಹೀಗೆ ಮಾಡು

ವುದು ಸರ್ವಥಾ ಯೋಗ್ಯವಲ್ಲ. ಅವರು ಒಳ್ಳೆಯ ಆಭರಣಗಳನ್ನು ಅಗತ್ಯವಾಗಿ ತೊಟ್ಟುಕೊಳ್ಳಲಿ; ಆದರೆ ಉತ್ತಮ ಭೋಜನ ಮತ್ತು ಆರೋಗ್ಯವು ಅದಕ್ಕಿಂತ ಹೆಚ್ಚಿನದೆಂದು ತಿಳಿಯಲಿ ಸ್ತ್ರೀಯರಿಗೆ ಯಾವ ಕೋಮಲತೆಯೂ ಸೌಂದರ್ಯವೂ ಬೇಕೋ ಅದು ನಮ್ಮ ದೇಶದ ಸ್ತ್ರೀಯರಿಗೂ ಇರಬೇಕೆಂಬುದೇ ನನ್ನ ಭಾವನೆ. ಆದರೆ ಅನ್ಯರು ಅವರಕಡೆಗೆ ಕಣ್ಣೆತ್ತಿನೋಡದಂತೆ ಮಾಡುವಷ್ಟು ಶಕ್ತಿಯೂ, ಸೌಶೀರ್ಯವೂ ಅವಶ್ಯವಾಗಿರಲಿ. "ಮೈ ಅಪನೇ ಭಾರತ್ ಕೀ ಜೋಗಿನ್ ಬನೋಂಗಿ" (ಅರ್ಥ-ನಾನು ನಿಜಭಾರತದಯೋಗಿನಿಯಾಗುವೆನು) ಎಂದು ನೀವೀಗ ಹಾಡಿದಿರಿ. ಆದರೆ ನನ್ನ ಅಭಿಪ್ರಾಯದಲ್ಲಿ ಈ ಸಮಯದಲ್ಲಿ ದೇಶಕ್ಕೆ ಝಾನ್ಸಿ, ಲಕ್ಷ್ಮೀಬಾಯಿ ಮತ್ತು ಅಹಲ್ಯಾಬಾಯಿಯವರಂಥಾ ದೃಢಹೃದಯ ಮತ್ತು ಸಬಲಶರೀರ ಸ್ವಾಸ್ಥ್ಯವುಳ್ಳ ಶೂರ ವೀರಮಾತೆಯರೇ ಬೇಕಾಗಿದ್ದಾರೆ.

ಸ್ತ್ರೀಯರಿಗೆ ಇಂಗ್ಲೀಷು ಕಲಿಸಬಾರದೆಂದು ಹೇಳುವವರ ಗುಂಪಿಗೆ ನಾನು ಸೇರಿದವನಲ್ಲ. ವರ್ತಮಾನ ಸಮಯದ ಒಂದು ಅವಶ್ಯಕತೆಯು ಮಾತ್ರವಲ್ಲ, ಇಂಗ್ಲೀಷು ಕಲಿಯುವುದರಿಂದ ಏನೂ ಕೆಟ್ಟದ್ದಿಲ್ಲ; ಕಲಿಯಬೇಕು. ಆದರೆ ಅದು ಅನಿವಾರ್ಯರೂಪದಿಂದಲ್ಲ. ಇಂಗ್ಲೀಷು ಕಲಿಯದೆಯೇ ನಾವು ನಮ್ಮ ಮನೆಯ ಕೆಲಸಕಾರ್ಯಗಳನ್ನು ನಡೆಸಬಲ್ಲೆವು. ನಾವು ಇಂಗ್ಲೀಷನ್ನು ಕಲಿಯೋಣ ಅಥವಾ ಕಲಿಯದಿರೋಣ, ಅದರ ದೋಷದಿಂದ ಮಾತ್ರ ದೂರವಿರೋಣ. ನಮ್ಮ ಜೀವನವನ್ನು ಆಡಂಬರರಹಿತ ಧಾರ್ಮಿಕಸೂತ್ರದಲ್ಲಿ ನಡೆಸಬೇಕು. ಸ್ತ್ರೀಯರಿಗೆ ಅವರ ಜೀವನದಲ್ಲಿ ಯಾವವಿಧವಾದ ಕೆಲಸದ ಅವಶ್ಯಕತೆಯು ಬರುತ್ತದೋ ತದನುಸಾರವಾದ ಶಿಕ್ಷಣವು ದೊರೆಯಬೇಕು. ಆದರೆ ಜೀವನಸಂಗ್ರಾಮ (struggle for existence) ದಲ್ಲಿ ಈ ಮಾತಿನ ಲಕ್ಷ್ಯವು ಪೂರ್ತಿಯಾಗಿರುವುದಿಲ್ಲ. ಅನೇಕವೇಳೆ ಸ್ತ್ರೀಯರಿಗೆ ಪುರುಷರ ಪರಾಕ್ರಮವನ್ನೂ, ಪುರುಷರಿಗೆ ಸ್ತ್ರೀಯರ ಸೌಶೀಲ್ಯವನ್ನೂ ವಹಿಸಬೇಕಾಗುತ್ತದಾದರೂ ಸ್ತ್ರೀಯರಿಗೆ ತಕ್ಕಂತಹ ಯೋಗ್ಯಶಿಕ್ಷಣವು ಅನಿವಾರ್ಯವು. ಹೆಣ್ಣುಮಕ್ಕಳಿಗೆ ಸ್ವಲ್ಪಮಟ್ಟಿಗೆ ಹಿಂದೀ (ಅಥವಾ ರಾಷ್ಟ್ರಭಾಷೆ) ಭಾಷೆಯನ್ನು ಕಲಿಸಿದರೆ ಸಾಲದು. ಯಾವ ಹುಡುಗಿಯರು ರಾಮಾಯಣ

ಮತ್ತು ಮಹಾಭಾರತವನ್ನು ಓದಲಾರರೋ ಅವರ ಶಿಕ್ಷಣವು ಅಪೂರ್ಣವೂ ಹಾನಿಕರವೂ ಆಗಿದೆ. ರಾಮಾಯಣ, ಮಹಾಭಾರತಗಳಲ್ಲಿ ನಮ್ಮ ಎಲ್ಲ ತಾಯಿ ತಂಗಿಯರೂ ತಿಳಿದುಕೊಳ್ಳಬೇಕಾದ ಅತ್ಯಮೂಲ್ಯ ವಿಚಾರಗಳಿವೆ. ಬಾಲಕಿಯರಿಗೆ ಕನಿಷ್ಠಪಕ್ಷ ರಾಮಾಯಣ-ಮಹಾಭಾರತವನ್ನೋದಿ, ಆನಂದಾತ್ಮಲಾಭವನ್ನು ಪಡೆಯುವಷ್ಟು ಮಾತೃಭಾಷೆಯ ಅವಶ್ಯಕತೆ ಇದೆ.

---

# ಮಾನವ ಸುಬೋಧಾಮೃತ

(ಹಿಂದಿನ ಸಂಚಿಕೆಯಿಂದ ಮುಂದರಿಸಿದ್ದು)

## ೬. ಸುತನಕರ್ತವ್ಯ.

ಧರೆಯ ಜೀವಗಳನ್ನು ನಿರುಕಿಸಿ |
ತರಳ ನಿನ್ನರಿಯುವೆಯನುಳಿಯು |
ತ್ವರುಪವಾಸನ್ಮಾರ್ಗವೃತ್ತಿಯನಾತು ನಡೆಯುತಿರು ||
ಚರಿಸಿವಿಪಿನದಿ ಗಳಿತವಪುವಿನೆ |
ಜರೆಯೊಳಿಹ ಬಳಪಿತನ ಬಿಡಬಲೆ |
ಹೊರುತೆಗುಟು ಕಂಠದುತೆ ಸುತಜನ ಪರಿಪಾಲಿಶ್ರುದು ||೧||

ನಿರುತ ಪಿತನಿಗೆ ತೋರ್ಪಭಕ್ತಿಯು |
ಸರಸಿಜಾತದ ತೊಟದಿಂ ದ್ಯೈ |
ತರುವ ತಮ್ಮೆಲ್ಲರಿಗೆ ಪಾಸಟಿಯಾಗಿ ರಾಜಿಪುದು ||
ತಿರೆಯೊಳಪ್ಪಿಗೆ ಕಾಣಿಸುತ್ತಿಹ |
ವರಗಳೀಯುವ ದೇವನೆನ್ನುತ |
ಲರಿದು ಸೇವಿಸೆ ನೃಪನೊಲವಿಗೆ ಸಾಕ್ಷಿಯಾಗಿತುದು ||೨||

ಅವರಿನಿಂ ಕೃತಕೃತ್ಯವಾಗುವ |
ವಿಧದೆ ನೀನೀ ದೇಹವೆತ್ತಿಹ |
ಸದಯನಾಗಿಹ ಪಿತನಿಗುಂ ಪೋಷಿಸಿದ ಮಾತೃವಿಗು ||

ಹದನವರಿಯುತೆ ಸುಕನುನಡೆಯುತಿ |
ಹುದದು ವೃದಿ ಗೆಬರಲುಸಾಧಕ |
ಮುತಿರನೆ ಹೃದಯದಾರ್ಢ್ಯದೊಳವರ ಸೇವೆಗೈಯುವುದು ||೩||

ನಿನ್ನವೃದ್ಧಿಗೆ ಪೇಳ್ದ ವಚನವ |
ನನ್ನಿಯಿಂ ದವಧರಿಸು ಜಾತನೆ |
ನಿನ್ನ ಮೇಲ್ಮೆಗಳಸಲೆರೆದಿಹಾ ನೀತಿಯಾಲಿಸ್ಪುದು ||
ನಿನ್ನಸೌಖ್ಯಕೆ ಹಾನಿಯೆಂದವಿಸ |
ದನ್ನೆಗಂ ತಾಬನ್ನಮಾಂತಿಹು |
ದನ್ನು ಯೋಚಿಸುತವನ ಹಿಂತನಕಾಗಿ ಮನ್ನಿಸ್ಪುದು ||೪||

ಮೊದಲು ಶೈಶವದಲ್ಲಿ ಎಜ್ಞಾ |
ನದೊಳು ಮಲಗಿರ್ದ ಸಮಯದೊಳುಂ |
ಮುದದೆಮುಂಡೋರದಲೆ ವರ್ತಿಸುತಿರ್ದ ಯೌವ್ವನದೆ ||
ಹದನಪರಿಯುತೆ ಕಾದಿದಾಕಾ |
ಲದೊಳಗಾಂತಳಲನ್ನು ಯೋಚಿಸಿ |
ಮುದದೆ ಸಾಹ್ಯವನೀಡಿ ಜರೆಯೊಳು ಪಿತನಪಾಲಿಸ್ಪುದು ||೫||

ಕರಣಮುಡಗುತೆ ಕರ್ಣವಳಿಯುತೆ |
ಚರಣಬಲನಂದುತೆ ಸುಖತತಿಯು |
ಮರೆಯುತೆ ಸ್ವರಬಲವ ದುಡುಗುತೆ ನಂದಿಪೋಗಿರುತೆ ||
ಜರೆಯಚಿತ್ರದ ಮೈವೆಯೊಳಗೀ |
ಹರಿಪರಿಯ ವೇಷದೊಳಗಿರ್ಪುದ |
ನರಿದುಕಾವುದು ಪಿತನಭಕ್ತಿಯು ನಿನ್ನೊಳಿರುವುದಕೆ ||೬||

ಕಂದೆಯುಂ ನೀನಿಂತು ಪೊರೆದೊಡೆ |
ಮುಂದೆ ನಿನಗೈತರ್ಪ ವೇಷ |
ನಂದನರಪಾಲನೆಯು ನೀನೆಳಸುವೊಡೆ ಪಾಲಿಪ್ಪುದು ||
ಸಂದೆಗಮನಾನದಲೆ ನೀ ನೊಲ |
ವಿಂದೆಪಿಂದೆಗೆಯದಲೆ ನೀ ನಿಜ |
ನಂದನನೆಂದು ತೋರ್ಪುದಾನಂದಕರ ಮಂದಿರದೆ ||೭||

# ಸೂರ್ಯಾಸ್ತಮಾನ

## (ಒಂದು ಚಿಕ್ಕದೃಶ್ಯ)

ಮೇವಾಡ ಸೂರ್ಯನಾದ ರಾಣಾ ಪ್ರತಾಪನ ಚರಿತ್ರವನ್ನು ನಮ್ಮ ಸರಸ್ವತಿಯ ವಾಚಕರಲ್ಲನೇಕರು ಅರಿತಿರುವರು. ಇವನ ಆಳ್ವಿಕೆಯ ಕೊನೆಯ ದಿನಗಳಲ್ಲಿ ಕೆಲವುಜನ ರಾಜದ್ರೋಹಿಗಳು ಮಹಮದೀಯರ ಪಕ್ಷವನ್ನು ಸೇರಿ ಇವನ ರಾಜ್ಯನಾಶಕ್ಕನುವಾದರು. ರಾಣಾಪ್ರತಾಪನು ಯವನ ಸಂಬಂಧವು ಎಷ್ಟು ಹೇಯವಾದುದೆಂದು ತಿಳಿದಿದ್ದನೋ ಅಷ್ಟೇ ಪರಮಪಾವನವೆಂದು ತಿಳಿದಿದ್ದ ರಾಜಪುತ್ರರೂ ಇದ್ದರು. ಅವರಲ್ಲಿ ಈ ಕಥೆಗೆ ಸಂಬಂಧಪಟ್ಟ ರಾಜಾಮಾನಸಿಂಹನೂ ಒಬ್ಬನು. ತನ್ನ ತಂಗಿಯಾದ ಜೋಧ್‌ಬಾಯಿಯನ್ನು ಅಕ್ಬರನಿಗೆ ವಿವಾಹ ಮಾಡಿಕೊಟ್ಟು ಅದರಿಂದ ಚಕ್ರವರ್ತಿಯ ದಯೆಯನ್ನು ಸಂಪಾದಿಸಿದ್ದನು. ಒಂದುದಿನ ಸೂರ್ಯಾಸ್ತಮಾನ ಸಮಯದಲ್ಲಿ ಈತನೊಬ್ಬನೇ ರಾಜಾಸ್ಥಾನದ ಅರಾವಳೀಬೆಟ್ಟದ ಉಪತ್ಯಕೆಯಲ್ಲಿ ತನ್ನ ಶೌರ್ಯಪ್ರತಾಪಗಳನ್ನು ತನ್ನಷ್ಟಕ್ಕೆತಾನೇ ಹೊಗಳಿಕೊಳ್ಳುತ್ತ ಕಥಪಥ ತಿರುಗುತ್ತಿದ್ದನು.

ಮಾನಸಿಂಹ:—ಈಗ ನಿನ್ನ ನಕ್ಷತ್ರವು ಅತ್ಯುಚ್ಚಸ್ಥಿತಿಯಲ್ಲಿರುವುದು. ನೀನು ಶಕ್ತಿವಂತನೆಂಬುದನ್ನೀಗ ಎಲ್ಲರೂ ಒಪ್ಪಿಕೊಂಡಿರುವರು. ನಿನ್ನ ಬಾಹುಬಲಕೀರ್ತಿಯು ಕಾಬೂಲಿನಿಂದ ಬಂಗಾಳದವರಿಗೆ ವ್ಯಾಪಿಸಿರುವುದು. ಪ್ರಸಿದ್ಧ ಮೊಗಲ್‌ಸಾಮ್ರಾಜ್ಯದ ಬಲವಾದ ಸ್ತಂಭವು ನೀನು. ನಿನ್ನಭ್ಯುದಯವನ್ನು ಕಂಡು ಮೊಗಲ ಸಾಮ್ರಾಜನೂ ಭೀತನಾಗುವನು. ಪ್ರಸಿದ್ಧವಾದ ನಿನ್ನ ಹೆಸರು ಎಲ್ಲರ ಬಾಯಿಯಲ್ಲಿಯೂ ಉಚ್ಚರಿಸಲ್ಪಡುತ್ತಿರುವುದು. ಈ ವೈಭವಗಳಿಗಿಂತ ನಿನಗೆ ಬೇಕಾದುದಿನ್ನೇನು? ನೀನು ಮತ್ತೆ ನನ್ನನ್ನಪೇಕ್ಷಿಸುವಿ? ಆ! ಕ್ರೂರವಾದ ಮಾತು! "ಅಪೇಕ್ಷೆ". ಅವೆಷ್ಟೋ ಇವೆ. ನನ್ನಾಶೆಗೆ ಇನ್ನೂ ಅಂತ್ಯವೇ ಇಲ್ಲ. ಇನ್ನೂ ನನ್ನ ಹಿಂದೆ ಜನರು ಹಿಯ್ಯಾಳಿಸುತ್ತಿರುವರು. ಮೊಗಲನಿಗೆ ನನ್ನ ತಂಗಿ

ಯನ್ನು ಮುದುಕನಮಾಡಿಕೊಟ್ಟನೆಂದು ಜನರು ಕೈತಟ್ಟಿ ನಗುತ್ತಿರುವರು. ಪ್ರತಾಪ್, ಪ್ರತಾಪ್! ಇಂದಿಲ್ಲ ನಾಳೆಯಾದರೂ ನಿನ್ನ ಕೀರ್ತಿಲತೆಯು ಜನರ ಕಾಲುಗಳಿಗೆ ತುಳಿಯಲ್ಪಡುವುದು. ನೀನು ನನ್ನ ಹೆಸರನ್ನು ಕೆಡಿಸಿದೆ. ನನಗೆ ನೀನು ರಾಹು. ನನ್ನ ತಲೆತಗ್ಗುವಂತೆಮಾಡಲು ನೀನೇ ಮುಖ್ಯಕಾರಣವು. ಆದರೆ ನೀನಿದರ ಫಲವನ್ನು ಕ್ಷಿಪ್ರದಲ್ಲಿಯೇ ಅನುಭವಿಸುವೆ. (ತಲೆಯೆತ್ತಿನೋಡಿ) ಈ ರಮಣಿಯಾರು?

"ಅವಳ ಹೆಜ್ಜೆಯು ಸೊಂಪಾಗಿ ಬೆಳೆದು ಮಂಜಿನಿಂದತೊಯ್ದ ಗರಿಕೆಹುಲ್ಲಿನಮೇಲೆ ಬಿರುಗಾಳಿಯಿಂದ ಹೊಡೆಯಲ್ಪಟ್ಟು ಬೀಳುವ ಪುಷ್ಪರಾಶಿಯಂತೆ ಮೃದುವಾಗಿರುವುದು. ಅವಳ ಮೃದುನಡೆಯು ನೈನಿಕರ ಬರಟು ಕಾಲ್ನಡಿಗೆಯಿಂದ ಕೆದರಿ ಕಲ್ಲೋಲವಾಗಿರುವೀ. ಅರಣ್ಯದಲ್ಲಿ ನೋಡಲೆಷ್ಟು ರಮ್ಯವಾಗಿರುವುದು. ಈಕೆಯು ನನ್ನ ಬಳಿಗೆ ಬರುವಂತೆ ತೋರುತ್ತದೆ. ಇದೇನಾಶ್ಚರ್ಯ! ಇಲ್ಲ, ಇಲ್ಲ, ವನದೇವತೆಯೇನೋ! ಮತ್ತಾರಿವಳು?

ಅವಳು ದುಃಖದೇವತೆಯಿಂದಾಲಂಗಿಸಲ್ಪಟ್ಟವಳಂತೆ ಕಂಡುಬಂದರೂ ಆ ದುಃಖವೇ ಅವಳ ಸೌಂದರ್ಯವನ್ನಿನ್ನಷ್ಟು ಹೆಚ್ಚಿಸಿತ್ತೆಂದು ಹೇಳಬಹುದು" ಮಾನಸಿಂಹನು ಹೀಗೆಂದು ತನ್ನಲ್ಲಿತಾನೇ ಬಹಳ ಯೋಚಿಸಿದವನಾಗಿ ಕೊನೆಗೆ ಆ ರಮಣಿಯಕೂಡೆ ಸಂಭಾಷಣೆ ಮಾಡತೊಡಗಿದನು.

ಮಾನಸಿಂಹ:—ರಮಣೀ! ಸಮೀಪಕ್ಕೆ ಬಾ. ನಾನೊಬ್ಬ ರಾಜಪುತನು. ಸ್ತ್ರೀಯರನ್ನುಹೇಗೆ ಗೌರವಿಸಬೇಕೆಂಬುದನ್ನು ರಾಜಪುತ್ರನು ಬಲ್ಲನು. ಆದುದರಿಂದ ನೀನು ಹೆದರಬೇಡ.

ರಮಣಿ:—ಅದು ಶುದ್ಧ ಸುಳ್ಳು.

ಮಾನಸಿಂಹ:—ಏನು! ಅಧಿಕಪ್ರಸಂಗಿಯಾದ ರಮಣಿಯೇ! ಮಾನಸಿಂಹನು ಸುಳ್ಳುಗಾರನೆಂದು ಧೈರ್ಯವಾಗಿ ಹೇಳುವಿಯಾ?

ರ:—ಅಷ್ಟುಮಾತ್ರವೇಕೆ! ಇನ್ನೂ ಹೆಚ್ಚಾಗಿಯೇ ಹೇಳುವೆನು.

ಮಾನಸಿಂಹ:—ನಿನ್ನ ಧೀರತ್ವವು ನನ್ನನ್ನಾಶ್ಚರ್ಯಗೊಳಿಸುವುದು. ಮಾನಸಿಂಹನ ಖಡ್ಗವು ಸ್ತ್ರೀದೇಹವನ್ನು ಸ್ಪರ್ಶಿಸದಾದ್ದರಿಂದ ನೀನು ಹೇಗೂ ಸೌಖ್ಯವಾಗಿರುವೆ.

ರಮಣಿ:—ಸೋದರನ ರಕ್ತವು ಅದಕ್ಕಿಂತಲೂ ನಿಕೃಷ್ಟವೇ? ನಿನ್ನ ಖಡ್ಗವು ಅದರಿಂದ ಕಲುಷಿತವಾಗಿಲ್ಲವೆ?

ಮಾನಸಿಂಹ:—ಸುಂದರಿ, ನೀನು ಒಗಟಿನಂತೆ ಮಾತನಾಡುವೆ. ಅದರರ್ಥವನ್ನು ತಿಳಿಯುವ ಸಾಮರ್ಥ್ಯವು ನನಗಿಲ್ಲ.

ರಮಣಿ:—(ವೀರಾವೇಶದಿಂದ) ಇಲ್ಲವೇ ಇಲ್ಲ! ನೀನು ಸೋದರರಾದ ರಾಜಪುತ್ರರಮೇಲೆ ಕತ್ತಿಯನ್ನೆತ್ತಿಯೇ ಇಲ್ಲವೇ? ಮೇವಾಡ ಸೂರ್ಯನೂ ಭಾರತೀಯರ ಪರಮಪವಿತ್ರ ಪೂಜ್ಯವಸ್ತುವೂ ಆದ ಪ್ರತಾಪನಿಗೆ ವಿರೋಧವಾಗಿ ಮೊಗಲರೊಡನೆ ಸೇರಿಲ್ಲವೇ? ಇದಕ್ಕಿಂತಲೂ ಮತ್ತೇನುಬೇಕು?

ಮಾನಸಿಂಹ:— ಆ ಹೆಸರನ್ನು ನನ್ನಮುಂದೆ ಎತ್ತಿದೆಯಾದರೆ ನೀನು ಸ್ತ್ರೀಯೆನ್ನುವುದನ್ನೂ ಕೂಡಾ ಮರತೇನು; ಎಚ್ಚರಿಕೆ!

ರಮಣಿ:—(ನಗುತ್ತಾ) ಆಶ್ಚರ್ಯವೇನು? ಮಾತೃ ದೇಶ ದ್ರೋಹಿಗೆ ಸ್ತ್ರೀಯ ಪ್ರಾಣವೇನೂ ಪವಿತ್ರವಲ್ಲ.

ಮಾನಸಿಂಹ:—ಅಷ್ಟಕ್ಕೇನಿಲ್ಲಿಸು. ನನ್ನ ಕ್ರೋಧಾಗ್ನಿಯನ್ನು ನಿನ್ನ ವಾಕ್ಯಗಳಿಂದ ಹೆಚ್ಚಿಸಬೇಡ. (ಒರೆಯಿಂದ ಖಡ್ಗವನ್ನು ಸೆಳೆಯುವನು.)

ರಮಣಿ:—ನಿನ್ನ ಖಡ್ಗವು ನನಗೆ ಭೀತಿಯನ್ನುಂಟುಮಾಡಲಾರದು. ಥಳಥಳಿಸುತ್ತಿರುವ ನಿನ್ನ ಖಡ್ಗದಕಡೆ ನೋಡು. ಅದರಲ್ಲಿ ನಿನ್ನ ಮಾತೃ ರಕ್ತದ ಕಲೆಯು ಹಾಗೆಯೇ ಇದೆ.

ಮಾನಸಿಂಹ:—ಹುಚ್ಚಿ! ಹುಚ್ಚಿ! ಏನಂದೆ?

ರಮಣಿ:—ಏನಂದೆನೇ? ಮೊಗಲರಿಗಾಗಿ ನೀನು ತೋರಿಸುವ ಪ್ರತಿಯೊಂದು ಶೌರ್ಯಕಾರ್ಯವೂ, ಪ್ರತಿಯೊಂದು ಉಪಕಾರವೂ ನಿನ್ನ ಜನ್ಮಭೂಮಿಗೆ ತೋರಿಸುವ ಕ್ರೌರ್ಯವಲ್ಲವೇನು? ಈ ಕೃತಘ್ನತೆಯನ್ನು ತಾಯಿಯು ಎಂದಾದರೂ ಮರೆಯುವಳೇ?

ಮಾನಸಿಂಹ:—ರಮಣೀ! ಬಾಯಿಮುಚ್ಚು. ನಿನ್ನ ಸೌಂದರ್ಯವು ನಿನ್ನ ಪ್ರಾಣವನ್ನುಳಿಸಲಾರದೆಂದು ತಿಳಿ. ನಿನ್ನ ರೂಪಕ್ಕೆ ಮರುಳಾಗಿ ನಿನ್ನನ್ನು ದಂಡಿಸದೆ ಬಿಡಲು ನಾನು ಯುವಕನಲ್ಲ.

ರಮಣಿ:—(ಆಶ್ಚರ್ಯದಿಂದ) ಹಾ! ನೀನು ಯವನರನ್ನು ದ್ವೇಷಿಸುವೆಯಾ? ಹಾಗಿದ್ದಲ್ಲಿ ನಿನ್ನ ತಂಗಿಯನ್ನು ಯವನನಿಗದೇಕೆ ವಿವಾಹ ಮಾಡಿಕೊಟ್ಟೆ? ಮೊಗಲರಿಗದೇಕೆ ಸಹಾಯಮಾಡಿದೆ? ಹೀಗೆ ಮಾಡಲು ಪ್ರತಾಪನು ನಿನಗೇನನ್ಯಾಯಮಾಡಿದನು? ನಿನ್ನಲ್ಲಿ ನೆಲಸಿರುವ ಕಾಪಟ್ಯವೂ, ದ್ರೋಹವೂ ಅವನಲ್ಲಿಲ್ಲದಿರುವುದರಿಂದಲೇನೋ?

ಮಾನಸಿಂಹ:—(ಖಡ್ಗವನ್ನೆತ್ತಿ ರಮಣಿಯಕಡೆಗೆ ತಿರುಗಿ) ಪಿಶಾಚಿ! ಸಾಯಲು ಸಿದ್ಧಳಾಗು?

ರಮಣಿ:—(ಧೈರ್ಯದಿಂದ) ರಾಜಪುತ್ರರಮಣಿಯು ಎಂದಿಗೂ ಸಾವಿಗೆ ಹೆದರಳು.

ಮಾನಸಿಂಹ:—(ಆಶ್ಚರ್ಯದಿಂದ) ಏನು! ರಾಜಪುತ್ರಿಯೇ!

ರಮಣಿ:—ಅಯ್ಯೋ! ಒಂದುಕಾಲದಲ್ಲಿ ನಾನಾಗಿದ್ದೆನು.

ಮಾನಸಿಂಹ:—ಆಗಿದ್ದೆ; ಅದೇಕೆ? ಈಗಿಲ್ಲವೇನು? ಮುಂದೆ ಬಾ; ನಿನ್ನ ಅಧಿಕಪ್ರಸಂಗವನ್ನು ಕ್ಷಮಿಸಿದೆ. ನಿನ್ನ ರಹಸ್ಯಗರ್ಭಿತವಾದ ಮುಖಬಿಂಬವನ್ನೊಂದುಸಲ ನೋಡುವೆನು, ಬೆಳಕಿಗೆ ಬಾ. ನಿನ್ನ ಧ್ವನಿಯು ನನಗೆ ಪರಿಚಯವಾದದ್ದಾಗಿ ತೋರುವುದು. ಅಕ್ಬರನು ಕೂಡ ಕಂಡಂಜುವಂತಹ ಮಾನಸಿಂಹನನ್ನು ಮರುಳುಗೊಳಿಸುವಂತಹ ಸುಂದರ ರಮಣಿಯಾದ ನೀನಾರು?

ರಮಣಿ:—(ಭೀತಿಯಿಂದ) ಹಾ! ಹಾ! "ಅಕ್ಬರನು ಕೂಡ ದ್ವೇಷಿಸುವ" ಎಂದು ಹೇಳು.

ಮಾನಸಿಂಹ:—ಅವನಿಗಷ್ಟು ಧೈರ್ಯವೆಲ್ಲಿಯದು? ಅವನ ಸಿಂಹಾಸನದ ಆಧಾರವು ನಾನೆಂಬುದನ್ನು ಅವನು ಚನ್ನಾಗಿ ಬಲ್ಲನು. ಹೀಗಿರುವಾಗ ಅವನ್ಯಾರಿಗೆ ಮರ್ಯಾದೆ ಮಾಡಬೇಕು?

ರಮಣಿ:—ಜಯಹೊಂದಿದ ರಾಜನು ತಾನು ಜೈಸಿದವನನ್ನೆಂದಿಗೂ ಗೌರವಿಸನು. ತನ್ನ ಅಂಬಿಗೆ ತಪ್ಪಿದವನನ್ನು ಗೌರವವಾಗಿ ಕಾಣುವನೆಂದು ನೀನೆಂದುಕೊಳ್ಳುವುದು ಶುದ್ಧ ತಪ್ಪು. ಅವನು ನಿನ್ನ ಬೆನ್ನುತಟ್ಟಿದರೂ ಅವನ ವೀರನಾದ ಶತ್ರುವನ್ನೇ ಅಂತರ್ಯದಲ್ಲಿ ಗೌರವಿಸುವನು.

ಮಾನಸಿಂಹ:—(ರೋಷದಿಂದ) ನಿಲ್ಲು, ನಿಲ್ಲು. ಮನುಷ್ಯನ ಸಹ ನಕಲ್ಕು ಎಲ್ಲಿಯುಂಟು. ನೀನು ನಿಜವಾಗಿಯೂ ಪ್ರತಾಪನ ಗೂಢ ಚಾರಳು. ನ್ಯಾಯಶಾಸ್ತ್ರಾನುಸಾರವಾಗಿ ನೀನು ಶಿಕ್ಷೆಗರ್ಹಳು. (ಹೀಗೆಂದು ಹೇಳಿ ಖಡ್ಗದಿಂದ ಹೊಡೆಯಲುದ್ಯುಕ್ತನಾದಾಗ, ರಮಣಿಯು ತನ್ನ ಮೇಲು ಹೊದಿಕೆಯನ್ನು ತೆಗೆಯುವಳು.)

ಮಾನಸಿಂಹನು (ಆಶ್ಚರ್ಯದಿಂದ!) ಏನು? ಜೋಧಪುರಿ! ನನ್ನ ತಂಗಿ! ಇದೇನು ಮಾಯೆಯೋ? ಕನಸೋ?

ರಮಣಿ:—ಹೌದು; ನಾನು ನಿನ್ನ ತಂಗಿಯಾದ ಜೋಧಪುರಿ. (ಇನ್ನು ರಮಣಿಯನ್ನು ನಾವೂ ಜೋಧಪುರಿಯೆಂದೇ ಕರೆಯೋಣ.)

ಮಾನಸಿಂಹ:—ತಂಗೀ! ಡಿಲ್ಲಿಯ ರಾಣಿ! ಭವಿಷ್ಯ ಭಾರತಚಕ್ರ ವರ್ತಿಯ ಮಾತೆ! ನನ್ನನ್ನು ಕ್ಷಮಿಸು. ಅದಿರಲಿ, ದುಃಖಿತಳಂತೆ ನೀನು ತೋರುವ ಕಾರಣವೇನು?

ಜೋಧ್‌ಬಾಯಿ:—ನಿನಗಾವಿಷಯವು ಗೊತ್ತಿಲ್ಲವೇನು?

ಮಾನಸಿಂಹ:—ತಂಗಿ! ನಿನ್ನ ಮಾತು ನನಗೆ ಭ್ರಮೆಯುಂಟುಮಾ ಡುವುದು. ಯಾವಳ ಆಜ್ಞಾಚಕ್ರದಿಂದೀ ಭಾರತವರ್ಷವು ಚಲಿಸುತ್ತಿರು ವುದೋ, ಯಾವಳು ಐಶ್ವರ್ಯ, ಸುಖ, ಭೋಗಾದಿಗಳ ಸಮುದ್ರದಲ್ಲಿ ಮುಳುಗೇಳುತ್ತಿರುವಳೋ ಅಂಥವಳ ಬಾಯಿಂದೀಮಾತು ಹೊರಟಿತೆಂ ದರೆ ಅದು ನನಗೆಷ್ಟು ಭ್ರಮೆಯುಂಟುಮಾಡಬಹುದು?

ಜೋಧ್‌ಬಾಯಿ:—ನೀನು ನನ್ನನ್ನು ಅಗ್ನಿಗಾಹುತಿ ಇತ್ತೆ.

ಮಾನಸಿಂಹ:—ಅಸ್ಥಿರಳಾಗಬೇಡ; ತಂಗಿ! ಶಾಂತಿಹೊಂದು. ನಿನ್ನ ಮನಸ್ಸು ದುಃಖಗೊಂಡಿರುವದು, ಸಮಾಧಾನ ಹೊಂದು. ನಿನ್ನ ಮಾತು ಗಳು ನನಗರ್ಥವಾಗುವುದಿಲ್ಲ, ತಿಳಿಯುವಂತೆ ಹೇಳು.

ಜೋಧ್‌ಬಾಯಿ:—ಅರ್ಥವೇ! ಹೇಳುವೆನು ಕೇಳು; ನನ್ನನ್ನು ಯವನನಿಗೇಕೆ ವಿವಾಹಮಾಡಿಕೊಟ್ಟೆ?

ಮಾನಸಿಂಹ:—ತಂಗಿ, ನಿನ್ನ ಸುಖಕ್ಕಾಗಿ.

ಜೋದ್‌ಬಾಯಿ:—(ಸಿಟ್ಟಿನಿಂದ) ನನ್ನ ಸುಖಕ್ಕಾಗಿಯೇ? ಈ ವಿವಾಹದಿಂದ ನಿನ್ನ ಸ್ಥಿತಿಯನ್ನು ಉನ್ನತಿಗೊಳಿಸಲು ನೀನು ಪ್ರಯತ್ನಿಸಲಿಲ್ಲವೇ?

ಮಾನಸಿಂಹ:—ಸವಾಲಿಗೆ ತಕ್ಕ ಜವಾಬು. ತಂಗೀ, ನಾನಿದಕ್ಕೆ ಹರ್ಣನೇ?

ಜೋದ್‌ಬಾಯಿ:—ನಿನ್ನ ಸ್ವಪ್ರಯೋಜನವನ್ನು ಮಾತ್ರ ನೋಡಿದೆ. ನಿನ್ನ ಬಡತಂಗಿಯ ಸುಖದ ಕಡೆ ಲಕ್ಷ್ಯವಿಟ್ಟೆಯಾ? ನಿನ್ನ ಸ್ವಾರ್ಥತೆಗೆ ಧಿಕ್ಕಾರವಿರಲಿ!

ಮಾನಸಿಂಹ:—(ವ್ಯಂಗದಿಂದ) ಪಾಪ! ಡಿಲ್ಲಿಯ ರಾಣಿ ಬಡವಳು, ಅಲ್ಲವೇ?

ಜೋದ್‌ಬಾಯಿ:—ಯಾಕೆ? ಎಲ್ಲಕ್ಕಿಂತಲೂ ಐಶ್ವರ್ಯವೇ ಪ್ರಧಾನವೇ? ಆ ಶಿಕ್ಷಣವನ್ನು ಬಾಲ್ಯದಲ್ಲೇ ನನಗೇಕೆ ಕೊಡಲಿಲ್ಲ? ಐಶ್ವರ್ಯವನ್ನು ಧಿಕ್ಕರಿಸುವ ಹಿಂದೂಕುಲದಲ್ಲಿ ನಾನೇಕೆ ಜನ್ಮವೆತ್ತಿದೆ?

ಮಾನಸಿಂಹ:—ಎಲ್ಲಮತಗಳ ಸಾರಾಂಶವೂ ಒಂದೇ. ತಂಗಿ, ಚಕ್ರವರ್ತಿಯೇ ಸ್ವತಃ ಈ ಪದ್ಧತಿಯನ್ನು ಧಾರಾಳವಾಗಿ ಅನುಷ್ಠಿಸುತ್ತಿರುವನು.

ಜೋದ್‌ಬಾಯಿ:—ನಾನು ವಿದ್ಯಾರ್ಥಿಯಲ್ಲ. ಈ ವಿಷಯವಾಗಿ ನಿನ್ನೊಡನೆ ಚರ್ಚಿಸಲಾರೆ. ಆದರೆ ನನ್ನ ಮೊದಲಿನಧ್ಯೇಯಗಳು ಪ್ರಕೃತ ಸ್ಥಿತಿಯನ್ನೆಳ್ಳಷ್ಟೂ ಅನುಸರಿಸಲಾರದ್ದಾಗಿದೆ. ನೀನು ಈಗ ಅತ್ಯಂತ ಸುಖವೆಂದು ಯಾವುದಕ್ಕೆ ಹೇಳುವೆಯೋ ಆ ಸುಖವೇ ನನ್ನನ್ನು ಗೆದ್ದಲುಹುಳದಂತೆ ದಿವಾರಾತ್ರಿಯೂ ತಿನ್ನುತ್ತಿರುವುದು. ನೀನು ನನ್ನನ್ನು ನಿನ್ನ ರಾಜ್ಯದಲ್ಲಿರುವ ಒಬ್ಬ ಬಡರಾಜಪುತ್ರನಿಗೇಕೆ ಕೊಟ್ಟು ಮದುವೆಮಾಡದೆಹೋದೆ? ರಾಜಪುತ್ರಕುಲದಲ್ಲಿ ಹುಟ್ಟಿ, ಮಾತೃಭೂಮಿಯ ಚರಣಸೇವೆಯಲ್ಲಿ ಮಗ್ನಳಾದ ವೈಕುಂಠವಾಸಿಯ ಪೂಜೆಗೆ ಮುಕ್ತಳಾದ ರಮಣಿಯನ್ನು ಕೇವಲ ಸ್ವರ್ಣಮೊಹರೆಗಳಾಸೆಗಾಗಿ ಯವನನಿಗೆ ಮಾರಿದುದಾವನ್ಯಾಯ? ಆ ಸ್ಪರ್ಶವು ನನ್ನನ್ನೆಷ್ಟು ದಹಿಸುತ್ತಿದೆ ಎಂಬುದನ್ನು ನೀನೇನುಬಲ್ಲೆ?

ಮಾನಸಿಂಹ:—ತಂಗೀ, ನನಗೀಗ ಜ್ಞಾನೋದಯವಾಯಿತು. ಈ ವಿಷಯವನ್ನು ನೀನದೇಕೆ ಮೊದಲೇ ಹೇಳದೇಹೋದೆ?

ಜೋದ್‌ಬಾಯಿ—ಈಗಲಾದರೂ ನಿನ್ನ ಪಾಪಗಳಿಗಾಗಿ ಪಶ್ಚಾತ್ತಾಪಪಟ್ಟು ಕ್ಷಮಿಸುವಂತೆ ಭಗವಂತನನ್ನು ಪ್ರಾರ್ಥಿಸು.

ಮಾನಸಿಂಹ:—ತಂಗೀ, ನನ್ನನ್ನು ಕ್ಷಮಿಸು (ಮೊಣಕಾಲೂರಿ ಕುಳಿತು ಪ್ರಾರ್ಥಿಸುವನು).

ಜೋದ್‌ಬಾಯಿ:—ನಾನೇನೋ ಕ್ಷಮಿಸುವೆನು ; ಆದರೆ ನಿನ್ನ ರಾಜ್ಯವು ನಿನ್ನಪರಾಧವನ್ನು ಕ್ಷಮಿಸುವುದೇ ?

ಮಾನಸಿಂಹ :—( ಕಣ್ಣೀರುತುಂಬಿ ) ಹಾಗಾದರೆ ನಾನೇನು ಮಾಡಲಿ ? ನಾನು ಮರಳಿನಲ್ಲಿ ನನ್ನ ಹೆಸರನ್ನು ಚಿತ್ರಿಸಿರುವೆನೇ ?

ಜೋದ್‌ಬಾಯಿ:—ಹೌದು ; ಪ್ರತಾಪನ ಪವಿತ್ರನಾಮವು ಪ್ರತಿಯೊಂದು ಬಂಡೆಯಮೇಲೆ

ಮಾನಸಿಂಹ :—(ತಲೆಯಮೇಲೆ ಕಯ್ಯನಿಟ್ಟುಕೊಂಡು ಖಿನ್ನತೆಯಿಂದ) ಹಾ ! ದುರ್ವಿಧಿಯೇ ! ನನ ಮಹತ್ಕಾರ್ಯಗಳೆಲ್ಲವೂ ಈರೀತಿ ಪರಿಣಮಿಸಿದವೇ ?

ಜೋದ್‌ಬಾಯಿ;—ಆ ಪ್ರಶ್ನೆಗೆ ನಾನದೇಕೆ ಉತ್ತರ ಕೊಡಲಿ ? ಚರಿತ್ರೆಯು ವಿಸ್ತಾರವಾಗಿ ಹೇಳುವುದು.

ಮಾನಸಿಂಹನು ಮೌನನಾಗಿ ಅಲ್ಲಿಂದಿಲ್ಲಿಗೆ ಶಥಪಥ ತಿರುಗಲಾರಂಭಿಸಿದನು. ಜೋದ್‌ಪುರಿಯು ಸದ್ದಿಲ್ಲದೆ ಪಶ್ಚಿಮಭಾಗದಾಕಾಶವನ್ನು ನೋಡುತ್ತಾ, “ ಹಾ ! ಎಂತಹ ರಮ್ಯವಾದಛಾಯೆಯು ಪೃಥ್ವಿಗಿಳಿಯುತ್ತಿದೆ. ಆ ಛಾಯೆಯು ರಾಜಪುತಾಣದ ಪ್ರತಿಯೊಂದು ಗುಡ್ಡದಲ್ಲಿಯೂ ಎಷ್ಟು ಸುಂದರವಾದ ಬಣ್ಣದಿಂದ ಚಿತ್ರಿಸುತ್ತಿದೆ. ಅಂತ್ಯರಾತ್ರಿಯು ಇದರ ಮೇಲೆ ಮುಳುಗುವಂತಿದೆ ಮೇವಾಡ ಸೂರ್ಯನಾದ ಪ್ರತಾಪನ ಕೀರ್ತಿಯೊಂದೇ ಬರುವ ರಾತ್ರಿಯಲ್ಲಿ ಬೆಳಗುವನು. ಪ್ರಾಚೀನಪ್ರಾಶಸ್ತ್ಯವನ್ನು ಮರಳಿ ಪಡೆಯುವುದೇ ? ” ಎಂದು ತಗ್ಗಿದ ಸ್ವರದಿಂದ ಹೇಳಿ

ದ್ದನ್ನು ಕೇಳಿದ ಪ್ರತಾಪಸಿಂಹನು. "ಅಯ್ಯೋ ! ತಂಗೀ, ಅದು ಪ್ರಕೃತಿ ವಸ್ತುಗಳಲ್ಲಿಲ್ಲ. ಜಾಜ್ವಲ್ಯಮಾನವಾದ ಪ್ರಾತಃಕಾಲವು ಹಗಲಾಗಿಯೂ ಸಾಯಂಕಾಲವಾಗಿಯೂ ಆದುದು ಪುನಃ ಸೂರ್ಯಾಸ್ತಮಾನವಾಗುವವರೆಗೂ ಹಿಂತಿರುಗುವುದಿಲ್ಲ. ಅದು ಅಂಧಕಾರಾವೃತವಾದ ಹೃದಯದಲ್ಲಿ ಸಂದಿ ಹೋಗುವ ಪ್ರತಿ ಛಾಯೆಯನ್ನು ಅಂತ್ಯನಿರಾಶೆಯಲ್ಲಿ ತಲ್ಲೀನಮಾಡು ವುದು. ಆಹಾ ! ವೃಥಾಲಾಪ, ವೃಥಾ ಆಶೆ ಆದರೂ ಎಷ್ಟು ಮಧುರ ಎಷ್ಟು ರಮಣೀಯ !"

(ರಾಜಪುತ್ರರಮಣಿಯರು ತಮ್ಮ ಸ್ಥೈರ್ಯದಿಂದ ತಮ್ಮ ತಮ್ಮ ಸಹೋದರರು, ತಂದೆ ಮತ್ತು ಪುತ್ರರನ್ನು ಅವರ ತಪ್ಪುನೆಪ್ಪುಗಳನ್ನು ತಿದ್ದಿ, ಸರಿಯಾದ ಮಾರ್ಗಕ್ಕೆ ತರುತ್ತಿದ್ದರೆನ್ನುವುದು ಮೇಲ್ಕಂಡ ಚಿಕ್ಕ ದೃಶ್ಯದಿಂದ ತಿಳಿಯುವುದು. ನಾವೂ ಅವರಂತೆ ಸ್ತ್ರೀಯರೇ ಆದರೂ ಭಯದೇವತೆಯು ನಮ್ಮನ್ನಾವರಿಸಿ ನಮ್ಮಲ್ಲಿರುವ ಅಲ್ಪಸ್ವಲ್ಪ ಸ್ಥೈರ್ಯ ವನ್ನೂ ನಾಶಗೊಳಿಸಿ ಜಡದಬೊಂಬೆಗಳಾಗಿರುವೆವು. ಪುರುಷರಾದರೂ ನಮ್ಮಾ ಭಯದೇವತೆಗೆ ಸಹಾಯಕರಾಗಿ ನಮ್ಮನ್ನು ಮತ್ತಷ್ಟು ಮೂಲೆ ಗೊತ್ತಿರುವರು. ನಾವು ಪೂರ್ವ ರಮಣಿಯರ ಧೈರ್ಯ ಸ್ಥೈರ್ಯವನ್ನು ಪಡೆದಿದ್ದರೆ ಮೇವಾಡದ ಸೂರ್ಯನಾದ ರಾಣಾಪ್ರತಾಪನಂತಹ ವೀರರು ಈ ಇಪ್ಪತ್ತನೆಯ ಶತಮಾನದಲ್ಲಿಯೂ ಬೇಕಾದಷ್ಟು ಜನರು ಹುಟ್ಟು ತ್ತಿದ್ದರು. ಪುರುಷರಾದರೂ ಸ್ತ್ರೀಯರನ್ನು "ನಸ್ತ್ರೀಸ್ವಾತಂತ್ರ್ಯಮರ್ಹತಿ" ಎಂಬ ಮನುವಿನಾಧಾರವನ್ನು ಮುಂದಿಟ್ಟುಕೊಂಡು ಕ್ಷಿ[illegible]ಸೆಗೆ ತರದೆ ಅವರ ಜ್ಞಾನಶಕ್ತಿಯನ್ನು ಅಭಿವೃದ್ಧಿಗೊಳಿಸಿ ರಾಜಪುತ್ರಮಹಿಳೆಯರಂತಹ ಧೈರ್ಯ ಸ್ಥೈರ್ಯವನ್ನು ನೆಲೆಗೊಳಿಸಿದರೆ ಅವರಿಂದ ರಾಣಾಪ್ರತಾಪ, ಶಿವಾಜಿ ಮೊದಲಾದವರಂತಹ ವೀರರೂ, ಅಹಲ್ಯಾಬಾಯಿಝಾನ್ಸಿ ಲಕ್ಷ್ಮೀಬಾಯಿ, ತಾರಾಬಾಯಿ ಮೊದಲಾದವರಂತಹ ವೀರಮಾತೆಯರು ಜನಿಸಿ, ನಮ್ಮೀ ಭಾರತಕೀರ್ತಿಯನ್ನು ಮತ್ತೆ ಗಾನಮಾಡುವರು. ಅಂತಹ ಭಾಗ್ಯವು ನಮಗೆ ಕ್ಷಿಪ್ರದಲ್ಲಿಯೇ ಉಂಟಾಗಲೆಂದು ಜಗತಿಯನ್ನು ಜೋಡಿತ ಹಸ್ತ ರಾಗಿ ಪ್ರಾರ್ಥಿಸೋಣ.)

---

# ಸರಸ್ವತೀ

| ಸಂಪುಟ ೫. | ಫೆಬ್ರುವರಿ—ಮಾರ್ಚಿ ೧೯೨೬. | ಸಂಚಿಕೆ ೧೦-೧೧ |
|---|---|---|

## ಹೂವುಗಳು.

—: ಪೂಜಾರಿ :—

ಪರಶಿವನಡಿದಾವರೆಗಿಡೆ ಪೂವಂ
ತಿರಿಯುವೆನೆಲೆ ತರುಲತೆಗಳೆ ನೀವುಂ
ಹರುಷದೊಳರ್ಪಿಸಿ ನಿಮ್ಮ ಕಾಣ್ಕೆಯಂ.

—: ತರು :—

ಅಂದಮಿಲ್ಲದೆನ್ನೀಬರಿ ಬಾಳ್ವಿಗೆ
ಚಂದವನಿತ್ತಪುದೀ ಕುಸುಮಂ ಮಿಗೆ
ತಂದೆ ಕೀಳಬೇಡದ ನೀಂ ಬೇಡುವೆ.

—: ಲತೆ :—

ಎನ್ನಮನದ ಆನಂದದ ಗಾನವ
ಬಣ್ಣಿಸುವೀ ಬಹುವರ್ಣದ ಕುಸುಮವ
ನನ್ಯಾಯದೆ ನೀಂ ಕೀಳ್ವಿಯೋ ಛೀ! ಛೀ!

—: ಭೂಮಿ :—

ಅರಸಿಕೆಯಾದೆನ್ನೆರ್ದೆಗೀ ಸೊಗಸಿನ
ಮರಲೆನಿತೊಲ್ಮೆಯ ನೀವುದೊ ಕಾಣೆನು
ಅರಿಯದೆ ನೀನದ ಕೀಳ್ವಿಯೊ ಮಾನವ?

—: ಹೂವು :—

ಪುಟ್ಟಿದುದೇತಕೆ? ಬಳಿಯಿಹ ಸುರಭಿಯ
ಬಿಟ್ಟಿಯೊಳೆರಚಿ ಕೊಡುವ ಮುನ್ನೆನ್ನಯ
ಹುಟ್ಟುಗೆಡಿಸಬೇಡೈ ನೀಂ ಸೋದರ.

—: ಒಟ್ಟುಗೂಡಿ :—

ತಿರೆಯಂ ಸೃಷ್ಟಿಸಿದಾ ಘನಮಹಿಮನ
ಚರಣಸೇವೆಗೊದಗಲ್ಕೀ ಚಲ್ವಿನ
ವರಪರಿಮಳವಂ ಶಿರದೆ ಪೊತ್ತಿಹೆವು.

—: ಪೂಜಾರಿ :—

ತಿಳಿದೆಂ ನಿಮ್ಮಯ ಸರಳಹೃದಯಮಂ
ನಲಿಸುವೆನಾ ಘನ ಮಹಿಮನ ಪದಮಂ
ಲಲಿತವಾದ ನಿಮ್ಮೀ ಮುಗಳ್ಗಳಿಂ.

‘ಭಾರತೀಸುತ’



# ರಾಷ್ಟ್ರೀಯ ಮಹಾಸಭೆಯೂ ಶ್ರೀಮತಿ ಸರೋಜಿನಿ ದೇವಿಯವರೂ

ಅಖಿಲ ಭಾರತೀಯ ರಾಷ್ಟ್ರ ಮಹಾ ಪರಿಷದದ ಅಧ್ಯಕ್ಷ ಸ್ಥಾನವನ್ನು ಶ್ರೀಮತಿ ಸರೋಜಿನಿ ದೇವಿಯವರಿಗೆ ಕೊಟ್ಟು ಸಮಸ್ತ ಸ್ತ್ರೀ ಸಮುದಾಯವನ್ನೂ ಮನ್ನಿಸಿದ್ದಕ್ಕಾಗಿ ನಾವು ದೇಶೀಯ ಮುಂದಾಳುಗಳನ್ನು ಬಾರಿಬಾರಿ ಕೊಂಡಾಡುತ್ತೇವೆ. ಸ್ತ್ರೀಯರ ಉನ್ನತಿಯಾಗದೆ ಯಾವುದೊಂದು ರಾಷ್ಟ್ರವೂ ಉನ್ನತಿಯ ಶಿಖರಕ್ಕೇರುವುದಿಲ್ಲವೆಂಬ ಅನುಭವಸಿದ್ಧವಾದ ಮಾತನ್ನು ಈಗಲೀಗ ಎಲ್ಲಾ ಜನರೂ--ಅದರಲ್ಲಿಯೂ ಭಾರತೀಯರು ಮನಗಂಡಿರುವುದನ್ನು ನೋಡಿದರೆ ನಮ್ಮಗಳ ಭಾವೀ ಭಾಗ್ಯೋದಯವು ಸಮೀಪಿಸುತ್ತಲಿದೆಯೆಂದು ಧಾರಾಳವಾಗಿ ಹೇಳಬಹುದು. ಎಂದೋ ಆಗಬೇಕಾಗಿದ್ದ ಇಂತಹ ಸ್ತುತ್ಯ ಸುಧಾರಣೆಯು ಇಂದಾದರೂ ಆಯಿತೆಂದು ಹೇಳಲು ಅತ್ಯಂತಾನಂದವೆನಿಸುವುದು. ಭಾರತೀಯ ಇತಿಹಾಸದಲ್ಲಿ ಒಬ್ಬಾಕೆ ಮಹಿಳೆಯನ್ನು ಮನ್ನಿಸಿದ ಈ ವಿಚಾರವು ಸುವರ್ಣಾಕ್ಷರಗಳಿಂದ ಚಿತ್ರಿಸಲ್ಪಡಬೇಕಾದುದು. ರಾಷ್ಟ್ರನಿರ್ಮಾಣದಲ್ಲಿ ಮಹಿಳೆಯರಿಗೆ ಯಾವ ಸ್ಥಾನವಿದೆ ಮತ್ತು ಇರಬೇಕು ಎಂಬುದನ್ನು ಲೋ|| ತಿಲಕ, ದೇ|| ದಾಸ, ಮ|| ಗಾಂಧಿ, ಸ್ವಾಮಿಶ್ರದ್ಧಾನಂದ ಮೊದಲಾದ ದೇವತುಲ್ಯ ಧುರೀಣರು ಸಂಸಾರಕ್ಕೆ (ಪ್ರಪಂಚಕ್ಕೆ) ಸಾರಿ ಸಾರಿ ಸಂದೇಶವನ್ನು ಕೊಟ್ಟಿರುತ್ತಾರೆ. ಅದು ಮಾತ್ರವಲ್ಲ. ಕಾರ್ಯಕ್ಷೇತ್ರಕ್ಕಿಳಿದ ತನ್ನ ಪತಿದೇವನ ಬೆಂಬಲವಾಗಿ ಪತ್ನಿಯು ಯಾವತರದ ಕಷ್ಟನಷ್ಟಗಳನ್ನು ಸಹಿಸಬೇಕು ಎಂಬುದನ್ನು ನಮ್ಮ ಪೂರ್ವ ಇತಿಹಾಸಗಳು ಸಾರಿ ಹೇಳುತ್ತಿವೆ. ಭಗವಂತನ ದಿವ್ಯ ಸಂಕಲ್ಪದಿಂದ ಪರಿಸ್ಥಿತಿಯ ಪರಮಾವಶ್ಯಕತೆಯನ್ನನುಸರಿಸಿ, ಇದೀಗ ನಮ್ಮಕ್ಕ ತಂಗಿಯರು ದೇಶಸೇವೆಯೆಂಬ ಪುಣ್ಯಕಾರ್ಯದಲ್ಲಿ ತಮಗಿರುವ ಪಾಲಿನ ಪಂಚಾಮೃತವನ್ನು ಸ್ವೀಕರಿಸುತ್ತಿರುವರು. ಅಂದರೆ ಪುರುಷರ ಪ್ರಯತ್ನಕ್ಕೆ ಸ್ತ್ರೀಯರ ಸಹಾಯವು ಅತ್ಯಾವಶ್ಯಕವೆಂದು ಜನತೆಗೆ ತಿಳಿದಿದೆ. ಶ್ರೀಮತಿ ಸರೋಜಿನಿ ದೇವಿಯವರು ಈ ರಾಷ್ಟ್ರೀಯ ಸಭೆಯ ಅಧ್ಯಕ್ಷಸ್ಥಾನವನ್ನು ವಹಿಸಿದ್ದು ರಾಜಕೀಯ ದೃಷ್ಟಿಯಿಂದ ಎಷ್ಟರಮಟ್ಟಿನ ಮಹತ್ವವುಳ್ಳದ್ದೆಂದು ಹೇಳಲು ನಮ್ಮಿಂದಾಗುವುದಿಲ್ಲ. ಆದರೆ ಅವರ ವಿಚಾರ, ವಿನಯ, ವಿದ್ಯೆ ಮೊದಲಾದವುಗಳಿಂದ ಅವರ ವಿಶುದ್ಧ ಹೃದಯವನ್ನು ನಾವರಿತುಕೊಂಡರೆ ರಾಜಕೀಯ ಕ್ಷೇತ್ರದಲ್ಲಿಯೂ ಕೂಡ ಅವರಿಗೆ ಉತ್ತಮ ಸ್ಥಾನವಿದೆಯೆಂದು ತೋರುತ್ತದೆ. ಸ್ವರಾಜ್ಯದ ಮಾತನ್ನೆತ್ತುವಾಗ ನಾವನೇಕವೇಳೆ

" ಸ್ವಗೃಹ ಸಾಮ್ರಾಜ್ಯ"ವನ್ನೇ ಮರೆತು ಬಿಡುತ್ತೇವೆ. ಇದಕ್ಕೆ ಕಾರಣವೊಂದಿದೆ. ಗೃಹಸಾಮ್ರಾಜ್ಯದ ವ್ಯವಹಾರ ವಿಚಾರಗಳನ್ನು ಆಮೂಲಾಗ್ರವಾಗಿ ತಿಳಿದವರು ಗೃಹಿಣಿಯರಲ್ಲದೆ ಗೃಹಸ್ಥರಲ್ಲ. ಹೀಗಿರುವಲ್ಲಿ ಗೃಹಿಣಿಯರು ಗೌರವಿಸದ ಗೃಹ ಸಾಮ್ರಾಜ್ಯವು ಹೇಗಿರಬೇಕೋ ಬಲ್ಲವರು ಯೋಚಿಸಲಿ! ಗೃಹಸಾಮ್ರಾಜ್ಯವು ಸ್ವರಾಜ್ಯ ಸಾಂಮ್ರಾಜ್ಯಕ್ಕೆ ಪ್ರಥಮ ಸೋಪಾನವಾಗಿದೆ. ಆ ಕಾರಣದಿಂದಲೇ ನಾವು ಸ್ವರಾಜ್ಯ (ರಾಜಕೀಯ) ಸಂಗ್ರಾಮದಲ್ಲಿ ಸುಶೀಲೆಯರಿಗೆ ಸ್ಥಾನವಿರಬೇಕೆನ್ನುತ್ತೇವೆ. ಈ ದೃಷ್ಟಿಯಿಂದ ನೋಡಿದರೆ ಶ್ರೀಮತಿಯವರು ರಾಷ್ಟ್ರೀಯ ಸಭೆಯ ಅಧ್ಯಕ್ಷರಾದುದು ಮಾನ್ಯವು, ಸರ್ವಮಾನ್ಯವು. ಇನ್ನು ಸಾಮಾಜಿಕ ದೃಷ್ಟಿಯಿಂದಂತೂ ಇದೊಂದು ಸ್ವರ್ಗೀಯ ಸುಯೋಗವೆಂದೇ ಹೇಳಬೇಕು. ಧಾರ್ಮಿಕ ರೀತಿ ನೀತಿಗಳು ಮಡಿಮೈಲಿಗೆಯಲ್ಲಿ ಉಚ್ಚ ನೀಚತನದಲ್ಲಿ ಅಡಕವಾಗಿರುವ ಈ ಆಡಂಬರದ ಅವಸರದಲ್ಲಿ ಸ್ತ್ರೀ ಸ್ವಾತಂತ್ರ್ಯದ ಮಾತು ಅನೇಕ ಹಿರಿಯರ ಮುಖದಿಂದ ಹೊರಡುವುದೇ ಇಲ್ಲ. ಇಂತಹ ಸಂದರ್ಭದಲ್ಲಿ ಸಭ್ಯ ಸುಧಾರಣೆಯಾಗುತ್ತಿರುವುದು ಕೇವಲ ಸಮಾಜಕ್ಕಲ್ಲ, ಸಮಾಜಾಂತರ್ಗತವಾದ ದೇಶಕ್ಕೂ ಸಹ ಒಳ್ಳೆಯದನ್ನು ಮಾಡುವಂಥದೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಆದ್ದರಿಂದ ಸಾಮಾಜಿಕ ದೃಷ್ಟಿಯಿಂದಲೂ ಶ್ರೀಮತಿಯವರ ಸಭಾಧ್ಯಕ್ಷತನವು ಶ್ಲಾಘನೀಯವಾದುದೆಂದಾಯಿತು.

ಪ್ರಕೃತ ಶ್ರೀಮತಿಯವರಿಗೆ ಆ ಸ್ಥಾನವನ್ನು ಕೊಟ್ಟುದಕ್ಕಾಗಿ ದೇಶದ ಯಾವತ್ತು ಜನರೂ ಮತ್ತು ಪತ್ರಿಕೆಗಳೂ ಹರ್ಷಾತಿರೇಕದಿಂದ ಅವರನ್ನು—ಅದರಲ್ಲಿಯೂ ರಾಷ್ಟ್ರೀಯ ಮಹಾ ಸಭೆಯನ್ನು ಕೊಂಡಾಡುತ್ತಲಿರುವರು. ಆದರೆ ಅವರಲ್ಲಿ ಅಭಿಪ್ರಾಯ ಬೇಧವುಳ್ಳ ಕೆಲವರು ಮಾತ್ರ ವಿಮರ್ಶಿಸುತ್ತಿರುವರು. ಹಾಗೆ ವಿಮರ್ಶಿಸಿದವರಲ್ಲಿ ನಮ್ಮ "ಕರ್ನಾಟಕ" ಜನಸಾಮಾನ್ಯರ ಪ್ರೀತಿಗೆ ಪಾತ್ರರಾದವರೂ, ವಿದ್ವನ್ಮಣಿಗಳೊಬ್ಬರೂ, ಪೂಜ್ಯ ಬುದ್ಧಿಯುಳ್ಳವರೂ ಆದ ಶ್ರೀಯುತ ಡಿ. ವಿ. ಗುಂಡಪ್ಪನವರೊಬ್ಬರು. ಅವರ ಹೇಳಿಕೆಯಂತೆ ಶ್ರೀಮತಿಯವರು ಒಬ್ಬ "ಬಂಗಾಲಿ" "ಸ್ತ್ರೀ" ಮತ್ತು "ಕವಯಿತ್ರಿ" ಯೆಂದೂ ರಾಷ್ಟ್ರೀಯ ಮಹಾಸಭೆಗೆ.......... ತಿಳಿದುಬರುತ್ತದೆ. ಸ್ತ್ರೀಯರಲ್ಲಿ ಮಾತೃಭಾವವುಳ್ಳ ಈ ಮಹನೀಯರು ಈ ರೀತಿಯ ಮಾತುಗಳನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿದ್ದು ನಿಜವಾಗಿಯೂ ಖೇದವೆನಿಸುತ್ತದೆ. ಅಭಿಪ್ರಾಯ ಬೇಧಗಳಿದ್ದರೂ ಅವಸ್ಥಾ ಬೇಧಗಳಿರುವುದಿಲ್ಲ; ವೃಷ್ಟಿ ಮೋಷವಿದ್ದರೂ ಹೃದಯ ಪರಿವರ್ತನವಾಗುವುದಿಲ್ಲ; ಗೌರವಾನ್ವಿತರಿದ್ದರೂ ಗೃಹಿಣಿಯರನ್ನು ಅಲ್ಲಗಳೆಯುವುದಿಲ್ಲ. ಆದರೆ ರಾಷ್ಟ್ರದ ಪುರೋಭಿವೃದ್ಧಿಗಾಗಿ, ಸಮಾಜದ

ಉನ್ನತಿಗಾಗಿ, ದಯೆಯುಳ್ಳ ಮತ್ತು ದಾಕ್ಷಿಣ್ಯವುಳ್ಳ ಮಾತನ್ನೇ ಅವರಾಡುವರು. ಶ್ರೀಮಾನ್ ಗುಂಡಪ್ಪನವರ ಈ "ವಿಮರ್ಶಾವೈಶಿಷ್ಟ್ಯ"ವು ನಿಜವಾಗಿ ರಾಷ್ಟ್ರಹಿತಕ್ಕೆ ಮತ್ತು ಸಮಾಜಹಿತಕ್ಕೆ ಘಾತಕವೆಂದು ಅದಾಗಲೇ ಅನೇಕ ಪತ್ರಿಕೆಗಳು ಸಾರಿ ಹೇಳಿವೆ. ನಾವಾದರೂ ಆ ರೀತಿಯ ಖಂಡನೆಯನ್ನು ಸ್ತ್ರೀಸಮುದಾಯಕ್ಕೇನೇ ಬಿಟ್ಟು ಕೊಟ್ಟಿರುವೆವು. ಮತ್ತು ಸಮಾಜಕ್ಕೆ ಘಾತಕವಾದ ಮಾತುಗಳಿದ್ದರೆ ಅವನ್ನು ಹಿಂತೆಗೆಯಬೇಕೆಂದು ಅವರಲ್ಲಿ ಸವಿನಯ ವಿನಂತಿಮಾಡಿಕೊಳ್ಳುತ್ತೇವೆ. ಸಂ|| ಸ||

## ಗೃಹವೂ ಗೃಹಿಣಿಯೂ.

ಜಗದ್ವಿಖ್ಯಾತ ಕವಿಗಳ ಪವಿತ್ರವಾದ ಹೃದಯ ಮಂದಿರದಲ್ಲಿ ಜಾಗರಿತವಾದ ಹಾಗೂ ಅವರ ಪರಮ ಪಾವನವಾದ ಲೇಖಣಿಯಿಂದ ಅನಾಯಾಸವಾಗಿ ಸುರಿಯುವ ಕಾವ್ಯರಸದಿಂದ ಗೃಹಸ್ಥಾಶ್ರಮವೆಂಬ ಸಾಮ್ರಾಜ್ಯದಕ್ಕೆ ರಮಣಿಯೇ ರಾಣಿಯೆಂದು ದೃಢವಾಗುವುದು. ಗೃಹಸ್ಥಾಶ್ರಮವೇ ಸರ್ವಾಶ್ರಮಗಳ ಉತ್ಪತ್ತಿಸ್ಥಾನವು. ಏಕೆಂದರೆ ಈ ಪುಣ್ಯಾಶ್ರಮದಲ್ಲಿ ಮನುಷ್ಯನು ಜನ್ಮಧಾರಣೆಮಾಡಿ, ಜಗತ್ತಿನ ವೈಚಿತ್ರ್ಯವನ್ನು ಶೃಂಗರಿಸುವನು; ಇಪ್ಪತ್ತುನಾಲ್ಕು ವರ್ಷಗಳ ಬ್ರಹ್ಮಚರ್ಯೆಯೆಂಬ ತಪಸ್ಸನ್ನು ಪೂರ್ತಿ ಮಾಡುವನು. ತನ್ನ ಪ್ರೇಮ ಪುಷ್ಪಗಳಂತೆ ಇರುವ ಪುತ್ರರ ವಿಮಲ ಮುಖಾರವಿಂದವನ್ನು ದರ್ಶನಮಾಡಿ ತಮ್ಮ ಜೀವನ ವೃಕ್ಷದ ಮೂಲವನ್ನು ದೃಢಪಡಿಸುವನು. ಮತ್ತು ಇದೇ ಸೌಂದರ್ಯಮಯ ಸರೋವರದ ಶೀತಲ ಕಮಲಗಳ ಶ್ರೇಷ್ಠ ಸುಗಂಧದಿಂದ ತನ್ನ ಮನೋಮಂದಿರದ ಇಷ್ಟದೇವತೆಯ ಆರಾಧನೆಯನ್ನು ಮಾಡಿ ಹೃದಯವನ್ನು ಪವಿತ್ರವನ್ನಾಗಿ ಮಾಡಿಕೊಳ್ಳುವನು. ರಮಣಿಯು ಈ ಆಶ್ರಮದ ಆದ್ಯದೇವಿಯು; ಪುರುಷನು ಹೊರಗಿನ ಆಡಂಬರಗಳಿಂದ ಅವನ್ನು ಸಂತೋಷಪಡಿಸುವ ಪೂಜಾರಿಯು. ವಿಗ್ರಹವಿಲ್ಲದ ದೇವಾಲಯವು ಹೇಗೆ ಶೂನ್ಯವಾಗಿರುವುದೋ ಹಾಗೆಯೇ ಗೃಹಿಣಿ ಇಲ್ಲದ ಗೃಹವು ಸ್ಮಶಾನೋಪಮವಾಗಿರುವುದು. ಗೃಹಸ್ಥಾಶ್ರಮದ ರಥವನ್ನೆಳೆಯಲು ರಮಣಿಯರ ಆವಶ್ಯಕತೆಯು ಅನಿವಾರ್ಯವಾಗಿರುವುದು. ಅವರ ಮಧುರವಾಣಿಯಿಂದ ದೂರವಾದ ಗೃಹವು ಭೂತಪಿಶಾಚಿಗಳ ಬೀಡಾಗಿಬಿಡುವುದು ನಮಗೆ ಪ್ರತ್ಯಕ್ಷವಾಗಿ ತೋರುವುದೇನೆಂದರೆ: ಯಾವ ಮನೆಯಲ್ಲಿ ರಮಣಿಯ

ಪ್ರಭಾತವಾಗುವುದಿಲ್ಲವೋ, ಅಲ್ಲಿನ ಮಾಧುರ್ಯ, ಸಂತೋಷ, ಸುಖ, ಸರ್ವಪ್ರಿಯತೆಯು ಎಲ್ಲಿ ಓಡಿಹೋಗುವುದೋ ತಿಳಿಯದು. ಪತ್ನಿ ವಿಹೀನನಾದ ಪತಿಯು ಸಂಧ್ಯಾಕಾಲದ ನಕ್ಷತ್ರದಂತೆ ಕಾಂತಿಹೀನನೂ ಸುಖಭ್ರಷ್ಟನೂ ಆಗುವನು.

ಪರಂತು ಆಧುನಿಕ ಸಮಯದ ಮಹಾ ದುರ್ದೆಶೆಯನ್ನು ನೋಡಿನೋಡಿ ಸರ್ವರೂ ಸ್ತ್ರೀಯರ ಮೂರ್ಖತೆಯಮೇಲೆ ಕಣ್ಣೀರು ಸುರಿಸಹತ್ತಿರುವರು. ನಾರಿಯರ ಪಕೃತ ಸ್ಥಿತಿಯು ಅಶಾಂತಿಯು ಭಯಂಕರ ರೂಪವನ್ನು ಧರಿಸಿ ಭಾರತಭೂಮಿಯ ಮೂಲೆಮೂಲೆಗಳಲ್ಲಿಯೂ ಹಾಹಾಕಾರದ ಚೀತ್ಕಾರವನ್ನು ಸುರಿಸುತ್ತಿರುವುದು. ನಮ್ಮ ಸೌಭಾಗ್ಯದ ಚಂದ್ರನು ಘೋರವಾದ ಮೇಘಗಳಿಂದ ಆಚ್ಛಾದಿಸಲ್ಪಟ್ಟಿರುವನು. ನಾರೀರತ್ನಗಳ ಅಸಮಾಧಾನದಿಂದಲೇ ಗೃಹಸ್ಥಾಶ್ರಮಕ್ಕೆ ಈ ದುರ್ದಶೆಯು ಪ್ರಾಪ್ತಿಸುತ್ತಲಿದೆ. ಏತಕ್ಕೆಂದರೆ ಈ ಪುಣ್ಯಭೂಮಿಯಲ್ಲಿ ಪೂರ್ವದಲ್ಲಿದ್ದಂತೆ ಆದರ್ಶ ಮಹಿಳೆಯರ ಸಂಖ್ಯೆಯು ಬೇಕಾದಷ್ಟಿಲ್ಲ.

ಪ್ರಾಚೀನ ಭಾರತ ರಮಣಿಯರಂತೆ ತಮ್ಮ ಧರ್ಮಕರ್ಮಗಳನ್ನರಿತು ಇತರರಿಗೆ ಸದ್ಬೋಧೆಯನ್ನು ಮಾಡಲು ಈಗಿನ ಮಹಿಳೆಯರಿಂದ ತಿಲಮಾತ್ರವೂ ಸಾಧ್ಯವಿಲ್ಲ. ಈಗಿನ ಕಾಲದ ನೈಸರ್ಗಿಕ ಸ್ಥಿತಿಯು ತುಂಬಾ ಕೆಟ್ಟಿರುವುದು. ಇದರಿಂದಲೇ ಹಿಂದೂ ಸಮಾಜವು "ಸ್ತ್ರೀ ಶಿಕ್ಷಣ" ವೆಂಬ ಶಬ್ದೋಚ್ಚಾರ ಮಾತ್ರದಿಂದ ಕಂಪಿತವಾಗುವುದು; ಪುರುಷರು ಸ್ತ್ರೀಯರನ್ನು ಕೇವಲ ದಾಸೀಭಾವದಿಂದ ನೋಡಲಾರಂಭಿಸಿರುವರು; ಕಾರಣ ದಾಸಿಯ ಯೋಗ್ಯತೆಯಿಂದ ಗೃಹಕೃತ್ಯವು ಯಾವ ರೀತಿಯಲ್ಲಾಗುವುದೋ ಹಾಗೆಯೇ ಆಗುತ್ತಲಿರುವದು.

ವರ್ತಮಾನ ಕಾಲದ ಸ್ತ್ರೀ ಶಿಕ್ಷಣವು ಸ್ತ್ರೀಯರನ್ನು ಎರಡು ಪಂಗಡಗಳನ್ನಾಗಿ ವಿಭಾಗಿಸಿರುವುದು. ಒಂದು ಪಂಗಡದವರು ಕೇವಲ ನಿರಕ್ಷರಕುಕ್ಷಿಗಳು; ಮತ್ತೊಂದು ಪಂಗಡದವರು ನವೀನ ವಿದ್ಯಾಭ್ಯಾಸದ ಸಂಸ್ಕಾರಕ್ಕೊಳಗಾಗಿ ತಮ್ಮನ್ನು ತಾವೇ ಬುದ್ಧಿವಂತರೆಂತಲೂ, ಸರ್ವಜ್ಞರೆಂತಲೂ ಭಾವಿಸಿ, ಮೊದಲಿನ ಪಂಗಡದವರಾದ ತಮ್ಮ ಸಹೋದರಿಯರಿಗೆ ಸದ್ಬೋಧೆಯನ್ನು ಮಾಡುವುದಕ್ಕೆ ಬದಲಾಗಿ ಅವರೊಡನೆ ಮಾತನಾಡುವುದು ಕೂಡ ಅವಮಾನಾಸ್ಪದವೆಂದರಿತು ಅವರೊಡನೆ ದ್ವೇಷಾಸೂಯೆಯಿಂದ ವರ್ತಿಸುವವರು ನಿರಕ್ಷರಕುಕ್ಷಿಗಳಾಗಿ ಕೇವಲ ಮೂರ್ಖರಾದವರು ಹೇಗೋ ಹಾಗೋ ತಮ್ಮ ಗೃಹಕೃತ್ಯಗಳನ್ನು ನಿರ್ವಹಿಸಿಕೊಳ್ಳುವರು. ಪರಂತು ಯಾರು ವರ್ತಮಾನ ಕಾಲದ ವಿದುಷೀಮಣಿಯರೆಂದೆನ್ನಿಸಿಕೊಳ್ಳುವರೋ, ಅವರು ಗೃಹಕೃತ್ಯ ಶಿಕ್ಷಣಾಭಾವದಿಂದ ಗೃಹಕೃತ್ಯಗಳನ್ನು ನಿಂದನೀಯವಾಗಿಯೂ, ತುಚ್ಛವಾಗಿ

ಯೂ ಲೆಕ್ಕಿಸುವರು. ಗೃಹಕೃತ್ಯದ ಭಾರವನ್ನೆಲ್ಲಾ ಆಳುಗಳ ತಲೆಯಮೇಲೆ ಹಾಕಿ ತಾವು ಆನಂದೈಶ್ವರ್ಯ ಸಾಗರದಲ್ಲಿ ಮುಳುಗಿ ತೇಲುತ್ತಿರುವರು. ಆದರೆ ಇದರ ಲಾಭ ನಷ್ಟಗಳ ಮೇಲೆ ಈಗಿನ ಸುಶಿಕ್ಷಿತ ವಿದುಷೀಮಣಿಯರೆಂದು ಭಾವಿಸುವ ಭಾರತ ಭಗಿನಿಯರ ಕರುಣಾದೃಷ್ಟಿಯು ಬೀಳುವುದು ತುಂಬಾ ಕಷ್ಟವಾಗಿದೆ. ಆದ್ದರಿಂದ ಆಳುಗಳು ತಮ್ಮ ಮನಸ್ಸಿಗೆ ಬಂದಂತೆ ಕಾರ್ಯಸಾಧನೆಯನ್ನು ಮಾಡುವರು. ಆಳು ಗಳ ಪ್ರಭಾವದಿಂದ ಖರ್ಚು ಹೆಚ್ಚಾಗುವುದಲ್ಲದೆ, ಊಟ ಉಪಚಾರಗಳಲ್ಲಿ ನಿಜವಾದ ಆನಂದ ಸೌಖ್ಯವು ದೊರೆಯುವುದೂ ಅಸಂಭವವಾಗುವುದು. ಗೃಹಿಣಿಯರಿಗೆ ಮೇಲ್ಕಂಡ ವಿಷಯದಲ್ಲಿ ತುಂಬಾ ಲಕ್ಷ್ಯವಿರಬೇಕು. ಗೃಹಕೃತ್ಯದ ಎಲ್ಲಾ ಕೆಲಸಗಳನ್ನೂ ತಮ್ಮ ಕೈಯಿಂದ ಮಾಡುವುದು ಸರ್ವೋತ್ತಮವು. ಒಂದುವೇಳೆ ಪರಿಚಾರಕರಿಂದ ಕೆಲಸಮಾಡಿಸುವ ಸಂದರ್ಭದಲ್ಲಿ ಅವರ ಕಾರ್ಯಕ್ರಮದಲ್ಲಿ ಯಾವ ವಿಧವಾದ ಕೊರತೆ ಯೂ ಬಾರದಂತೆ ನೋಡಿಕೊಳ್ಳಬೇಕು. ಗೃಹಕೃತ್ಯದ ಸರ್ವಭಾರವೂ ಗೃಹಿಣಿ ಯನ್ನವಲಂಬಿಸಿರುವುದು. ಯಾವ ಸಾಧ್ವಿಯು ಆ ಭಾರವನ್ನು ವಹಿಸಲು ಸಮರ್ಥ ಳೋ, ಅವಳೇ ಗೃಹಿಣಿಯ ಪದವಿಯನ್ನು ಅಲಂಕರಿಸಲು ಯೋಗ್ಯಳು. ಆಕೆಯ ಕಾರ್ಯದ ಗಣನೆಯನ್ನು ಯಾರಿಂದ ತಾನೇ ಮಾಡಲಾದೀತು? ಆದರೆ ಮುಖ್ಯವಾದ ಕಾರ್ಯಗಳು—ಅಂದರೆ ಭಕ್ಷ್ಯಭೋಜ್ಯಗಳನ್ನು ತಯಾರಿಸುವುದು, ಶಿಲ್ಪವಿದ್ಯೆ ತಮ್ಮ ಮಕ್ಕಳಿಗೆ ಯೋಗ್ಯಪೋಷಣೆ, ಶಿಕ್ಷಣ ಕೊಡುವುದು, ಮನೆಯ ಲೆಕ್ಕಗಳನ್ನಿಡುವುದು ಇತ್ಯಾದಿ ಕಾರ್ಯಗಳಿರುವುವು. ಇವುಗಳನ್ನೆಲ್ಲಾ ಇಲ್ಲಿ ಸ್ಥಳಾಭಾವದಿಂದ ವರ್ಣಿಸ ಲಾರೆವು.

ಬಾಲಕರ ಭವಿಷ್ಯವು ಮಾತೆಯ ಕೈಯಲ್ಲಿರುವುದು. ಬೇಕಾದರೆ ಅವನನ್ನು ವಿಭೀಷಣನಂತೆ ಭಗವದ್ಭಕ್ತನನ್ನಾಗಿ ಮಾಡಬಹುದು ಅಥವಾ ರಾವಣನಂತೆ ದುಷ್ಟನ ನ್ನಾಗಿ ಮಾಡಬಹುದು. ಮದಾಲಸೆಯ ಹೆಸರನ್ನು ಭಾರತೀಯರೆಲ್ಲರೂ ಬಲ್ಲರು. ಮಧುರಾಮೃತದಿಂದ ತುಂಬಿದ್ದ ಆಕೆಯ ವಾಕ್ಯಗಳ ಗಾನವನ್ನು ಮಾಡುತ್ತಾ ಈ ಹೊತ್ತಿಗೂ ಭಾರತೀಯರು ಆ ಸಾಧ್ವೀಮಣಿಯನ್ನು ಮರೆತಿಲ್ಲ. ಆಹಾ! ಮದಾ ಲಸೆಯು ಎಷ್ಟು ಮಧುರಸ್ವರದಿಂದ ಗಾನಮಾಡುತ್ತಿರುವಳು!

"ಶುದ್ಧೋಽಸಿ ಬುದ್ಧೋಽಸಿ ನಿರಂಜನೋಽಸಿ |
ಸಂಸಾರ ಮಾಯಾಪರಿವರ್ಜಿತೋಽಸಿ ||
ಸಂಸಾರ ಸೌಖ್ಯಾತಜನೋಹನಿದ್ರಾ |
ಮದಾಲಸಾ ವಾಕ್ಯಮುವಾಚ ಪುತ್ರಾ ||"

ಎಷ್ಟು ಮಧುರ ! ಈ ಸಂಸಾರ ಸ್ವಪ್ನದಿಂದ ನಿವೃತ್ತರನ್ನಾಗಿ ಮಾಡುವ ಈ ಮನೋಹರ ವಾಕ್ಯವು ! ಏನು ? ಈಗಿನ ಕಾಲದಲ್ಲಿ ನಾವೇ ಸುಶಿಕ್ಷಿತ ವಿದುಷಿಯ ರೆಂದು ಭಾವಿಸುವ ನಾರಿಯರಲ್ಲಿ ಯಾರಾದರೂ ಮದಾಲಸೆಗೆ ಸರಿತೂಗುವ ಯೋಗ್ಯ ತೆಯನ್ನು ಸಂಪಾದಿಸಿರುವರೋ ? ಮಂಡನಮಿಶ್ರರಂತಹ ಪಂಡಿತಾಗ್ರೇಸರರೊಡನೆ ವಾದಮಾಡುವ ಸಾಮರ್ಥ್ಯವು ಮದಾಲಸೆಗಲ್ಲದೆ ಇನ್ನಾರಿಗಿರುವುದು? ಇಂಥಾ ವಿಚಾರ ಗಳು ಈಗಿನ ನಮ್ಮ ಭಾರತ ಸ್ತ್ರೀ ಸಮಾಜವನ್ನು ಬಿಟ್ಟು ಸಾವಿರಾರು ಯೋಜನ ಗಳಷ್ಟು ದೂರ ಓಡಿಹೋಗಿರುವುವು. ಈಗಿನ ಕಾಲದಲ್ಲಿ ಇಬ್ಬರಿಂದ ಮೂವರು ಸ್ತ್ರೀಯರು ಒಂದುಕಡೆ ಪರಸ್ಪರ ಕಲೆತರೆ, ಪರನಿಂದೆಯ ಬಾಗಿಲು ತೆರೆಯಲ್ಪಡು ವುದು. ಹೊಟ್ಟೆಯ ಪಾಡಿಗಾಗಿ ಬೆಳಗಿನಿಂದ ಸಾಯಂಕಾಲದವರಿಗೂ ಪಡಬಾರದ ಕಷ್ಟಗಳನ್ನು ಪಟ್ಟು, ಸೋತು, ಸಾಕಾಗಿ ಬಂದಿರುವ ಪತಿಯನ್ನು ಶಾಂತಸ್ವಭಾವ ದಿಂದ ಉಪಚರಿಸುವುದಕ್ಕೆ ಬದಲಾಗಿ ತಮ್ಮ ಅತ್ತೆ—ನಾದುನಿಯರ ಮೇಲೆ ದೂರು ಹೇಳಿಕೊಳ್ಳುವರು. ಇದರಿಂದ ಗೃಹದಲ್ಲಿ ಸಂತೋಷಾನಂದಗಳುಂಟಾಗುವುದಕ್ಕೆ ಬದಲಾಗಿ ಕೋಪ-ತಾಪ-ದುಃಖಗಳುಂಟಾಗುವುವು.

ಭಾರತ ಭಗಿನಿಯರೇ, ಈಗಿನ ನಿಮ್ಮ ವೇಷಧಾರಣೆಯನ್ನು ಬಿಟ್ಟು, ನಿಮ್ಮ ಧರ್ಮ-ಕರ್ಮಗಳನ್ನರಿತುಕೊಳ್ಳಿ; ತಮ್ಮ ಸಂಬಂಧಿಗಳಲ್ಲಿ ದ್ವೇಷಾಸೂಯೆಗಳನ್ನು ಕಟ್ಟಿಕೊಳ್ಳುವುದಕ್ಕೆ ಬದಲಾಗಿ ಅವರಲ್ಲಿ ಪ್ರೇಮದ ಬೀಜವನ್ನು ಬಿತ್ತಿರಿ. ನೀವು ನಿಮ್ಮ ಹರಕು ಮುರುಕು ಗುಡಿಸಲಿನಲ್ಲಿಯೇ ಸ್ವರ್ಗಸುಖವನ್ನು ಪಡೆಯಬಹುದು. ಅಥವಾ ನಿಮ್ಮ ಆನಂದ ಭವನವನ್ನು ಭೂತಬೇತಾಳಗಳು ವಾಸಿಸುವ ಸ್ಮಶಾನವನ್ನಾಗಿ ಯಾವರೂ ಮಾಡಬಹುದು. ಆದ್ದರಿಂದ ನೀವು ನಿಮ್ಮ ಕಾರ್ಯದಲ್ಲಿ ಸದಾ ತತ್ಪರರಾಗಿರಿ; ನಿಮ್ಮ ಧರ್ಮಕರ್ಮಗಳನ್ನು ಸರಿಯಾದ ರೀತಿಯಲ್ಲಿ ನೋಡಿಕೊಳ್ಳಿರಿ. ನಿಮ್ಮೀ ಕಾರ್ಯ ತತ್ಪರತೆಯಿಂದ ಭಾರತವರ್ಷದ ಮೂಲೆ ಮೂಲೆಯಲ್ಲಿಯೂ ಸುಖ ಸಮುದ್ರದ ತರಂಗಗಳೇಳುವುವು; ಮತ್ತು ಭಾರತವು ತನ್ನ ಪೂರ್ವ ವಿಸ್ಮೃತ ಸ್ವತಂತ್ರವನ್ನು ಪುನಃ ಪಡೆಯುವುದು.

---

# ಸ್ವೀಕಾರ.

---

**ಆಯುರ್ವೇದ, ಮಾಸಪತ್ರಿಕೆ, ತೀರ್ಥಹಳ್ಳಿ**--'ಶರೀರಮಾದ್ಯಂ ಖಲು ಧರ್ಮಸಾಧನಂ' ಎಂದಿರುವ ಕಾರಣ ಸಂಸಾರಿಯೇ ಆಗಲಿ, ಸನ್ಯಾಸಿಯೇ ಆಗಲಿ ಆರೋಗ್ಯವನ್ನು ಕಾಪಾಡಿಕೊಂಡು ಶರೀರಸುಖವನ್ನು ಹೊಂದಲೇಬೇಕಾಗಿದೆ. ಅದಕ್ಕೆ ನಮ್ಮ ಆಚಾರ ವ್ಯವಹಾರಕ್ಕನುಸರಿಸಿದ ಆಯುರ್ವೇದವೊಂದೇ ಮೂಲಕಾರಣವು. ಇತ್ತೀಚಿಗೆ ನಮ್ಮ ಕರ್ನಾಟಕದಲ್ಲಿಯೂ ಆಯುರ್ವೇದ ವಿದ್ಯಾಪ್ರಚಾರವಾಗುತ್ತಿರುವುದು ಶ್ಲಾಘನೀಯವಾದುದು. ಇತರ ಭಾಷೆಗಳಲ್ಲಿರುವಂತೆ ಕನ್ನಡದಲ್ಲಿಯೂ ಆಯುರ್ವೇದ ಸಂಬಂಧವಾದ ಒಂದು ಮಾಸಪತ್ರಿಕೆಯ ಅವಶ್ಯಕತೆಯಿದ್ದಿತು; ಅದೀಗ ಪೂರ್ಣವಾಯಿತು. ಶ್ರೀವರ್ಮ ಪಂಡಿತ ಸೂರ್ಯನಾರಾಯಣಶಾಸ್ತ್ರಿಗಳವರು ಈ ಪತ್ರಿಕೆಯ ಸಂಪಾದಕರಾಗಿರುವುದರಿಂದ ತತ್ಸಂಬಧೀಯ ವಿಚಾರ ವಿಮರ್ಶೆಯು ಉತ್ತಮ ಹಾಗೂ ಉನ್ನತಸ್ಥಾನವನ್ನು ಪಡೆದೀತೆಂದು ಬೇರೆ ಹೇಳಬೇಕಾದುದಿಲ್ಲ ಪತ್ರಿಕೆಯು ಸಂಗ್ರಹಿಸಲು ತಕ್ಕುದು; ವಾರ್ಷಿಕ ವರ್ಗಣಿಯು ಹೆಚ್ಚಾಗಿಲ್ಲ; ರೂ. ೩-೦-೦ ಮಾತ್ರವೆ. ಸಮಸ್ತರೂ ಈ ಪತ್ರಿಕೆಯ ಚಂದಾದಾರರಾಗಿ ಸಂಪಾದಕರು ಕೈಗೊಂಡಿರುವ ಮಹತ್ಕಾರ್ಯದಲ್ಲಿ ಸಹಾಯಕರಾಗಬೇಕಾಗಿ ಪ್ರಾರ್ಥನೆ.

ಈಗ ಇದರಲ್ಲಿ 'ಮಾಧವನಿಧಾನ, ಶಾರ್ಙ್ಗಧರಸಂಹಿತ' ವೊದಲಾದ ಪ್ರಾಚೀನ ಪ್ರಮಾಣಗ್ರಂಥಗಳು ಅನುವಾದಿಸಲ್ಪಡುತ್ತಿವೆ. ಇದರಂತೆ ಮುಂದಕ್ಕೂ ಸಂಸ್ಕೃತದಲ್ಲಿರುವ ಸಮಸ್ತ ಗ್ರಂಥಗಳನ್ನೂ ಸರಳ ಕನ್ನಡದಲ್ಲಿ ಅನುವಾದಿಸಿ ಪ್ರಕಟಿಸಿದರೆ ಕರ್ನಾಟಕ ವೈದ್ಯಕೀಯ ಸಾಹಿತ್ಯಕ್ಕೆ ಅಪಾರ ಲಾಭವುಂಟಾಗುವುದೆಂಬುವರಲ್ಲಿ ತಿಲಮಾತ್ರವೂ ಸಂದೇಹವಿಲ್ಲ. ಮತ್ತು ಸಂಗಡಲೇ ಕರ್ನಾಟಕ ಹಸ್ತಲಿಖಿತ ವೈದ್ಯಕೀಯ ಗ್ರಂಥಗಳನ್ನು ಸಂಗ್ರಹಿಸುವ ಸತ್ಕಾರ್ಯವನ್ನು ಕೈಗೊಂಡರೆ ಮತ್ತಿಷ್ಟು ಹಿತವು. ಈ ಮಧ್ಯೆ ಒಂದು ಮಾತನ್ನು ನಿಜವಾಗಿ ನೆನಪಿನಲ್ಲಿಟ್ಟುಕೊಳ್ಳಬೇಕಾಗಿದೆ. ಅದಾವುದೆಂದರೆ-'ಧನ್ವಂತರಿ' ಯಂತೆ (ಶೃಂಗೇರಿಯಿಂದ ಹೊರಡುವ ಪಾಕ್ಷಿಕ ವೈದ್ಯಕೀಯ ಪತ್ರಿಕೆ) ಸಾಮಾಜಿಕ ವಿಷಯಗಳಿಗೆ ಅಗ್ರಸ್ಥಾನವನ್ನು ಕೊಡದೆ, ಅಧಿಕಾಧಿಕವಾಗಿ ವೈದ್ಯಕೀಯ ವಿಚಾರಗಳನ್ನೇ ಸಂಗ್ರಹಿಸಬೇಕು.

**ಪುಣೆಯ ಕರ್ನಾಟಕ ಸೋಶಿಯಲ್ ಕ್ಲಬ್**-ಈ ಹೆಸರಿನದೊಂದು ಸಂಸ್ಥೆಯು ಸುಮಾರು ಒಂದೂವರೆ ವರ್ಷದಿಂದ ಮೇಲ್ಕಂಡ ಪಟ್ಟಣದ ವಾಸಿಗಳಾದ ಕೆಲವು

ಜನ ಕನ್ನಡಿಗರಿಂದ ಸ್ಥಾಪಿಸಲ್ಪಟ್ಟು ನಡೆಯುತ್ತಿರುವುದು. ಮಹಾರಾಷ್ಟ್ರನಾಡಿನಲ್ಲಿಯೂ ಕನ್ನಡಿಗರು ತಮ್ಮ ನಿಜ ಭಾಷಾಭಿವೃದ್ಧಿಗಾಗಿ ಪ್ರಯತ್ನಿಸುತ್ತಿರುವುದು ಸ್ತೋತ್ರಾರ್ಹವೇ ಸರಿ. ಇದರ ವಾರ್ಷಿಕ ವರದಿಯು ನಮಗೆ ತಲ್ಪಿದೆ. ಇದಕ್ಕೆ ಸಹಾಯಕರು ತೀರ ಕಡಮೆಯಾಗಿರುವುದರಿಂದ ಸಂಘದ ಅನೇಕ ಕಾರ್ಯಗಳು ನಡೆಯುವೆ ಅಡಚಣೆಯಿದೆ. ಆದುದರಿಂದ ಪುಣೆಯಲ್ಲಿರುವ ಕನ್ನಡಿಗರೆಲ್ಲರೂ ಒಂದುಗೂಡಿ ಈ ಸಂಘವನ್ನು ಉನ್ನತಸ್ಥಿತಿಗೆ ತರಬೇಕಾಗಿ ಪ್ರಾರ್ಥನೆ. ಇದರಲ್ಲಿ ವಾಚನಾಲಯವೊಂದಿದ್ದು ಅದಕ್ಕೆ ಅನೇಕ ಸುಹೃದಯ ಕನ್ನಡ ಮಾಸ ವೃತ್ತ ಪತ್ರಿಕಾಕರ್ತರು ಪತ್ರಿಕೆಯನ್ನು ವಿನಾಮೂಲ್ಯ ಕಳುಹಿಸುತ್ತಿರುವರು. ಇಷ್ಟುಮಾತ್ರವಲ್ಲದೆ ಕರ್ನಾಟಕದ ಇತರ ಭಾಗದಿಂದ ಪುಣೆಗೆ ಕಾರ್ಯನಿಮಿತ್ತವಾಗಿಯಾಗಲಿ, ನೋಟದ ಸಲುವಾಗಿಯಾಗಲಿ ಹೋಗುವ ಕನ್ನಡಿಗರು ಭಾಷೆ ತಿಳಿಯದ ನಿಮಿತ್ತ ತೊಂದರೆಗೊಳಗಾಗವಂತೆ ಮೇಲ್ಕಂಡ ಕ್ಲಬ್ಬಿನವರು ಬೇಕಾದ ಸೌಕರ್ಯಗಳನ್ನೊದಗಿಸಿಕೊಡುತ್ತಿರುವುದು ಸ್ತೋತ್ರಾರ್ಹವಾದ ಸುಸಂಗತಿಯೇ ಸರಿ. ಕನ್ನಡಿಗರು ಈ ಸಂಘದವರ ಸದುದ್ದೇಶವನ್ನು ಸಾರ್ಥಕಗೊಳಿಸುವುದು ಮಾತ್ರವಲ್ಲದೆ ತಮಗಗತ್ಯವಾದಾಗ ಸಂಘದ ಉಪಯೋಗವನ್ನು ಮಾಡಿಕೊಳ್ಳಬೇಕು. ಅವಶ್ಯಬಿದ್ದಾಗ ಈ ವಿಳಾಸಕ್ಕೆ ಬರೆದು ಹೆಚ್ಚಿನ ಮಾಹಿತಿಯನ್ನು ಪಡೆಯಬಹುದು:—ವ್ಯವಸ್ಥಾಪಕ, ಕರ್ನಾಟಕ ಸೋಷಿಯಲ್ ಕ್ಲಬ್, ಕಾರ್ಲೀಸ್ ಬಿಲ್ಡಿಂಗ್ಸ್, ೬೪೩, ಬುಧವಾರ ಪೇಟೆ, ಪುಣೆ ಪಟ್ಟಣ.

**ಪ್ರೇಮಮಹಿಳಾ ಸಮಾಜ ಬಳ್ಳಾರಿ:**—ಈ ಮಹಿಳಾ ಸಮಾಜದ ಪ್ರಥಮ ವಾರ್ಷಿಕೋತ್ಸವವು ಬಳ್ಳಾರಿಯ ಶ್ರೀಯುತ ವೆಂಕಟರಾಯರ ಪುರಸೌಧದಲ್ಲಿ ಈ ಪತ್ರಿಕಾ ಸಂಪಾದಕಿಯವರ ಅಧ್ಯಕ್ಷತೆಯಲ್ಲಿ ಕಳೆದ ತಿಂಗಳು ಜರಗಿತು. ಕಾರ್ಯದರ್ಶಿಯರಾದ ಶ್ರೀಮತಿ ರಂಗನಾಯಕಮ್ಮನವರು ವಾರ್ಷಿಕ ವರದಿಯನ್ನೋದಿದರು. ವರದಿಯಲ್ಲಿ ದಿವಂಗತ ದೇಶಬಂಧುಗಳ ಮರಣದ ಸ್ಮರಣಾರ್ಥ ಮಾಡಿದ ಅನ್ನದಾನ ಚಳಿಗಾಲದಲ್ಲಿ ಬಡವರಿಗೆ ಮಾಡಿದ ವಸ್ತ್ರದಾನ ಮೊದಲಾದವುಗಳು ಸ್ತೋತ್ರಾರ್ಹವು. ಈ ಸಮಾಜವು ಇನ್ನೂ ಬಾಲ್ಯಾವಸ್ಥೆಯಲ್ಲಿರುವುದರಿಂದ ಬಳ್ಳಾರಿಯ ಮಹಿಳೆಯರೆಲ್ಲರೂ ಇದನ್ನು ಅತ್ಯುತ್ತಮ ಸ್ಥಿತಿಗೆ ತಂದು ಸಂಘದ ಸದುದ್ದೇಶವನ್ನು ಸಾರ್ಥಕಗೊಳಿಸಬೇಕು. (ವರದಿಯು ತಲುಪಿದೆ. ಸ್ಥಳ ಸಂಕೋಚದಿಂದ ಪ್ರಕಟಿಸಲಾಗಲಿಲ್ಲ).

**ಕರ್ನಾಟಕ ಸಭೆ, ಮುಂಬಯಿ**—ಈ ಹೆಸರಿನದೊಂದು ಸಂಸ್ಥೆಯು ಮುಂಬೈ ಪಟ್ಟಣದಲ್ಲಿ ಕಾರ್ಯಾಂತರದಿಂದ ವಾಸಮಾಡುತ್ತಿರುವ ಕನ್ನಡಿಗರಿಂದ ಸ್ಥಾಪಿಸಲ್ಪಟ್ಟಿರು

ವುದು. ಮದರಾಸ್ ಕರ್ನಾಟಕ ಸಭೆಗೆ ಸುಪ್ರಸಿದ್ಧ ಡಾಕ್ಟರ್ ಯು. ರಾಮರಾಯರು ಅಧ್ಯಕ್ಷರಾಗಿರುವಂತೆ ಈ ಸಭೆಗೆ ಮುಂಬಯಿಯ ಪ್ರಸಿದ್ಧ ವೈದ್ಯರಾದ ಡಾಕ್ಟರ್ ನಾಡಿಗೇರವರು ಅಧ್ಯಕ್ಷರಾಗಿಯೂ, ಪ್ರಸಿದ್ಧ ವಕೀಲ ಶ್ರೀ. ಆರ್. ಎ. ಜಹದೀನ್ ಬಿ. ಎ. ಬಿ. ಎಲ್., ಯವರು ಉಪಾಧ್ಯಕ್ಷರಾಗಿಯೂ, ಬಿ. ಎಸ್. ತಂತ್ರಿಯವರು ಕಾರ್ಯದರ್ಶಿಗಳಾಗಿಯೂ ಇರುವರು. ಈ ಸಭೆಯು ಕೆಲವು ದಿನಗಳ ಕೆಳಗೆ ಕರ್ನಾಟಕ ಏಕೀಕರಣದ ವಿಷಯವನ್ನು ಅನುಮೋದಿಸಿ ಠರಾವಿಗೆ ತಂದ ವಿಷಯವು ನಮ್ಮ ಕಾರ್ಯಾಲಯಕ್ಕೆ ತಲಪಿದೆ. (ಸ್ಥಳ ಸಂಕೋಚದಿಂದ ಇಲ್ಲಿ ಪ್ರಕಟಿಸಲಾಗಲಿಲ್ಲ) ಮಹಾರಾಷ್ಟ್ರದ ಕೇಂದ್ರಸ್ಥಾನವಾದ ಮುಂಬೈ ಪಟ್ಟಣದಲ್ಲಿಯ ಕನ್ನಡಿಗರು ತಮ್ಮ ನಾಡಿನ ಪುರೋಭಿವೃದ್ಧಿಗಾಗಿ ಇಂತಹ ಸಂಸ್ಥೆಯನ್ನು ಸ್ಥಾಪಿಸಿ ನಡೆಸುತ್ತಿರುವ ವಿಷಯವು ಆವ ಕನ್ನಡಿಗರಿಗೆ ಸಂತಸವನ್ನುಂಟುಮಾಡದು? ಈ ಸಂಘದ ಉದ್ದೇಶವು ಸಫಲವಾಗಲೆಂದೂ, ಸಂಘವು ಚಿರಸ್ಥಾಯಿಯಾಗಿರಲೆಂದೂ ಹಾರೈಸುವೆವು.

**ಭಕ್ತಾಮೃತ:**—ಲೇಖಕರು: ಬಿ. ಭೀಮರಾಜು, ಚಿತ್ರದುರ್ಗ. ಇದು ಶ್ರೀಯುತ ಆದಿಪೋಡಿ ಸೋಮನಾಥರಾಯರು ತೆಲುಗಿನಲ್ಲಿ ಬರೆದಿರುವ ಸರ್ವಮಾನಸಿ ಶತಕದ ಕರ್ಣಾಟಕ ಅನುವಾದವು. ಸಮಗ್ರಕಾವ್ಯವೂ ಸೀಸಪದ್ಯಗಳಿಂದ ಬರೆಯಲ್ಪಟ್ಟಿದೆ. ಭಾಷೆಯು ಸರಳವಾಗಿ ಸಾಮಾನ್ಯ ಜನರಿಗೂ ಸುಲಭವಾಗಿ ಅರ್ಥವಾಗುವಂತಿದೆ. ಪ್ರಪಂಚದ ಎಲ್ಲಾ ಜನಾಂಗಗಳಲ್ಲಿ ಪ್ರಸಿದ್ಧರಾದ ತತ್ವಜ್ಞಾನಿಗಳ ಹಾಗೂ ದೇಶಸೇವಕರ ಜೀವನ ರಹಸ್ಯದ ಲಲಿತಪ್ರವಾಹವೇ ಭಕ್ತಾಮೃತವು. ಈ ವಿಧವಾದ ನೂತನ ಭಾವಗಳಿಂದ ತುಂಬಿದ ಸರಳವಾದ ಕಾವ್ಯಗಳ ಅಭಾವವು ಕನ್ನಡದಲ್ಲಿ ಬಹಳವಿರುವುದು. ಅನುವಾದಕರ್ತರಾದ ಕರ್ಣಾಟಕಾಂಧ್ರ ಕವಿ ಶ್ರೀಯುತ ಭೀಮರಾಜುಯವರು ಕಾವ್ಯವನ್ನು ಕನ್ನಡಿಸಿ, ನಮ್ಮ ನೆರೆಯ ನಾಡಿನವರಾದ ತೆಲುಗರ ಕಾವ್ಯಾಭಿರುಚಿಯು ಯಾವ ಕಡೆಯಿರುವುದೆಂದು ಕನ್ನಡಿಗರಿಗೆ ತೋರಿಸಿರುವುದೊಂದು ಸಂತೋಷದ ಸುದ್ದಿ. ವಿದ್ಯಾರ್ಥಿಗಳೂ, ಕಾವ್ಯಪ್ರಿಯರೂ ಗ್ರಂಥವನ್ನು ಆದರಿಸುವರೆಂದು ನಂಬಿದ್ದೇವೆ. ಪುಸ್ತಕವು ಬೆಂಗಳೂರು ಅಕ್ಕಿಪೇಟೆ ಚೌಕದಲ್ಲಿರುವ ಮಾಡಲ್ ಮುದ್ರಾಕ್ಷರಶಾಲೆಯಲ್ಲಿ ಮುದ್ದಾಗಿಯೂ, ಶುದ್ಧವಾಗಿಯೂ ಮುದ್ರಿಸಲ್ಪಟ್ಟಿದೆ. ಬೆಲೆ ೮ ಆಣೆಗಳು ಮಾತ್ರ.

|| ಶ್ರೀ ||

# ಸರಸ್ವತೀ

| ಸಂಪುಟ ೫. | ಏಪ್ರೈಲ್ ೧೯೨೬ | ಸಂಚಿಕೆ ೧೨. |
|---|---|---|


## ಕ್ಷಯ ಸಂವತ್ಸರವು

---

### ನಿವೇದನ.



ಕಲ ರಕ್ಷಕನಾದ, ಅವ್ಯಾಜಕರುಣಾಮೂರ್ತಿಯಾದ ಭಗವಂತನ ಕೃಪಾ ಕಟಾಕ್ಷದಿಂದಲೂ, ಕರ್ನಾಟಕ ಸೋದರ ಸೋದರಿಯರ ಉದಾರಪೋಷಕತ್ವದಿಂದಲೂ ಸರಸ್ವತಿಯು ೫ ವರ್ಷಗಳನ್ನು ಕಳೆದು ಈಗ ೬ನೆಯ ವರ್ಷಕ್ಕೆ ತೊಡಗಿರುವಳು. ಇಷ್ಟು ದಿವಸವೂ ಯುಕ್ತಾಯುಕ್ತ ಪರಿಜ್ಞಾನವಿಲ್ಲದೆ ಕೇವಲ ಹಸುಳೆಯಾಗಿದ್ದ ಈ ಬಾಲಕಿಯು ಈಗ ತನ್ನ ಕರ್ತವ್ಯಕಾರ್ಯಗಳ ಜವಾಬ್ದಾರಿಯನ್ನು ತಿಳಿದವಳಾದಳು. ಇಷ್ಟು ದಿನವೂ ಇವಳನ್ನು ಪೀಡಿಸುತ್ತಿದ್ದ ಬಾಲಗ್ರಹಾದಿ ರೋಗಗಳು ಮುಂದಿವಳನ್ನು ಬಾಧಿಸದಿರಬೇಕೆಂದು ಜಗತಿಯನ್ನು ಪ್ರಾರ್ಥಿಸುವೆವು. ಪತ್ರಿಕಾಭಿಮಾನವಿಲ್ಲದ ಈ ದೇಶದಲ್ಲಿ—ಅದರಲ್ಲೂ ಕರ್ನಾಟಕದಲ್ಲಿ ಒಂದು ಪತ್ರಿಕೆಯನ್ನು ನಡೆಸುವುದೆಂದರೆ ಇರತಕ್ಕ ಕಷ್ಟನಿಷ್ಠೂರಗಳನ್ನು ವಾಚಕರು ಮನಗಂಡೇ ಇರುವರು. ಪತ್ರಿಕೆಯು ಕ್ರಮವಾಗಿ ನಡೆಯಬೇಕಾದರೆ ಸಂಪಾದಕರು ಶ್ರೀಮಂತರಾಗಿರಬೇಕು; ಅಥವಾ ಧನವಂತರೂ, ಭಾಷಾಭಿಮಾನಿಗಳೂ ಪತ್ರಿಕೆಗೆ ಪೋಷಕರಾಗಿಯೂ, ಚಂದಾದಾರರಾಗಿಯೂ ಇರತಕ್ಕದ್ದು ಅತ್ಯಾವಶ್ಯಕವು. ಕಡಮೆ ಜನಸಂಖ್ಯೆಯುಳ್ಳ ಇಂಗ್ಲೆಂಡಿನಲ್ಲಿ ಸ್ತ್ರೀಯರ ಅಭಿವೃದ್ಧಿಗೆಂದೇ ಅಸಂಖ್ಯಾತ ಪತ್ರಿಕೆಗಳು ನಡೆಸಲ್ಪಡುತ್ತಿರುವವು. ಆದರೆ ನಮ್ಮ ಭರತಖಂಡದಲ್ಲಿ ಸ್ತ್ರೀಯರಿಗೆ ಸಂಬಂಧಪಟ್ಟ ಪತ್ರಿಕೆಗಳೇ ಅತಿ ವಿರಳ. ಏಕೆಂದರೆ-ಪತ್ರಿಕಾ ವಾಚನಾಭಿರುಚಿಯು ನಮ್ಮಲ್ಲಿಲ್ಲ. ವಿದ್ಯಾಭ್ಯಾಸದ ಸೋಂಕೇ

ಅನೇಕ ಕಡೆ ಇಲ್ಲವೆಂದಮೇಲೆ ವಾಚನಾಭಿರುಚಿಯೆಲ್ಲಿಂದ ಬರಬೇಕು! ವಾಚನಾಭಿರುಚಿಯು ದೇಶಾಭಿಮಾನದೊಂದಂಗವೆಂದರೂ ಸಲ್ಲುವುದು. ಮಾತೃದೇಶದ ಅಭಿವೃದ್ಧಿಯನ್ನು ಕೋರತಕ್ಕವರು, ಸ್ತ್ರೀಯರ ಪುರೋಭಿವೃದ್ಧಿಯನ್ನು ಬಯಸತಕ್ಕವರು ಪ್ರತಿಯೊಬ್ಬರೂ ತಾವು ಮಾತ್ರ ಚಂದಾದಾರರಾಗುವುದಲ್ಲದೆ, ತಮ್ಮ ಸೋದರ ಸೋದರಿಯರನ್ನೂ ಚಂದಾದಾರರಾಗುವಂತೆ ಪ್ರೇರೇಪಿಸಿ ಪತ್ರಿಕೆಯು ಮತ್ತಿಷ್ಟು ಉತ್ತಮ ಮತ್ತು ಉನ್ನತರೀತಿಯಿಂದ ನಡೆಯುವಂತೆ ಮಾಡಬೇಕೆಂದು ವಿನಯದಿಂದ ಪ್ರಾರ್ಥಿಸುವೆವು. ಪ್ರವಾಸದಲ್ಲಿದ್ದುದರಿಂದಲೂ, ಅನಾರೋಗ್ಯದ ದೆಸೆಯಿಂದಲೂ, ಬೇರೊಬ್ಬ ಸಹಾಯಕರಿಲ್ಲದ್ದರಿಂದಲೂ ಪತ್ರಿಕೆಯು ಸ್ವಲ್ಪ ಅಕ್ರಮವಾಗಿ ನಡೆದರೂ ಚಂದಾದಾರರಿಗೆ ಹನ್ನೆರಡು ಸಂಚಿಕೆಗಳು ತಲಪಿವೆ. ಇನ್ನುಮುಂದೆ ಇಂತಹ ಅಕ್ರಮವು ನಡೆಯದಂತೆ ನೋಡಿಕೊಳ್ಳಲಾಗುವುದು. ಕರ್ನಾಟಕದ ಪ್ರತಿಯೊಬ್ಬ ಸೋದರಿಯೂ ತನ್ನನ್ನು ಪೋಷಿಸಬೇಕೆಂದು ಸರಸ್ವತಿಯು ಪ್ರಾರ್ಥಿಸುವಳು.

ಮುಂದಿನ ಸಂಪುಟದಿಂದ ಕೆಲವು ಬದಲಾವಣೆಗಳನ್ನು ಮಾಡಲು ಯತ್ನಿಸಿದೆ. ಕುಸುಮಕುಂಜ, ಗೃಹವಿಜ್ಞಾನ, ವನಿತಾವಿನೋದ, ಮುತ್ತಿನಮಾಲೆ, ಚಾರುಚರಿತಾವಳಿ, ಸಾಹಿತ್ಯಸರೋಜ, ಕನ್ಯಾಕೈಪಿಡಿ, ಸ್ತ್ರೀಸಂಸಾರ ಎನ್ನುವ ಶಿರೋಲೇಖಗಳನ್ನು ಪ್ರಾರಂಭಿಸಲಿರುವೆವು. ಇನ್ನು ೪೦ ಪುಟಗಳಷ್ಟು ಓದತಕ್ಕ ಭಾಗವನ್ನೇ ಕೊಡಲಿರುವೆವು. ಕೊಚ್ಚಿಯ ಲೆಜಿಸ್ಲೇಟಿವ್ ಕೌನ್ಸಿಲ್ ಸದಸ್ಯರಾದ ಶ್ರೀಮತಿ ಮಾಧವಿ ಅಮ್ಮನವರೂ, ಮದ್ರಾಸ್ 'ಚಿಂತಾಮಣಿ'ಯ ಸಂಪಾದಕರಾದ ಶ್ರೀಮತಿ ಬಾಲಮ್ಮಾಳ್‌ಯವರೂ, ಪ್ರೇಮಾಯತನದ ಪಂಡಿತ ತಾರಾನಾಥ ಯೋಗಿಗಳವರೂ, ಶ್ರೀಯುತರುಗಳಾದ ದೇವುಡು ನರಸಿಂಹಶಾಸ್ತ್ರಿ, ಎಂ.ಎ., ಯವರೂ, ವಿಶ್ವಕರ್ನಾಟಕದ ಸಂಪಾದಕರಾದ ಶ್ರೀ ತಿರುಮಲೆ ತಾತಾಚಾರ್ಯ ಶರ್ಮರವರೂ, ರಂಗಭೂಮಿಯ ಸಂಪಾದಕರಾದ ದತ್ತಾತ್ರೇಯ ಕೃಷ್ಣ ಭಾರದ್ವಾಜರೂ, ಜಯಕರ್ನಾಟಕದ ಸಂಪಾದಕರಾದ ಆಲೂರ್ ವೆಂಕಟರಾವ್, ಬಿ.ಎ., ಎಲ್‌ಎಲ್.ಬಿ., ಯವರೂ, ಶ್ರೀಯುತ ಗವಾನಂದ ಕೆರೋಡಿ ಸುಬ್ಬರಾವ್ ಬಿ.ಎ., ಯವರೂ, ಪ್ರಸಿದ್ಧನಟ ಟಿ.ಪಿ. ಕೈಲಾಸಂ ಯವರೂ, ಶ್ರೀಮತಿ ಟಿ. ಕನಕಲಕ್ಷ್ಮಮ್ಮ, ಎಂ. ಎ., ಯವರು, ಶ್ರೀಯುತ ಆರ್. ರಾಘವೇಂದ್ರರಾವ್ ಚಾಕಲಬ್ಬಿ, ಬಿ.ಎ., ಬಿ.ಎಲ್., ಗುಲ್ಬರ್ಗ, ಶ್ರೀಯುತ ಮಾಸ್ತಿ ವೆಂಕಟೇಶೈಂಗಾರ್ ಎಂ.ಎ., ಯವರು, ಶ್ರೀಯುತ ವಿ.ಬಿ. ಪುರಾಣಿಕ ಬಿ.ಎ., ಯವರು ಲೇಖನಗಳನ್ನು ಬರೆಯಲೊಪ್ಪಿರುವರು. ಸಹೋದರಿಯರನೇಕರು ಲೇಖನಗಳನ್ನು ಬರೆದುಕೊಡುವುದಾಗಿ ವಾಗ್ದಾನಮಾಡಿರುವರು. ಉತ್ತರದೇಶದ ಕೆಲವು

ಪ್ರಸಿದ್ಧ ಹಿಂದೀ ಪತ್ರಿಕೆಗಳ ಅತ್ಯುತ್ತಮವಾದ ಸ್ತ್ರೀ ಸಂಬಂಧ ಲೇಖನಗಳನ್ನು ಪರಿವರ್ತಿಸಿ ಹಾಕುವ ಏರ್ಪಾಡುಮಾಡಲಾಗಿದೆ. ಸಾಧ್ಯವಾದಷ್ಟು ಸಚಿತ್ರವಾಗಿಯೇ ಪತ್ರಿಕೆಯು ನಡೆಸಲ್ಪಡುವದು. ಮೇಲೆ ಹೇಳಿದ ಲೇಖನಗಳಲ್ಲದೆ 'ಸುಖಲತೆ' ಎನ್ನುವದೊಂದು ಕಾದಂಬರಿಯೂ, 'ಷಹಜಹಾನ್' ಎನ್ನುವುದೊಂದು ನಾಟಕವೂ ಕ್ರಮಶಃ ಪ್ರಕಟಿಸಲ್ಪಡುವವು. ಚಂದಾದಾರರೂ ಪೋಷಕರೂ ತಮ್ಮ ಉದಾರ ಆಶ್ರಯದಿಂದ ಸರಸ್ವತಿಯು ಮುಂದಿನ ಬೆಳವಳಿಗೆಗೆ ಪಾತ್ರರಾಗಬೇಕೆಂಬುದು ನಮ್ಮ ವಿನಂತಿ.

ಶುಭವಾದ ಕ್ಷಯಸಂವತ್ಸರವು ಈಗ ನಮ್ಮ ಸಕಲ ಚಂದಾದಾರರಿಗೂ ಶುಭಸಂದೇಶವನ್ನು ಬೀರುತ್ತ ಬಂದಿರುವುದು. ಹೆಸರು ಕೇಳಲು ಕ್ರೂರವಾಗಿದ್ದಲ್ಲಿ ಮೂರ್ತಿಯು ಸೌಮ್ಯ ಮತ್ತು ಆನಂದದಾಯಕವಾಗಿರುವುದು ಸಹಜವಷ್ಟೆ! ಅದರಂತೆ ಹೆಸರು ಕ್ಷಯವಾಗಿದ್ದರೂ, ಫಲಗಳು ಅಕ್ಷಯವಾಗಿರುವುವೆಂಬುದು ನಮ್ಮ ನಂಬುಗೆ. ಈ ನೂತನವರ್ಷವು ರಾಜವರ್ಗಕ್ಕೂ, ಪ್ರಜಾಕೋಟಿಗೂ, ಈ ಪತ್ರಿಕೆಯ ಪೋಷಕರು ಚಂದಾದಾರರು, ಲೇಖಕರು-ಸರ್ವರಿಗೂ ಶುಭವನ್ನುಂಟುಮಾಡಲೆಂದು ಪ್ರಾರ್ಥಿಸುವೆವು.

ಜಗತಿಯು ಸರ್ವರಿಗೂ ಸರ್ವ ಮಂಗಳವನ್ನೂ ಉಂಟುಮಾಡಲಿ;
ಓಂ ಶುಭಂ ಶುಭಂ ಶುಭಂ.

# ಕುಸುಮಕುಂಜ.

## ಕೊರತಿ.

—:೧:—

ಜೋಳಿಗೆಯು ಬಗಲಲ್ಲಿ ಕರದೆ ಮುಕ್ತಾಹಾರ
ತೋಳಿನಲಿ ತೂಗಾಡುವಚ್ಚ ಪವಳಗಳು
ಕೇಳಿ ಮನಮೆಚ್ಚಿಸುವ ಬಿನದದಿನಿಕೂಗೆಸೆಯೆ
ಮೇಲಾದುದಿದು ನಿಮ್ಮ ವದನವನು ತೋರುವುದು
ಕನ್ನಡಿಯೆ ಕನ್ನಡವು ಕೊಳ್ಳಿರೆಂದು
ಚನ್ನೆ ಸರಸತಿ ಕೊರತಿ ವೇಷದಲಿ ಬಂದಿಹಳು

—: ೨ :—

ಹಿಂದಿಯಾ ಸಂದರತೆ ಸಂಸ್ಕೃತದ ಸೌಷ್ಠವವು
ಒಂದಾಗಿ ತೆಗೆದೊಂದು ಮಣಿಯು ತೆರದೆ
ಹಿಂದಿನಾರ್ಯ ಸಂಸ್ಕೃತಿಯನಿಂದು ನಿಮ್ಮೆಡೆಗೆ ಬೇ-
ರೊಂದು ರೂಪವನಿತ್ತು ತಂದು ತೋರುವಚ್ಚರಿಯು
ಕನ್ನಡಿಯೆ ಕನ್ನಡವು ಕೊಳ್ಳಿರೆಂದು
ಚನ್ನೆ ಸರಸತಿ ಕೊರತಿ ವೇಷದಲಿ ಬಂದಿಹಳು

—: ೩ :—

ವಂಗ ಮಹಾರಾಷ್ಟ್ರಾದಿ ಸುತರೆನ್ನ ಬಳಿಗೈದಿ
ಭೃಂಗಗಳ ತೆರದೆ ಚರಣಾಬ್ಜ ರಜವ
ಸಿಂಗರಿಸಿಕೊಳ್ಳುವರು ಶಿರದೆ ಕನ್ನಡಿಗ ನೀಂ
ಭಂಗಗೈವೆಯೊ ಮಮತೆಯಿಂದೆ ಬರೆ ನಿನ್ನೆಡೆಗೆ
ಕನ್ನಡಿಯೆ ಕನ್ನಡವು ಕೊಳ್ಳಿರೆಂದು
ಚನ್ನೆ ಸರಸತಿ ಕೊರತಿ ವೇಷದಲಿ ಬಂದಿಹಳು

—: ೪ :—

ತೊರೆದು ಬೀಣೆಯನುಳಿದು ಚಲ್ವ ಮಣಿಮುಕುಟವನು
ಧರಿಸದೆ ಸುರತ್ನದಾಭರಣಗಳನು
ಮರುಕದಲಿ ನಿಮಗೆ ಶುಭವಾದವನು ಮಾಡುತೀ
ಪರಿಯು ವೇಷದೆ ನಿಮ್ಮ ಬಾಗಿಲಲಿ ನಿಂದಿಹೆನು
ಕನ್ನಡಿಯೆ ಕನ್ನಡವು ಕೊಳ್ಳಿರೆಂದು
ಚನ್ನೆ ಸರಸತಿ ಕೊರತಿ ವೇಷದಲಿ ಬಂದಿಹಳು

—: ೫ :—

ಸಕಲ ವಸ್ತುಗಳಿರ್ದೊಡೇನು ಮನೆಯೊಳಗೆಸೆವ
ಮುಕುರವೊಂದಿಲ್ಲದಿರೆ ಶೋಭಿಸುವುದೆ ?
ಅಕಳಂಕವಾದ ನಿಮ್ಮೀ ಮುಖದ ಚಲ್ವಿಕೆಯು
ಸುಕರವೇ ಕಾದಿಡಲು ಪರರ ದೋಷಗಳಿಂದೆ ?
ಕನ್ನಡಿಯೆ ಕನ್ನಡವು ಕೊಳ್ಳಿರೆಂದು
ಚನ್ನೆ ಸರಸತಿ ಕೊರತಿ ವೇಷದಲಿ ಬಂದಿಹಳು

—:೬:—

ಅಲಸತೆಯ ಮಾಲಿನ್ಯವನ್ನು ಕಳೆದುವ್ಯಮದ
ಬಲುಮೆಯೊಂದುಬ್ಬರವನಿತ್ತು ಮೊಗಕೆ
ನಲಿಸಿ "ನಾವ್ ಕನ್ನಡಿಗರೆ"ಂಬುದಕೆ ಗುರುತಾಗಿ
ಚಲುವ ಬೊಟ್ಟೊಂದ ನಿಡಲಾವಗುಂ ಅಣಿಯಿಸಿಪ
ಕನ್ನಡಿಯ ಕನ್ನಡವು ಕೊಳ್ಳಿರೆಂದು
ಚನ್ನೆ ಸರಸತಿ ಕೊರತಿ ವೇಷದಲಿ ಬಂದಿಹಳು

ಭಾರತೀಸುತ

---

## ಪ್ರಾಚೀನ ಭಾರತವರ್ಷದ ರಮಣಿಯರು.

ಆರ್ಯಮಹಿಳೆಯರು ವಿದುಷಿಯರಾಗಿಯೂ, ವೇದೋಪಾಧ್ಯಾಯಿನಿಯರಾಗಿಯೂ ಶಾಸ್ತ್ರಪ್ರಕಾಶಕರಾಗಿಯೂ, ಯೋಗ ಮತ್ತು ಪವಿತ್ರ ಕರ್ತವ್ಯಗಳಲ್ಲಿ ಭಾಗಸ್ಥರಾಗಿಯೂ ಇದ್ದರು. ಅವರು ರಾಜಾಸ್ಥಾನದಲ್ಲಿ ಗೌರವಿಸಲ್ಪಡುತ್ತಿದ್ದರು. ನ್ಯಾಯಶಾಸ್ತ್ರದ ಪಾಠ ಪುಸ್ತಕಗಳನೇಕ ಇವರಿಂದ ಬರೆಯಲ್ಪಟ್ಟದ್ದುವು. ಇವರು ಸಾರಥಿಗಳಾಗಿಯೂ, ಯೋದ್ಧೆಯರಾಗಿಯೂ, ಕವಯಿತ್ರಿಗಳಾಗಿಯೂ, ಆಸ್ಥಾನದ ಸದಸ್ಯರಾಗಿಯೂ ಇರುತ್ತಿದ್ದರು.

ಹಿಂದುಗಳ ಧ್ಯೇಯವು ಪಾಶ್ಚಾತ್ಯ ಸುಪ್ರಸಿದ್ಧ ಕವಿಯಾದ "ಟೆನ್ನಿಸನ್" ಮಹಾಕವಿವಾಕ್ಯದ ಪ್ರತಿಚ್ಛಾಯೆಯಾಗಿದೆ. A woman's cause is Man's—if she be small, slight natured, miserable, how shall men grow? ಸ್ತ್ರೀಯ ಧರ್ಮವೇ ಪುರುಷನ ಧರ್ಮವು; ಅವಳು ಚಿಕ್ಕವಳೂ, ಅಲ್ಪಪ್ರಕೃತಿಯೂ, ನೀಚಳೂ ಆಗಿದ್ದರೆ ಪುರುಷನು ಮಾತ್ರ ಹೇಗೆ ದೊಡ್ಡವನಾಗಿ ಬೆಳೆದಾನು? ಪ್ರಾಚೀನ ಭಾರತವರ್ಷದ ಮಹಾತ್ಮರು ಈ ವಾಕ್ಯದ ಅರ್ಥವನ್ನು ಗಣನೆಗೆ ತಂದು ಅನುಭವಕ್ಕೆ ತಂದಿದ್ದರು. ಆದರೆ ಈಗ? ವೇದಗಳ ಕಾಲದಲ್ಲಿ ಸ್ತ್ರೀಯರು ತಾವು ಆರ್ಯ ಸಂಗತಿಯವರೆಂದು ಸಾರಿಹೇಳುತ್ತಿದ್ದುದು ಮಾತ್ರವಲ್ಲದೆ ಧಾರಾಳವಾಗಿ ಆ ಕಾಲದ ಸಾಮಾಜಿಕ ಸುಧಾರಣೆಯಲ್ಲಿ ಮಗ್ನೆಯರಾಗಿದ್ದರು. ಅವರು ಕೆಲವು ವೇದಗೀತಗಳ ರಚನಾಕಾರ್ಯದಲ್ಲಿ ಪುರುಷರಿಗೆ ಸಹಾಯಕರಾಗಿದ್ದರು. ಋಗ್ವೇದದ ಪ್ರಾರಂಭಪದ್ಯಗಳನೇಕಗಳಲ್ಲಿ ಕವಿತೆಯ ಮತ್ತು ಕವಿಗಳ ಹೆಸರುಗಳು ವಿಶೇಷವಾಗಿ ಬರೆ

ಯಲ್ಪಟ್ಟಿವೆ. ಹೀಗೆ ಋಗ್ವೇದದ ೫ನೆಯ ಅಧ್ಯಾಯದಲ್ಲಿ ಅತ್ರಿವಂಶದಲ್ಲಿ ಹುಟ್ಟಿದ 'ವಿಶ್ವವರಾ' ಎಂಬ ಹೆಸರುಳ್ಳ ರಮಣಿಯಿಂದ ಒಂದೆರಡು ಋಕ್ಕುಗಳು ರಚಿಸಲ್ಪಟ್ಟಿರುವುದಾಗಿ ತಿಳಿದುಬರುವುದು. ಅಗಸ್ತ್ಯಋುಷಿಯ ಪತ್ನಿಯಾದ ಲೋಪಾಮುದ್ರೆಯೂ ಕವಯಿತ್ರಿಯಾಗಿದ್ದಳು. ಲೋಪಾಮುದ್ರೆಯ ಚರಿತ್ರೆಯು ರಾಮಾಯಣದಲ್ಲಿನ ಪ್ರತಿಯೊಬ್ಬ ರಮಣಿಗೂ ಉದಾಹರಣೆಯಾಗಿ ಹೇಳಲ್ಪಟ್ಟಿರುವುದಲ್ಲದೆ ಅವಳು ವಿದ್ವತ್ತಿನಲ್ಲಿಯೂ, ದಾಂಪತ್ಯ ಧರ್ಮರಕ್ಷಣೆಯಲ್ಲಿಯೂ ಇತರರಿಗೆ ಮೇಲ್ಪಂಙ್ತಿಯಾಗಿದ್ದಳೆಂದು ಕಂಡುಬರುವದು. ಲೋಪಾಮುದ್ರೆಯು ಋಗ್ವೇದದ ೧೭೯ನೆಯ ಋಕ್ಕನ್ನು ರಚಿಸಿದಳು. 'ಅಂಬರಿ' ಯೆನ್ನುವ ಮಹಾತ್ಮನ ಕುಮಾರಿಯು ರಚಿಸಿದ ಮತ್ತೊಂದು ಋಕ್ಕು ವೇದಾಂತಶಾಸ್ತ್ರದ ಮುಖ್ಯಾರ್ಥಗಳನ್ನೆಲ್ಲ ಒಳಗೊಂಡಿರುವುದೆಂದು ನಿಶ್ಚೈಸಲ್ಪಟ್ಟಿದೆ. ಬೃಹದಾರಣ್ಯಕ ಉಪನಿಷತ್ತಿನಲ್ಲಿ "ಮೈತ್ರೇಯಿ"ಯ ಚರಿತ್ರೆಯಿದೆ.

ಭೌದ್ಧಸ್ತ್ರೀಯರು ಸನ್ಯಾಸದೀಕ್ಷೆಯನ್ನು ವಹಿಸುವ ಅಧಿಕಾರವನ್ನು ಪಡೆದಿದ್ದರು. ಅವರಲ್ಲನೇಕರು ವಿದ್ಯಾವತಿಯರಾಗಿ ತಮ್ಮ ಮತವನ್ನು ಹರಡಲು ಬಹಳ ದೂರದೇಶಕ್ಕೆ ಹೋಗುತ್ತಿದ್ದರು. ಅಶೋಕನ ಕಾಲದ ಸಂಗಮಿತ್ರನ ದಾಯಾದಿಯೊಬ್ಬಳು ಸಿಂಹಳದ್ವೀಪಕ್ಕೆ ಹೋಗಿ ಅಲ್ಲೊಂದು ಕಲಾಶಾಲೆಯನ್ನು ಸ್ಥಾಪಿಸಿದಳೆಂದೂ, ಅಲ್ಲಿನ ಮಹಿಳೆಯರನೇಕರು ಈ ಕಲಾಶಾಲೆಯಲ್ಲಿ ಅಭ್ಯಸಿಸಿದರೆಂದೂ ತಿಳಿದುಬರುತ್ತದೆ. ಮತ್ತು ಮಂಡನಮಿಶ್ರನ ಸತಿಯಾದ 'ಭಾರತಿ' ಎಂಬಾಕೆಯ ಚರಿತ್ರೆಯ ವಿಷಯವಾಗಿ ಅರಿಯದವರು ಅತಿ ವಿರಳ. ಮಂಡನಮಿಶ್ರ ಮತ್ತು ಶಂಕರಾಚಾರ್ಯರು ಸಮಕಾಲೀನರಾಗಿಯೂ ಮತ್ತು ಸಮಾನ ಪಾಂಡಿತ್ಯವುಳ್ಳವರಾಗಿಯೂ ಇದ್ದರು. ಶಂಕರಾಚಾರ್ಯನು ತಾನು ಶಾಸ್ತ್ರವಾದದಲ್ಲಿ ಗೆದ್ದರೆ ಮಂಡನಮಿಶ್ರನ ಶಿಷ್ಯನಾಗುವುದಾಗಿಯೂ, ಮಂಡನಮಿಶ್ರನು ತಾನು ಸೋತರೆ ಸಂಸಾರವನ್ನು ತ್ಯಜಿಸಿ ಶಂಕರನ ಶಿಷ್ಯನಾಗುವುದಾಗಿಯೂ ಶಪಥ ಮಾಡಿಕೊಂಡರು. ತಮ್ಮ ವಾದಕ್ಕೆ ಆ ಕಾಲದ ಪಂಡಿತಶಿರೋಮಣಿಗಳಲ್ಲಿ ಪಕ್ಷಪಾತವಿಲ್ಲದವಳೆಂದೂ ಹೆಚ್ಚಾದವಳೆಂದೂ ಗಣಿಸಲ್ಪಟ್ಟಿದ್ದ ಮಂಡನಮಿಶ್ರನ ಸತಿಯಾದ ಭಾರತಿಯನ್ನೇ ನ್ಯಾಯಕರ್ತ್ರಿಯನ್ನಾಗಿ ಏರ್ಪಡಿಸಿಕೊಂಡರು. ಅನೇಕ ದಿನಗಳವರೆಗೂ ಇಬ್ಬರಿಗೂ ವಾದವುಂಟಾಗಲು ಕೊನೆಗೆ ಮಂಡನಮಿಶ್ರನು ಸೋತುಹೋದನೆಂದು ಭಾರತಿಯು ಹೇಳಲು ಮೊದಲಿನ ಶಪಥದಂತೆ ಮಂಡನಮಿಶ್ರನು ಸಂಸಾರ ತ್ಯಾಗಮಾಡಿ ಶಂಕರನ ಶಿಷ್ಯನಾದನು. ಭಾರತಿಯೂ ಶಂಕರಾಚಾರ್ಯನಿಗೆ ಶಿಷ್ಯೆಯಾದಳು. ಭಾರತಿಯು ಸರಸ್ವತಿಯ ಅವತಾರವೆಂದು ಹೇಳುವರು. ಅದು ಹೇಗಾದರೂ ಇರಲಿ; ಶಂಕರಾಚಾರ್ಯನ ಅನೇಕ ದಿಗ್ವಿಜಯಗಳಲ್ಲಿ ಆತನಿಗೆ

ಇವಳು ಸಹಾಯಕಳಾಗಿದ್ದಳೆಂಬುದು ಮಾತ್ರ ನಿಶ್ಚಯವು. ಹಿಂದೂ ವಿದ್ಯಾರ್ಥಿಗಳಿಗೆ ಭಾಸ್ಕರಾಚಾರ್ಯ (ಗಣಿತಶಾಸ್ತ್ರಸ್ಥಾಪಕ)ನ ಮಗಳಾದ ಲೀಲಾವತಿಯ ಚರಿತ್ರೆಯು ಹೊಸದಲ್ಲ. ಅವಳು ಚಿಕ್ಕಂದಿನಲ್ಲಿಯೇ ವಿಧವೆಯಾಗಿದ್ದರೂ ತಂದೆಯು ಗಣಿತ ಮತ್ತು ವೇದಾಂತಶಾಸ್ತ್ರದಲ್ಲಿ ನಿಪುಣಳನ್ನಾಗಿ ಮಾಡಿದನು. ಲೀಲಾವತಿ ಯೆನ್ನುವುದೊಂದು ಮಹಾಗ್ರಂಥವೇ ಅವಳ ಪಾಂಡಿತ್ಯದ ಚಿಹ್ನೆಯಾಗಿ ಇಂದೂ ಇದೆ. ಇದರಿಂದ ಅವಳು ಎಷ್ಟೋ ಗೌರವಿಸಲ್ಪಡುತ್ತಿದ್ದಳೆನ್ನುವದು ಕಂಡುಬರುವುದು. ನಾವು ನಮ್ಮ ದೇಶದ ವಿಧವೆಯರನ್ನಾವ ದುಸ್ಥಿತಿಯಟ್ಟಿದ್ದೇವೆ?

'ವರಾಹಮಿಹಿರ'ಎನ್ನುವ ಜ್ಯೋತಿಶ್ಶಾಸ್ತ್ರಜ್ಞನು ಜ್ಯೋತಿಶ್ಶಾಸ್ತ್ರದ ಮೂಲವನ್ನು ಸಿಂಹಳದ್ವೀಪದ ಆದಿಪುರುಷರಿಂದರಿತವಳೂ, ಮತ್ತು ವಿಜ್ಞಾನದ ವಿಷಯವನ್ನರಿತವಳೂ ಆದ 'ಖಾನ' ಎಂಬ ರಮಣಿಯಿಂದ ಕಲಿತನು. ಕೊನೆಗೆ ಇಬ್ಬರೂ ತಮ್ಮ ತಮ್ಮ ಅನ್ವೇಷಣವನ್ನು ಪೂರೈಸಿದನಂತರ ಒಬ್ಬರನ್ನೊಬ್ಬರು ಮದುವೆಯಾದರು. ಖಾನಳ ವಿದ್ಯಾನೈಪುಣ್ಯ ಮತ್ತು ಜ್ಯೋತಿಶ್ಶಾಸ್ತ್ರನೈಪುಣ್ಯದ ವಿಷಯವಾಗೆಷ್ಟೋ ಕಥೆಗಳು ಹೇಳಲ್ಪಟ್ಟಿವೆ. ಒಂದುದಿನ ಸಾಯಂಕಾಲ ವಿಕ್ರಮಾದಿತ್ಯನು ತನ್ನ ಗೆಳೆಯನಾದ ವರಾಹನೊಡನೆ ಉದ್ಯಾನವನದಲ್ಲಿ ಸಂಚರಿಸುತ್ತಿರುವಾಗ ಆಕಾಶದಲ್ಲೆಷ್ಟು ನಕ್ಷತ್ರಗಳಿವೆಯೆಂದು ವರಾಹನನ್ನು ಕೇಳಿದನು. ಪ್ರಶ್ನೆಗೆ ತಕ್ಕ ಉತ್ತರವನ್ನು ಕೊಡಲಾರದೆ ವರಾಹನು ತಬ್ಬಿಬ್ಬಾಗಿ ಮನೆಗೆ ಬಂದು ಚಿಂತಿಸುತ್ತಿರುವದನ್ನು ಕಂಡು ಪತ್ನಿಯಾದ ಖಾನಳು ಸ್ವಲ್ಪವೂ ಆಲಸ್ಯಮಾಡದೆ ಉತ್ತರ ಕೊಟ್ಟಿದ್ದನ್ನು ಕೇಳಿ ಸಭೆಗೆ ಬಂದು ತಿಳಿಸಿದನು. ವಿಕ್ರಮಾದಿತ್ಯನು ಬೆರಗಾಗಿ ನಕ್ಷತ್ರಗಳನ್ನು ಲೆಕ್ಕ ಮಾಡುವುದು ಹೇಗೆಂದು ವರಾಹನನ್ನು ಕೇಳಲು, ವರಾಹನು ಲಜ್ಜೆಯಿಂದ ನಕ್ಷತ್ರವನ್ನೆಣಿಸುವ ಯುಕ್ತಿಯು ತನಗೆ ತಿಳಿಯದೆಂದೂ, ತನ್ನ ಪತ್ನಿಯಾದ ಖಾನದೇವಿಯೆ ಹೇಳಿದವಳೆಂದೂ ಒಪ್ಪಿಕೊಂಡನು. ತನ್ನ ದೇಶದಲ್ಲಿ ಅಂತಹ ಗಣಿತಶಾಸ್ತ್ರನಿಪುಣಳಿರುವುದು ತನಗೊಂದು ಗೌರವವೆಂದು ರಾಜನು ಆನಂದಿತನಾಗಿ ಅವಳನ್ನು ತನ್ನ ಆಸ್ಥಾನಕ್ಕೆ ಹತ್ತನೆಯ ರತ್ನವಾಗಿ ಮಾಡಿದನು. ಕವಿರಾಜನಾದ ಭೋಜನ ಆಸ್ಥಾನದಲ್ಲಿ ಇಬ್ಬರು ವನಿತಾಮಣಿಯರು ಕವಿಶಿಖಾಮಣಿಗಳಲ್ಲಿ ಅಗ್ರಗಣ್ಯರಾಗಿದ್ದರು. ಅವರಲ್ಲೊಬ್ಬಳು ಕುಂಬಾರಳು; ಮತ್ತೊಬ್ಬಳು ರೈತಳು. ಇದರಿಂದ ವಿದ್ಯೆಗೆ ಯಾವ ಪ್ರಾಮುಖ್ಯವಾದ ಜಾತಿಯಾಗಲಿ ಕುಲವಾಗಲಿ ಅವಶ್ಯಕವಿಲ್ಲವೆಂದಾಯಿತು. ಮಹಾಭಾರತದಲ್ಲಿ ಪ್ರಧಾನರಾಜನ ಪುತ್ರಿಯಾದ 'ಸುಲಭಾ' ಎನ್ನುವ ಕನ್ಯೆಯ ವಿದ್ಯಾಪ್ರಾಪ್ತಿಗೆ ಜಗತ್ತಿನಲ್ಲೇ ಇರಲಿಲ್ಲವೆಂದು ಹೇಳಲ್ಪಟ್ಟಿದೆ. 'ಮಲಯವತಿ' ಯೆನ್ನುವ

ರಮಣಿಯು ದೂರ್ವಾಸಮಹಾಮುನಿಯ ಶಿಷ್ಯೆಯಾಗಿ ಅನೇಕ ಕಲೆಗಳನ್ನಭ್ಯಾಸಮಾಡಿ ತನ್ನನ್ನು ಮೀರಿಸಿದವರು ಯಾರೂ ಇಲ್ಲವೆಂದು ಹೆಸರುಗೊಂಡಿದ್ದಳೆಂದು ಸ್ಕಾಂದಪುರಾಣದಲ್ಲಿ ಹೇಳಲ್ಪಟ್ಟಿದೆ. ಶಕಸ್ಥಾಪಕನಾದ ಸುಪ್ರಸಿದ್ಧ ಶಾಲಿವಾಹನನ ಸತಿಯಾದ ಮಲಯವತಿ ಎಂಬ ಹೆಸರಿನ ಮತ್ತೊಬ್ಬ ರಮಣಿಯು ವ್ಯಾಕರಣ ಮತ್ತು ವಿಜ್ಞಾನ ಶಾಸ್ತ್ರಗಳನ್ನು ಸಂಪೂರ್ಣವಾಗಿ ಕಲಿತಿದ್ದಳೆಂದು ಕಂಡುಬರುತ್ತದೆ. ಕಥಾಸರಿತ್ಸಾಗರದಲ್ಲಿ ರಾಜಾ ಅನಂತದೇವನ ಮಡದಿಯಾದ ಸೂರ್ಯವತಿ ಯೆನ್ನುವ ನಾರೀಮಣಿಯು ಸಕಲ ಕಲಾಕೋವಿದಳಾಗಿದ್ದಳೆಂದು ಕಂಡುಬರುವುದು. ಭಕ್ತವಿಜಯವಲ್ಲಿ ರಮಣಿಯರು ಕೇವಲ ಕವಿಗಳಾಗಿದ್ದುದು ಮಾತ್ರವಲ್ಲದೆ ರಸಾಯನಶಾಸ್ತ್ರ, ಅರ್ಥಶಾಸ್ತ್ರ, ಖನಿಜಶಾಸ್ತ್ರ ಇವುಗಳಲ್ಲಿಯೂ ಕೂಡ ನೈಪುಣ್ಯವನ್ನು ಹೊಂದಿದ್ದರೆಂದು ಹೇಳಿರುವುದು. ಮಧ್ಯಕಾಲದಲ್ಲಿ ಅಂದರೆ (ಕ್ರಿಸ್ತಶಕ ೮-೧೫ನೆಯ ಶತಾಬ್ದದಲ್ಲಿ) ಇಬ್ಬರು ರಮಣಿಯರು ಸಾಹಿತ್ಯದಲ್ಲಿ ಅತ್ಯದ್ಭುತ ಪಾಂಡಿತ್ಯವನ್ನು ಪಡೆದಿದ್ದರು. ೧೪ನೆಯ ಶತಮಾನದಲ್ಲಿ ರಾಜಾ ನರಸಿಂಹನ ಮೊಮ್ಮಗನ ಹೆಂಡತಿಯಾದ ಲಕ್ಷ್ಮೀದೇವಿಯು ವಿವಾದಚಂದ್ರ ಎನ್ನುವ ಗ್ರಂಥವನ್ನು ರಚಿಸಿದಳು. ಆ ಗ್ರಂಥವು ಈಗಲೂ ಮಿಥಿಲಾಪಟ್ಟಣದ ಮುಖ್ಯ ನ್ಯಾಯಾಧಾರಗ್ರಂಥವಾಗಿರುವದು. ಭರತಖಂಡದ ಇತರ ಪ್ರಾಂತ್ಯದ ಮಹಿಳೆಯರಿಗಿಂತ ಮಿಥಿಲಾ ಪಟ್ಟಣದ ರಮಣಿಯರಿಗೆ ಹೆಚ್ಚು ಅಧಿಕಾರವಿರುವುದಕ್ಕೆ ಕಾರಣವನ್ನು ಕಂಡು ಹಿಡಿಯುವುದು ಕಷ್ಟವಲ್ಲ. ಇಂಡಿಯದ ಅನೇಕ ಭಾಗಗಳಲ್ಲಿ ವಾಸವಾಗಿರುವ ಜನಗಳ ನ್ಯಾಯಗ್ರಂಥ (ಮದರಾಸಾಧಿಪತ್ಯವೂ ಸೇರಿದೆ) ವಾದ ಮಿತಾಕ್ಷರವೆನ್ನುವ ಗ್ರಂಥವು ಲಕ್ಷ್ಮೀದೇವಿಯೆನ್ನುವ ಮತ್ತೊಬ್ಬ ಮಹಿಳೆಯಿಂದ ರಚಿಸಲ್ಪಟ್ಟದ್ದು. ಈ ಗ್ರಂಥದ ವಿಮರ್ಶೆಯು ಬಾಲಂಭಟ್ಟ ಎಂಬ ಹೆಸರಿನಿಂದ ಕರೆಯಲ್ಪಟ್ಟಿದೆ. ಇದರಲ್ಲಿ ನಂದಪಂಡಿತನ ನ್ಯಾಯಶಾಸ್ತ್ರದ ಗುಣದೋಷವಿಮರ್ಶೆಯು ಅದೇ ಲಕ್ಷ್ಮೀದೇವಿಯಿಂದ ಬರೆಯಲ್ಪಟ್ಟಿರುವುದು. ಈಕೆಯು ೧೭ನೆಯ ಶತಮಾನದ ಅಂತ್ಯಭಾಗದಲ್ಲಿದ್ದುದಾಗಿ ತಿಳಿದುಬರುವುದು.

[ಈ ಲೇಖನವು ಮದ್ರಾಸಿನ ಶ್ರೀಯುತ ಸಿ. ಪಿ. ರಾಮಸ್ವಾಮಯ್ಯರ್‌ರವರು ಅಲ್ಲಿನ ಪ್ರೆಸಿಡೆನ್ಸಿ ಕಾಲೇಜ್ ಸಂಸ್ಕೃತಸಭೆಯ ವಾರ್ಷಿಕೋತ್ಸವದಲ್ಲಿ ಅಧ್ಯಕ್ಷರಾಗಿದ್ದಾಗ ಮಾಡಿದ ಭಾಷಣದ ಪರಿವರ್ತನವು. ಇದರಿಂದ ನಮ್ಮ ಪ್ರಾಚೀನ ರಮಣಿಯರು ಎಷ್ಟು ವಿದ್ಯಾವತಿಯರಾಗಿದ್ದರೆನ್ನುವುದೂ, ಆ ಕಾಲದ ಈ ಕಾಲದ ವಿದ್ಯಾಭ್ಯಾಸಕ್ರಮದ ವ್ಯತ್ಯಾಸವೂ ವಿಶದವಾಗಿ ತಿಳಿದುಬರುವುದರಿಂದ ಅದನ್ನಿಲ್ಲಿ ಪ್ರಕಟಿಸಿದೆ.

[ಸಂ। ಸ॥

# ಮುತ್ತಿನ ಸರ.

---

ಸ್ತ್ರೀಯು ಯಾವದಿನ ಮೊದಲನೆಯ ಸಾರಿ ಕಣ್ಣೀರನ್ನು ಸುರಿಸುವಳೋ, ಆದಾಕೆಗೆ ಬಹು ಆನಂದದ ದಿನವು; ಏಕೆಂದರೆ ಆ ದಿನ ಆಕೆಗೆ ಅಬಲೆಯಾದ ತನ್ನ ಏಕಮಾತ್ರ ಬಲದ ಪರಿಚಯವಾಗುವದು.

o o o

ಹೆಂಗಳೆಯರ ಮೂರ್ಛಾರೋಗವು ಪುರುಷರ ಮನಸ್ಸನ್ನು ಸೆಳೆಯುವದಕ್ಕೊಂದುಪಾಯ ಮಾತ್ರವೆ.

o o o

ಸ್ತ್ರೀಯರು ರೂಪವತಿಯರಾದರೆ ನಾಲ್ಕು ದಿಕ್ಕುಗಳಲ್ಲೂ ಅವರ ಗುಣಗಾನವನ್ನು ಕೇಳಬಹುದು. ಯಾರಿಗೆ ರೂಪವಿಲ್ಲವೋ ಅವರ ಗುಣಗಳನ್ನು ಹುಡುಕುವವರು ತಾನೇ ಯಾರು?

o o o

ಏಳುವರ್ಷ ವಯಸ್ಸಾದಮೇಲೆ ಸ್ತ್ರೀಯರು ವಿಶ್ವಾಸಯೋಗ್ಯರಲ್ಲ; ಪುರುಷರಾದರೊ ಜೀವನದ ಯಾವ ಅವಸ್ಥೆಯಲ್ಲಿಯೂ ವಿಶ್ವಾಸಯೋಗ್ಯರಲ್ಲ.

o o o

ಸ್ತ್ರೀಯರ ಹಾಗೂ ವಿದ್ಯಾವತಿಯರ ಜೀವನದ ಧ್ಯೇಯವು ಪ್ರೇಮಶಾಂತಿಯಲ್ಲಿ; ಅದರವಸಂಧಾನವು ಕಾಮತೃಪ್ತಿಯಲ್ಲಿ. ಪುರುಷರ ವಿಷಯವು ಇದಕ್ಕೆ ಸಂಪೂರ್ಣ ವಿರುದ್ಧ.

o o o

ಕಣ್ಣಿನ ನೋಟವೇ ಸ್ತ್ರೀಯರ ಅಂತಿಮಸೌಂದರ್ಯ.

o o o

ಗಂಡನು ಎಷ್ಟೇ ಚತುರನಾಗಲಿ, ಅವನ ದೋಷಗಳನ್ನು ಹೆಂಡತಿಯಿಂದ ಮುಚ್ಚಿಡುವುದು ಅಸಾಧ್ಯ.

o o o

ಸ್ತ್ರೀಯರು ಮಾಯಾವಿಗಳು; ಆದರೆ ಪುರುಷರೋ ?

o o o

ನಾರಿಯ ಜೀವನವೆಂದರೆ ತ್ಯಾಗವು ಮೂರ್ತೀಭವಿಸಿದಂತೆ.

o o o

ಪ್ರೇಮವು ಸ್ತ್ರೀಯರ ಒರೆಗಲ್ಲು; ಅದರಿಂದವರ ಜೀವನದ ಹೊನ್ನಿನಲ್ಲಿ ಸ್ವಾರ್ಥದ ತಾಮ್ರಮಿಶ್ರಣವೆಷ್ಟಿದೆ ಯೆಂಬುದನ್ನು ಕಂಡುಹಿಡಿಯಬಹುದು.

o o o

ಪುರುಷರು ಸ್ತ್ರೀಯರಲ್ಲಿ ಯಾವವಿಧವಾದ ಸೌಂದರ್ಯವನ್ನು ಅಪೇಕ್ಷಿಸುವರೊ, ಅಂತಹ ಸೌಂದರ್ಯವನ್ನು ಸ್ತ್ರೀಯರು ಪುರುಷರಲ್ಲಿ ಅಪೇಕ್ಷಿಸುವುದಿಲ್ಲ. ಇದೇ ಪುರುಷರ ಸೌಭಾಗ್ಯ.

o o o

ಪುರುಷರಿಗಿಂತಲೂ ಸ್ತ್ರೀಯರ ಕಲ್ಪನಾಶಕ್ತಿಯು ಹೆಚ್ಚು.

o o o

ಸ್ತ್ರೀಯರನ್ನು ಒಲಿಸುವ ಏಕಮಾತ್ರ ಸಾಧನವು ಪ್ರೇಮವೆ. ಪ್ರೇಮಸುರೆಯಿಂದ ಮತ್ತರಾದರೆಂದರೆ ಅವರಿಂದಾಗದ ಕಾರ್ಯವೇ ಇಲ್ಲ.

O O O

ಪುರುಷನು ಸ್ತ್ರೀಯರಲ್ಲಿ ದೈವೀಗುಣದ ಅನುಸಂಧಾನಮಾಡಿ ನಿರಾಶನಾಗುವನು. ಮಾನವೀಶಕ್ತಿಯೇ ಅವರಲ್ಲಿ ಯಥೇಷ್ಟ. ಏಕೆಂದರೆ ಸ್ಥೂಲಜಗತ್ತಿನ ಅನಿವಾರ್ಯ ಭಾರಗಳು ಅವರ ಮೇಲೆಯೆ.

O O O

ಯಾರು ಹೆಂಗಸರ ಮನಸ್ಸನ್ನು ತಿಳಿಯಲಿಚ್ಛಿಸುವರೋ ಅವರು ಕೇವಲ ನಿರ್ಬೋಧರು. ಹೆಂಗಸು ತನ್ನ ಮನಸ್ಸನ್ನು ತಾನೇ ತಿಳಿಯಲಾರಳು; ಮತ್ತೊಬ್ಬರಿಗೆ ತಿಳಿಸಬಲ್ಲಳು ಹೇಗೆ?

O O O

ಪುರುಷನು ಆಜೀವವೂ ಸ್ತ್ರೀಯನ್ನು ವಂಚಿಸುವನು—ಪ್ರೇಮದಲ್ಲಿ, ವಿವಾಹಬಂಧನದಲ್ಲಿ, ಹಾಗೂ ನಿತ್ಯವ್ಯವಹಾರದಲ್ಲಿ.

O O O

ಸ್ತ್ರೀಯ ಸಮಸ್ತ ಅತ್ಯಾಚಾರಗಳನ್ನು ಪುರುಷನು ಸಹಿಸಬಲ್ಲನು; ಆದರವಳ ಬೈಗಳು ಮಾತ್ರ ಅವನಿಗೆ ಅಸಹ್ಯ.



# ಮಾನವಜನ್ಮದ ಶ್ರೇಷ್ಠತೆಯೂ ಕರ್ತವ್ಯವೂ.

---

(ಲೇಖಕಿ—ಶ್ರೀಮತಿ ಕೃಷ್ಣವೇಣಿ ಅಮ್ಮ, ಬಳ್ಳಾರಿ.)



ಎಲ್ಲಾ ಜನ್ಮಗಳಲ್ಲಿಯೂ ಮಾನವಜನ್ಮವೇ ಶ್ರೇಷ್ಠವಾದುದೆಂದು ಎಲ್ಲಾ ಶಾಸ್ತ್ರಗಳೂ ಮೊರೆಯಿಡುತ್ತಿರುವವು. ಹಿಂದೂ ಶಾಸ್ತ್ರ ಗ್ರಂಥಗಳು ಮಾತ್ರವಲ್ಲದೆ, ಇತರ ಶಾಸ್ತ್ರಗಳೆಲ್ಲವೂ ಕೂಡ ಭಗವಂತನ ಸೃಷ್ಟಿಯಲ್ಲಿ ಮಾನವಸೃಷ್ಟಿಯೇ ಉತ್ತಮವೆಂದು ಒಪ್ಪಿಕೊಳ್ಳುವವಷ್ಟೆ. ಉಳಿದ ಮೃಗ, ಪಶು, ಪಕ್ಷಿ ಜಂತುಗಳೆಲ್ಲಕ್ಕಿಂತಲೂ ಮಾನವನೇ ಎಲ್ಲಾ ವಿಷಯಗಳಲ್ಲಿಯೂ ಶ್ರೇಷ್ಠವೆನ್ನುವ ವಿಷಯವು ಎಲ್ಲರಿಗೂ ತಿಳಿದದ್ದೇ ಆಗಿರುವುದು. ಹಾಗಿರುವಲ್ಲಿ ಮಾನವಜನ್ಮದ ಪ್ರಯೋಜನವೇನು? ಜನ್ಮದ ಉದ್ದೇಶವಾವುದು? ಜನ್ಮವೆತ್ತಿದನಂತರ ಯಾವ ವಿಧವಾಗಿ ಈ ಜನ್ಮದ ಸಾರ್ಥಕತೆಯನ್ನು ಮಾಡಿಕೊಳ್ಳುವುದು? ಎನ್ನುವ ವಿಷಯವನ್ನು ಪ್ರತಿಯೊಬ್ಬ ಮಾನವನೂ ಅಂತ

ದೃಷ್ಟಿಯಿಂದ ತಿಳಿದು, ಬಹಿರಂಗದಲ್ಲಿ ಹಿರಿಯರಿಂದಲೋ, ಸತ್ಸಂಗದಿಂದಲೋ, ಸದ್ಗುರುವಿನ ಮುಖಾಂತರವೋ ತಿಳಿದು, ಆ ಜ್ಞಾನದ ಮೂಲಕ ತನ್ನ ಸ್ವಗುಣವನ್ನು ತಿದ್ದಿಕೊಳ್ಳಬೇಕು. ಪಶುವಿಗೂ, ಮಾನವನಿಗೂ ಇರತಕ್ಕ ಬೇಧವೇನು? ನೋಡಿದ ಕೂಡಲೇ ತಿಳಿಯುವ ವ್ಯತ್ಯಾಸವನ್ನೆಲ್ಲರೂ ಅರಿತಿರುವರು. ಆದರೆ ವಿಚಾರಿಸಿನೋಡಿದರೆ ಇಬ್ಬರಲ್ಲೂ ಹೆಚ್ಚು ಬೇಧವೇನೂ ಇರುವುದಿಲ್ಲ. ಮಾನವನಿಗಿರುವಂತೆಯೇ ಇತರ ಪ್ರಾಣಿಗಳಿಗೆ ಶರೀರವಿಲ್ಲವಷ್ಟೆ. ಆದರೆ ಜನನ, ಮರಣ, ಸ್ವಪ್ನ, ಜಾಗ್ರತಿ, ಸುಷುಪ್ತಿ ಮೊದಲಾದ ಅವಸ್ಥೆಗಳೆಲ್ಲವೂ ಇಬ್ಬರಿಗೂ ಒಂದೇ. ಇನ್ನು ಆಹಾರ, ನಿದ್ರೆ, ಭಯ, ಮೈಥುನಗಳ ವಿಷಯದಲ್ಲೋ ಎಂದರೆ-ಪಶುಪಕ್ಷಿಗಳಿಗಿಂತ ಮಾನವನೇ ಅಗ್ರಸ್ಥಾನದಲ್ಲಿರುವವನು. ಹೇಗಂದರೆ—ಮೃಗ ಪಕ್ಷಿಗಳು ಹಸಿವಾದಾಗ ಮಾತ್ರ ಆಹಾರವನ್ನು ತೆಗೆದುಕೊಳ್ಳುವುವೇ ಹೊರ್ತು ಉಳಿದಕಾಲದಲ್ಲಿ ಆ ಕಾಳುಕಡ್ಡಿಗಳು ಕಣ್ಣಿಗೆ ಬಿದ್ದರೂ ಜಿಹ್ವಾಚಾಪಲ್ಯದಿಂದ ತಿನ್ನುವುದಿಲ್ಲ. ಮಾನವನು ಹೊಟ್ಟೆ ತುಂಬಿದ್ದರೂ ರುಚಿಯಾದ ಪದಾರ್ಥವು ಕಣ್ಣಿಗೆ ಬಿದ್ದಾಗ ಜಿಹ್ವಾಚಾಪಲ್ಯವನ್ನು ನಿಗ್ರಹಿಸುವ ಶಕ್ತಿಯಿಲ್ಲದೆ ಅದನ್ನು ಮತ್ತೆ ರುಚಿನೋಡಿತಿಂದು ಅಜೀರ್ಣವ್ಯಾಧಿಯನ್ನು ಬರಮಾಡಿಕೊಳ್ಳುವನು. ಪಶುವು ನಿದ್ರೆಬಂದಾಗ ಮಲಗುವುದು; ಉಳಿದಕಾಲದಲ್ಲೆಲ್ಲಾ ಚಟುವಟಿಕೆಯಿಂದಿರುವುದು. ಮಾನವನು ಮಿತಿಮೀರಿ ಭೋಜನಮಾಡುವುದರಲ್ಲಿಯೂ, ಕೆಲಸವಿಲ್ಲದೆ ಸೋಮಾರಿಯಾಗಿರುವುದರಲ್ಲಿಯೂ, ತಾಮಸಗುಣ-ಆಲಸ್ಯದಲ್ಲಿಯೂ, ಮಲಗಲು ಸುಖವಾದ ಸ್ಥಳವನ್ನು ಕಂಡಾಗ ನಿದ್ರೆಬಾರದಿದ್ದರೂ ಸುಮ್ಮನಾದರೂ ಹೊರಳಾಡುವುದರಲ್ಲಾದರೂ ಕಾಲಕಳೆಯುವನು. ಪ್ರಾಣರಕ್ಷಣೆಗೆಮಾತ್ರ ಮೃಗಗಳು ಭಯಪಡುವುದು ಮಾತ್ರವಲ್ಲದೆ, ಉಳಿದಕಾಲದಲ್ಲೆಲ್ಲಾ ಸ್ವೇಚ್ಛೆಯಾಗಿ ಸ್ವತಂತ್ರವಾಗಿ ಆನಂದದಿಂದ ವಿಹರಿಸುತ್ತಿರುವುವು. ಮಾನವನು ಪ್ರಾಣರಕ್ಷಣೆಗೆ ಭಯಪಡುವುದೂ ಅಲ್ಲದೆ, ಭೂತಪಿಶಾಚಿಗಳಿಗೂ, ಲಕ್ಷಣ ಅವಲಕ್ಷಣಗಳಿಗೂ, ಕಡೆಗೆ ಜನರಿಗೂ ಕೂಡ ದಿವಾರಾತ್ರಿಯೂ ಭಯಪಡುತ್ತಲೇ ಇರುವನು. ಪಶುಗಳು (ಮೃಗಗಳು) ಋತುಕಾಲದಲ್ಲಿ ಮಾತ್ರ ಮೈಥುನವನ್ನಪೇಕ್ಷಿಸುವುವಲ್ಲದೆ ಉಳಿದಕಾಲದಲ್ಲಿ ತನ್ನ ಸ್ತ್ರೀಯೊಡನೆ ಸೇರಿ, ವಿಹರಿಸಿ, ಭೋಗಿಸಿ, ಆನಂದದಿಂದ ಮೈಮರೆಯುವುದಿಲ್ಲ. ಪಶುವಿಗಿಂತ ಜ್ಞಾನವಂತನೆಂದು ಹೆಮ್ಮೆ ಕೊಚ್ಚಿಕೊಳ್ಳುವ ಮಾನವನಾದರೋ ಸತ್ಸಂತಾನವನ್ನು ಹೊಂದುವ ಉದ್ದೇಶದಿಂದಲ್ಲದೆ ಸ್ವಜ್ಞಾನವನ್ನು ಬಿಟ್ಟು, ಕಾಲ-ಅಕಾಲವೆನ್ನುವದನ್ನು ಮರೆತು, ಅಮಾವಾಸ್ಯ ಏಕಾದಶಿ ಮೊದಲಾದವುಗಳನ್ನು ಪಂಚಾಂಗದಿಂದ ಹೊರಗೆ ಹಾಕಿ, ರಾತ್ರಿ ಹಗಲೆನ್ನುವುದನ್ನೇ ವಿಚಾರಮಾಡದೆ, ಸ್ತ್ರೀಯರು ಜನಿಸಿರುವುದೇ ಪುರುಷರ

ಮೈಥುನಕ್ಕಾಗಿ ಎಂದು ಸಿದ್ಧಾಂತಮಾಡಿಕೊಂಡು, ಅವರ ಕಷ್ಟ, ಸುಖ, ಆರೋಗ್ಯ ಸ್ಥಿತಿಯಕಡೆ ಸ್ವಲ್ಪವೂ ಲಕ್ಷ್ಯಕೊಡದೆ ಅವರು ಕ್ಷಯವಾಗುವವರೆಗೂ (ಅವರಿಗೆ ಕ್ಷಯ ರೋಗವುಂಟಾಗುವವರೆಗೂ) ಬಿಡನು. ಮೃಗಗಳು ತಮ್ಮ ಸ್ತ್ರೀ ಜಾತಿಗೆ ಕೊಟ್ಟಿರು ವಷ್ಟು ವಿರಾಮ, ವಿಶ್ರಾಂತಿ, ಆನಂದಸುಖವನ್ನು ಕೊಡಲು ಇವರಿಂದಾಗದು. ಅವರು ಸ್ತ್ರೀಯರಿಗೆ ಕೊಡುವ ಸುಖವು ಮೈಥುನವೇ! ಸ್ತ್ರೀಯರನ್ನೀರೀತಿ ನಡೆಸಿದರೂ ಕೂಡ ಅವರು ಯಾವುದಕ್ಕೂ ಅನರ್ಹರೆಂದು ಹೇಳುವುದು ಬೇರೆ. ಆಹಾ! ಎಂತಹ ಅಜ್ಞಾನ ಪ್ರಪಂಚವು! ಆ ಪರಮಾತ್ಮನಾದ ಶ್ರೀ ಕೃಷ್ಣನಿಗೆ ನಾವೆಲ್ಲರೂ ಸಂತಾನವೇ. ಅದರಲ್ಲಿ ಇಂದಾವರೂ ಸ್ತ್ರೀಪುರುಷ ಬೇಧಗಳು ಅಲ್ಲದೆ ಜ್ಞಾನದವಿಷಯದಲ್ಲೇನಾದರೂ ಬೇಧವಿರುವುದೇ? ಇದನ್ನೆಲ್ಲಾ ದೀರ್ಘವಾಗಿ ವಿಚಾರಿಸಿ ನೋಡಿದರೆ ಪಶುಪಕ್ಷಿಗಳಿಗಿಂತಲೂ ಮಾನವನೇ ಶ್ರೇಷ್ಠನೆಂದು ತಿಳಿದುಬರುವುದಲ್ಲವೇ? ಇವೆಲ್ಲಕ್ಕಿಂತ ಮಾನವನಿಗೆ ಜ್ಞಾನವು ವಿಶೇಷವಾಗಿರುವುದು. ಈ ಜ್ಞಾನದ ಸಹಾಯದಿಂದ ಧರ್ಮವನ್ನಾಚರಿಸುವುದು ಮಾನವನ ಕರ್ತವ್ಯವು.

ಆಹಾರ ನಿದ್ರಾಭಯ ಮೈಥುನಾದಿ
ಸಾಮಾನ್ಯಮೇತತ್ ಪಶುಭಿನ್ನರಾಣಾಂ
ಧರ್ಮೋವಿಶೇಷಃ ಖಲುಮಾನುಷಾಣಾಂ
ಧರ್ಮೇಣಹೀನಾ ಪಶುಭಿಸ್ಸಮಾನಾ ||

ಅಂದರೆ ಜ್ಞಾನರೂಪವಾದ ಧರ್ಮವನ್ನಾಚರಿಸದ ಮಾನವನು ಪಶುವಿಗಿಂತ ಹೀನನಾದವನೆಂದು ಭಾವವು. ಜ್ಞಾನವೆಂದರೇನು? ಧರ್ಮವೆಂದರೇನು? ಸದ್ಗುರುವಿನಿಂದ ಸದ್ವಿವೇಚನೆಯಿಂದ ತಾನೆಂಬುದನ್ನು ತಿಳಿದುಕೊಂಡು, ಸರ್ವಭೂತದಲ್ಲಿಯೂ ತನ್ನಲ್ಲಿಯೂ ನೆಲಸಿರುವ ಪರಮಾತ್ಮನೊಬ್ಬನೇ ಎಂದು ತಿಳಿದು, ಸುಖದುಃಖಕ್ಕೆ ಕಾರಣವು ನಾನಲ್ಲ; ನಾನೊಂದುನಿಮಿತ್ತಮಾತ್ರವೆಂದು ವಿಮರ್ಶೆಯಿಂದ ತಿಳಿದು, ತನ್ನ ಬುದ್ಧಿ ಬಲದಿಂದ ಸ್ವಧರ್ಮ ಕಾರ್ಯಗಳನ್ನಾಚರಿಸುವುದೇ ಧರ್ಮವು. ಜ್ಞಾನಭರಿತವಾದ ಮನಸ್ಸಿನಿಂದ ಸ್ವಧರ್ಮವನ್ನು ಯಾವಾಗಲೂ ಬಿಡದೆ ನಡೆಸುತ್ತಿರಬೇಕು. 'ಸ್ವಧರ್ಮಂ ನಿಧನಂಶ್ರೇಯಃ ಪರಧರ್ಮೋಭಯಾವಹಃ ||' ಸ್ವಧರ್ಮವೆಂದರೇನು? ಸ್ವಧರ್ಮವೆಂದರೆ-ಮೋಕ್ಷಧರ್ಮವೆಂದರ್ಥವಲ್ಲ. ಸ್ವ-ಅಂದರೆ ತಾನು. ತಾನುಯಾರು?'ಜೀವನು' ಜೀವನು ಮಾಡಬೇಕಾದ ಧರ್ಮಕ್ಕೇ ಸ್ವಧರ್ಮವೆಂದು ಅರ್ಥವು. ಜೀವನುಮಾಡಬೇಕಾದ ಧರ್ಮವ್ಯಾವುದು? ಚಾತುರ್ವರ್ಣ ವ್ಯವಸ್ಥಾನುಸಾರವಾಗಿ ಶಾಸ್ತ್ರದಲ್ಲಿ

**ಟಾರ್ಚ್‌ಲೈಟ್. (TORCH LIGHT)**—

ಇದು ಮುಂಬೈಯಿಂದ ಹೊರಡುವ ಆಂಗ್ಲಭಾಷೆಯ ಸಾದಾತರದ ಒಂದು ಮಾಸಿಕವು. ಸಾಮಾಜಿಕ, ಸಾಹಿತ್ಯ, ಶಿಲ್ಪ ಮತ್ತು ವಿಜ್ಞಾನ ವಿನೋದಾದಿ ವಿವಿಧ ವಿಷಯಗಳಿಂದ ವಿಭೂಷಿತವಾದ ಈ ಪತ್ರಿಕೆಯು ಹಿರಿಯರಿಗಂತಲ್ಲ, ಕಿರಿಯರಿಗೂ ಪ್ರಯೋಜನೀಯವೆಂದು ಹೇಳಬಹುದು. ಶಾಲಾವಿದ್ಯಾರ್ಥಿಗಳು ವ್ಯರ್ಥವಾಗಿ ಕಾಲ ಕಳೆಯುವ ವೇಳೆಯಲ್ಲಿ ಇದನ್ನೋದಿಕೊಂಡರೆ ಸ್ವಲ್ಪ ಮನಸ್ಸಂತೋಷವಾಗದಿರದು. ಯತ್ಕಿಂಚಿತ್ ಲಾಭಾಂಶವೂ ಲಭಿಸಬಹುದು. ನಾವು ಈ ಪತ್ರಿಕೆಯ ಉತ್ತರೋತ್ತರ ವೃದ್ಧಿಯನ್ನಿಚ್ಛಿಸುತ್ತೇವೆ. ಅಚ್ಚು ಅಚ್ಚುಕಟ್ಟಾಗಿದೆ. ವಾರ್ಷಿಕಚಂದಾ ೩ ರೂ ಮಾತ್ರ. ಸಿಗುವಸ್ಥಳ:—

**Mr. C. S. Narayana Row, M.A.,**
Hornby House, Hornby Road, Fort, Bombay.

---

**೧ ಕಾಲಿದಾಸನೂ ಅಧ್ಯಾತ್ಮಿಕ ವಿಚಾರಗಳೂ**—ಈ ಚಿಕ್ಕ ಪ್ರಬಂಧವು ಬೆಂಗಳೂರು ಆರ್ಯ ಲೋವರ್‌ಸೆಕೆಂಡರೀ ಸ್ಕೂಲಿನ ಮುಖ್ಯೋಪಾಧ್ಯಾಯರಾದ ಶ್ರೀಯುತ ದೇವುಡು ನರಸಿಂಹಶಾಸ್ತ್ರಿ, ಎಂ.ಎ., ಯವರಿಂದ ಬರೆಯಲ್ಪಟ್ಟುದು. ಜಯಕರ್ನಾಟಕದಲ್ಲಿ ಮುದ್ರಿತವಾದ ಲೇಖನವು ಈಗ ಪುಸ್ತಕರೂಪದಲ್ಲಿ ಪ್ರಕಟಿತವಾಗಿದೆ. ಕಾಲಿದಾಸನ ಅರ್ಥಕ್ಕೆ ಲೇಖಕರು ನವೀನಾರ್ಥವನ್ನು ಕಲ್ಪಿಸಿರುವುದು ಮಾತ್ರವಲ್ಲದೆ, ವಾಚಕರ ಮನಸ್ಸಿಗೆ ಮುಂದಟ್ಟಾಗುವಂತೆ ವಿವರಿಸಿ ಬರೆದಿರುವುದು ಅವರ ನೈಪುಣ್ಯವನ್ನು ವಿಶದಗೊಳಿಸುತ್ತದೆ. ನಮ್ಮ ಕನ್ನಡಿಗರಲ್ಲಿ ಇಂತಹ ರಚನಾಭಿರುಚಿಯಿರತಕ್ಕವರು ಕಡಮೆ. ಈ ಸಂದರ್ಭದಲ್ಲಿ ಮೇಲ್ಕಂಡ ಲೇಖಕರು ಈವಿಷಯದಲ್ಲಿ ಮುಂದರಿಯುತ್ತಿರುವುದು ಕನ್ನಡಿಗರ ಸುದೈವವೆಂದೇ ಹೇಳಬೇಕು. ಕನ್ನಡಿಗರು ಇವರ ಶ್ರಮವನ್ನರಿತು ಇವರನ್ನು ಉತ್ತೇಜನಗೊಳಿಸಿದರೆ ಇಂತಹ ಎಷ್ಟೋ ಮುತ್ತುಗಳು ಕರ್ನಾಟಕ ಕಾವ್ಯಮಾಲೆಗೆ ಪೋಣಿಸಲ್ಪಡಲು ಅವಕಾಶವಾಗುವುದು. ಕನ್ನಡಿಗರು ಲೇಖಕರಿಗೆ ಹುರುಪನ್ನುಂಟುಮಾಡುವರೆಂದು ನಂಬಿಕೆ. ಇದರ ಬೆಲೆ ತಿಳಿಸಿಲ್ಲ.

---

ಒಣಗಿಸಿದ ತೇಯೆಲೆ (ಟೀ)ಯನ್ನು ಧಗಧಗಿಸುವ ಕೆಂಡದಲ್ಲಿ ಉರಿಸುವುದರಿಂದ ನೊಣ, ಸೊಳ್ಳೆಗಳು ಓಡಿಹೋಗುತ್ತವೆ.

* * *

# ಗೃಹವಿಜ್ಞಾನ.

ನಿಂಬೆಹಣ್ಣನ್ನು ತುಂಡುಮಾಡುವ ಮೊದಲು ಸ್ವಲ್ಪಹೊತ್ತಿನವರೆಗೆ ಬಿಸಿನೀರಿನಲ್ಲಿಟ್ಟರೆ ಅದರಿಂದ ಹೆಚ್ಚು ರಸವು ಸಿಗುವುದು.

*　　　*　　　*

ತಲೆದಿಂಬನ್ನು ತುಂಬಿಸುವಾಗ ಚಿಂದಿ ಯಾ ಹತ್ತಿಯಲ್ಲಿ ಸ್ವಲ್ಪ ಕರ್ಪೂರ ಬೆರಿಕೆ ಮಾಡಿಟ್ಟರೆ ಅದು ಬೇಸಿಗೆ ಕಾಲದಲ್ಲಿ ತಂಪನ್ನುಂಟುಮಾಡುವುದು. ಮತ್ತು ಅದರಲ್ಲಿ ತಗಣಿಗಳೂ ಸೇರುವುದಿಲ್ಲ.

*　　　*　　　*

ಉಪ್ಪನ್ನು ಯಾವಾಗಲೂ ಮುಚ್ಚಿಡಬೇಕು. ಹಲ್ಲಿ (ಗೌಳಿ) ಕೂತುಕೊಂಡ ಉಪ್ಪನ್ನು ತಿಂದವನು ಕುಷ್ಠರೋಗಿಯಾಗುವನು.

*　　　*　　　*

ಬುದ್ಧಿವಂತೆಯರು ನಿಂಬೆಹಣ್ಣನ್ನು ಹಿಂಡಿದನೇಲೆ ಉಳಿದ ಸಿಪ್ಪೆಯನ್ನು ಬಿಸಾಡುವುದಿಲ್ಲ; ಅದನ್ನು ಉಪ್ಪಿನೊಂದಿಗೆ ಸೇರಿಸಿ, ಹಿತ್ತಾಳೆ ತಾಮ್ರದ ಪಾತ್ರೆಗಳನ್ನು ಬೆಳಗಲು ಉಪಯೋಗಿಸುತ್ತಾರೆ.

*　　　*　　　*

ನೀರಿನಲ್ಲಿ ಅದ್ದಿಹಿಂಡಿದ ಬಟ್ಟೆಯನ್ನು ಶೀಶೆಯ ಅಡಿಗೆ ಸುತ್ತಿ ಶೀಶೆಯೊಳಗೆ ಬಿಸಿ ಪದಾರ್ಥವನ್ನು ಹಾಕಿದರೆ ಅದು ಒಡೆಯುವುದಿಲ್ಲ.

*　　　*　　　*

ಕಾಯಿಪಲ್ಯಗಳನ್ನು ಬೇಯಿಸುವ ಕಾಲಕ್ಕೆ ಅದರಲ್ಲಿ ೧ ಚಮಚೆ ಸಕ್ಕರೆ ಸೇರಿಸಿದರೆ ಕಾಯಿಪಲ್ಲೆಯ ರಂಗು ಹಸುರಾಗಿಯೇ ನಿಲ್ಲುವುದು; ಮತ್ತು ರುಚಿಯೂ ಹೆಚ್ಚಾಗುವುದು.

*　　　*　　　*

ರೇಷ್ಮೆಬಟ್ಟೆಯನ್ನು ಉಟ್ಟುಕೊಂಡು ತಿರುಗಿ ತೆಗೆದಿಡುವಾಗ ಅದರ ನಿರಿಯನ್ನು ಬಿಡಿಸಿ, ಹಳೆಯ ಮಖ್‌ಮಲ್ಲಿನ ತುಂಡಿನಿಂದ ಉಜ್ಜುತ್ತಿದ್ದರೆ ರೇಷ್ಮೆವಸ್ತ್ರವು ಬಹು ಕಾಲ ಬಾಳುವುದು.

೦　　　೦　　　೦

ಮೃದುವಾದ ಫ್ರೆಂಚ್‌ಚಾಕ್ (ಸೀಮೆಸುಣ್ಣ)ದಿಂದ ತಿಕ್ಕಿದರೆ ಹಾರ್ಮೋನಿಯಂ ಪಿಯಾನ ಮೊದಲಾದವುಗಳ ಪರದೆ (ವಡಿ) ಯು ಸ್ವಚ್ಛವಾಗುತ್ತದೆ.

೦　　　೦　　　೦

ವಿಧಿಸಿರುವ ವ್ಯಾಪಾರಗಳೇ ಪ್ರತಿ ಜೀವನ ಧರ್ಮವು. ಚಾತುರ್ವರ್ಣ ವ್ಯವಸ್ಥಾನುಸಾರ ವಾಗಿಯೇ ಅಲ್ಲದೆ ಸ್ವಬುದ್ಧಿಪೂರ್ವಕವಾಗಿ ಯಾವ ಕರ್ಮವನ್ನೇ ಆಗಲಿ ಒಂದು ನ್ಯಾಯದವರೆಗೂ ಅವಲಂಬಿಸಿದರೆ ಅದೇ ಧರ್ಮವಾಗುವುದು. ಹಾಗಿಲ್ಲದೆ ತನ್ನ ಮನಬಂದಂತೆ ನಡೆದು, ತನ್ನ ಕರ್ತವ್ಯವನ್ನು ಬಿಟ್ಟು ನಡೆಯುವುದು ಒಂದು ಧರ್ಮವಲ್ಲ.

ಮಾನವನು ನಿದ್ರೆಯಲ್ಲಿಯೂ, ಎಚ್ಚತ್ತಿರುವಾಗಲೂ ತನ್ನ ಮತ್ತು ಇತರರ ಹಿತಸಾಧನೆಯಲ್ಲಿಯೇ ಇರುವುದನ್ನು ಅಭ್ಯಾಸಮಾಡಬೇಕು. ಇಷ್ಟೇ ಅಲ್ಲದೆ ರಾತ್ರಿ ಮಲಗಿರುವಾಗ ನನ್ನಿಂದ ಎಷ್ಟು ಜನಕ್ಕೆ ಹಿತವಾಯಿತು, ಎಷ್ಟು ಜನರಿಗೆ ಅಹಿತವಾಯಿತು, ಎಷ್ಟು ಮಂದಿಗೆ ಜ್ಞಾನವುಂಟುಮಾಡಿದೆನು, ಎಷ್ಟು ಜನರಿಗೆ ದುಃಖವುಂಟುಮಾಡಿದೆನು. ನಾನು ನಿನ್ನೆಯಿದ್ದ ಸ್ಥಿತಿಯಲ್ಲಿಯೇ ಇದ್ದೇನೆಯೇ ಅಥವಾ ನಿನ್ನೆಗಿಂತ ಉತ್ತಮಸ್ಥಿತಿಗೆ ಬಂದಿರುವೆನೇ ಎಂದು ಯೋಚಿಸಿ ತನ್ನಲ್ಲುಂಟಾಗುವ ತಾರತಮ್ಯವನ್ನರಿತುಕೊಂಡು ಇಂದಿಗಿಂತ ನಾಳೆ ಉತ್ತಮಸ್ಥಿತಿಗೆ ಬರಲು ಪ್ರಯತ್ನಿಸುವುದು ಮಾನವನ ಪ್ರಥಮ ಧರ್ಮವು. ಸ್ವಧರ್ಮದಿಂದಲೇ ಜೀವನಿಗೆ ತನ್ನ ಆತ್ಮವನ್ನುದ್ಧರಿಸುವ ಶಕ್ತಿಯುಂಟಾಗುವುದು.

"ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್
ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವರಿಪುರಾತ್ಮನಃ"

ಎಂದು ಶ್ರೀಕೃಷ್ಣ ಭಗವಂತನು ಅರ್ಜುನನಿಗೆ ಹೇಳಿದಂತೆ ತನ್ನ ಸ್ವಧರ್ಮವೇ ತನ್ನ ಆತ್ಮವನ್ನುದ್ಧರಿಸುವ ಬಂಧುವಾಗುವದು. ಇದನ್ನು ಬಿಟ್ಟರೆ ತನ್ನಾತ್ಮಕ್ಕೆ ತಾನೇ ಶತ್ರುವಾಗುವನು. ಪ್ರತಿ ನಿಮಿಷದಲ್ಲಿಯೂ ತನ್ನ ಪ್ರಗತಿಯನ್ನೂ, ತನ್ನಿಂದ ಇತರರಿಗೆ ಹಿತವಾಗುವುದೇ ಎನ್ನುವುದನ್ನೂ ಚಿಂತಿಸುತ್ತಿರಬೇಕು. ಮತ್ತೊಬ್ಬರ ಹಿತವನ್ನು ಉಪದೇಶದ ಮೂಲಕವಾಗಿಯೂ, ಕಾರ್ಯದ ಮೂಲಕವಾಗಿಯೂ, ಸೇವೆಯ ಮೂಲಕವಾಗಿಯೂ ಮಾಡಬೇಕು. ಈ ಮೂರು ಉಪಾಯದಿಂದಲೂ ಜನರಿಗೆ ಹಿತವುಂಟುಮಾಡಲಾರದೇ ಹೋದಾಗ ಇನ್ನೂ ತನ್ನನ್ನು ತಾನೇ ತಿದ್ದಿಕೊಳ್ಳಬೇಕಾಗಿರುವುದೆಂದು ತಿಳಿದು ಅದಕ್ಕೆ ತಕ್ಕ ಪ್ರಯತ್ನವನ್ನು ಶಿಕ್ಷೆ, ಅಪೇಕ್ಷೆ, ಪ್ರೇಮ ಈ ಮೂರು ಉಪಾಯಗಳಿಂದ ಮಾಡಿ, ತನ್ಮೂಲಕ ಜನರ ತಿದ್ದುವಿಕೆಯನ್ನು ಮಾಡಬೇಕು. ಮಹಾತ್ಮಾ ಗಾಂಧಿಯವರು ಹೇಗೆ ತನ್ನನ್ನು ತಾನು ಯಾವ ವಿಧವಾಗಿ ಉಪವಾಸೇತ್ಯಾದಿ ನೇಮ ನಿಷ್ಠಾ ದೀಕ್ಷೆಗಳಿಂದ ತಿದ್ದಿಕೊಳ್ಳುವರೋ, ಹಾಗೆಯೇ ಪ್ರತಿಯೊಬ್ಬ ಮಾನವನೂ ತನ್ನನ್ನು ತಾನೇ ತಿದ್ದಿಕೊಂಡು ಧರ್ಮಕಾರ್ಯದಲ್ಲುದ್ಯುಕ್ತ

ನಾಗಬೇಕು. ಜನ್ಮವೆತ್ತಿದಂದಿನಿಂದ ಮೇಲ್ಕಂಡ ಗುಣಗಳು ಪೂರ್ತಿಯಾಗಿದ್ದರೆ ಅವರನ್ನು ಅವತಾರ ಪುರುಷರೆಂದು ಕರೆಯುತ್ತಾರೆ. ಕೆಲವರಿಗೆ ಮೇಲ್ಕಂಡವುಗಳು ಹುಟ್ಟುಗುಣಗಳಾಗಿರುವವು. ಕೆಲವರಿಗೆ ಸ್ಥಿತಿ ಪರಿಸ್ಥಿತಿಗಳ ಮೂಲಕ ಉಂಟಾಗುವುದು. ಮೇಲ್ಕಂಡ ಎರಡು ವಿಧವಾಗಿಯೂ ಬಾರದಿದ್ದವರಿಗೆ ಅಭ್ಯಾಸ ಬಲದಿಂದ ಖಂಡಿತ ಉಂಟಾಗುವುದು. ಮನಸ್ಸು ಚಂಚಲವಾದರೆ ಅದನ್ನು ನಿಗ್ರಹಿಸಿದರೆ ಎಂತಹ ದುರ್ಘಟ ವಿಷಯಗಳೂ ಸಾಧ್ಯವಾಗುವುದರಲ್ಲಿ ಸಂದೇಹವಿಲ್ಲ. ಅಲ್ಲದೆ,

"ಅಭ್ಯಾಸೇನತು ಕೌಂತೇಯ ವೈರಾಗ್ಯೇಣಚ ಗೃಹ್ಯತೇ" ಅಭ್ಯಾಸದಿಂದಲೂ, ವೈರಾಗ್ಯದಿಂದಲೂ, ಮನಸ್ಸನ್ನು ಸ್ವಾಧೀನಪಡಿಸಿಕೊಳ್ಳುವುದರಿಂದಲೂ ತನ್ನ ಧರ್ಮವನ್ನು ಸುಲಭವಾಗಿ ಮಾಡಬಹುದು. ತಾನಪೇಕ್ಷಿಸಿದ ಒಂದು ವಸ್ತುವು ತನಗೆ ದೊರಕದೇ ಹೋದಾಗ ಹೇಡಿತನದಿಂದ ತಾಮಸಬುದ್ಧಿಯುಳ್ಳವನಾಗಿ ತಾನಪೇಕ್ಷಿಸಿದ ವಸ್ತುವನ್ನೇ ಚಿಂತಿಸುತ್ತ ಬಾಹ್ಯದಲ್ಲಿ ವೈರಾಗ್ಯವನ್ನು ಅಭಿನಯಿಸುವುದು ನಿಜವಾದ ವೈರಾಗ್ಯವಲ್ಲ. ಕೌರವ ಯುದ್ಧದಲ್ಲಿದ್ದ ಸೇನಾದ್ವಯದ ಮಧ್ಯೆ ಕೃಷ್ಣಭಗವಂತನು ಅರ್ಜುನನ ರಥವನ್ನು ನಿಲ್ಲಿಸಿದಾಗ ಅರ್ಜುನನು ಎರಡು ಕಡೆಯ ಸೇನೆಯನ್ನು ನೋಡಿ ಭ್ರಮಿಸಿದವನಾಗಿ

"ನಕಾಂಕ್ಷೇ ವಿಜಯಂ ಕೃಷ್ಣ ನಚರಾಜ್ಯಂ ಸುಖಾನಿಚ |
ಕಿಂನೋರಾಜ್ಯೇನ ಗೋವಿಂದ ಕಿಂಭೋಗೈರ್ಜೀವಿತೇನವಾ"

ಎಂದು ಮನೋಬಲವಿಲ್ಲದೆ ಹೇಡಿತನದಿಂದ ವೈರಾಗ್ಯವನ್ನು ತಾಳಿದ್ದರೆ ಅದು ವೈರಾಗ್ಯವಲ್ಲ. ವೈರಾಗ್ಯದ ಶ್ರೇಷ್ಠಾರ್ಥವು:—

"ಅಂತರ್‌ತ್ಯಾಗ ಬಹಿರ್‌ಭೋಗ ಅಂತರೇಕೋ ಬಹಿರ್‌ನಾನಾ
ಅಂತರ್ ಬಾಲಾ ಬಹಿರ್ ಯುವಃ"

ಎಂದು ಹೊರಗೆ ಎಷ್ಟೇ ಭೋಗಿಯಾಗಿದ್ದರೂ ಅಂತರಂಗದಲ್ಲಿ ತ್ಯಾಗಿಯಾಗಿರುವುದೇ ವೈರಾಗ್ಯವು. ತಾನು ಮಾಡುವ ಕಾರ್ಯದಲ್ಲುಂಟಾಗುವ ಜಯಾಪಜಯಗಳನ್ನು ಸಮವಾಗಿ ಭಾವಿಸಿ ತನ್ನ ಕರ್ತವ್ಯ ಕಾರ್ಯವು ಮಾತ್ರ ತನಗೆ ಸೇರಿದ್ದೆಂದೂ, ಅದರ ಫಲಾಫಲಗಳು ತನ್ನದಲ್ಲವೆಂದೂ ತಿಳಿದು ಅಷ್ಟಕ್ಕೇ ಆನಂದಪಟ್ಟು ತನ್ನ ಕಾರ್ಯವನ್ನು ನೆರವೇರಿಸುವುದೇ ವೈರಾಗ್ಯವು.

"ಆತ್ಮ ಒಂದೇ ಎಂದು ತಿಳಿದುಕೊಳ್ಳಲುಬೇಕು.
ದ್ವಂದ್ವಮಯ ಪ್ರಗತಿಯೊಳ್ ತಾರತಮ್ಯವು ಬೇಕು.

ಬಹು ಜನರ ಹಿತವೊಂದೆ ಧರ್ಮವಾಗಲು ಬೇಕು.
ಕಾಮಕ್ರೋಧವ ಗೆದ್ದು ಧರ್ಮ ಯೋಚಿಸಬೇಕು.
ದಶಗುಣಂಗಳನೆಲ್ಲ ಅರಿತು ನಡೆಸಲುಬೇಕು.
ಯೋಗ್ಯಾಗತ್ಯವನೇ ಭೋಗ್ಯವಾಗಿಡಬೇಕು.
ದೇಶ ಕಾಲವನರಿತು ಕಾರ್ಯ ಹೊಂದಿಸಬೇಕು.
ಈ ತೆರದಿ ಜಗಹಿತವ ಮಾಡದವನೇ ಷಂಡ ಕಲಿಯುಗದೊಳ್''

ಮಾನವನು ಯಾವಾಗಲೂ ತನ್ನ ತನುವಿಗೆ ಯೋಗ್ಯ ಮತ್ತು ಅಗತ್ಯವಾದ ಆಹಾರವನ್ನೇ ಭುಜಿಸಬೇಕು. ಆಹಾರದಲ್ಲಿ ನಿಯಮವಿಲ್ಲದಿದ್ದರೆ ಮನಸ್ಸನ್ನು ನಿಗ್ರಹಿಸುವುದು ಅತಿ ಕಷ್ಟವು. ಬಾಹ್ಯೇಂದ್ರಿಯಗಳೆಲ್ಲಕ್ಕಿಂತಲೂ ವಾಕ್ಕು ಶ್ರೇಷ್ಠವು. ಮಾತನ್ನು ನಿಗ್ರಹಿಸುವುದು ಮಾನವನ ಪ್ರಥಮ ಕರ್ತವ್ಯವು. ವಾಕ್‌ನಿಗ್ರಹದಿಂದ ತನುಮನಗಳು ಕೂಡ ಆರೋಗ್ಯಸ್ಥಿತಿಯನ್ನು ಹೊಂದುವುವು. ದೇಹದಂತೆಯೇ ಮನಸ್ಸನ್ನೂ ಕೂಡಾ ಆರೋಗ್ಯಸ್ಥಿತಿಯಲ್ಲಿಟ್ಟುಕೊಂಡು ಅನೇಕ ಮಹಾತ್ಮರ ಮತ್ತು ಸಾಧುಪುರುಷರ ಆದರ್ಶಗಳನ್ನು ನಮ್ಮ ಜೀವಿತದ ಧ್ಯೇಯವನ್ನಾಗಿಟ್ಟುಕೊಂಡು ಅವರಂತೆ ನಾವೂ ಆಗಬೇಕೆನ್ನುವ ದೃಢಸಂಕಲ್ಪದಿಂದ, ಧ್ಯಾನದಿಂದ, ಅಭ್ಯಾಸದಿಂದ ಜೀವಿತವನ್ನು ಕಳೆಯಲೆತ್ನಿಸಬೇಕು.

"ಯದ್ಭಾವಂ ತದ್ಭವತಿ"

ಮಾನವನು ಹೇಗಾಗಬೇಕೆಂದು ಭಾವಿಸಿದರೆ ಅದು ನಿಶ್ಚಯವಾಗಿಯೂ ಸಿದ್ಧಿಸುವುದು. ಮಾನವನಿಗೆ ಯೋಚಿಸಲು ಜ್ಞಾನವಿದೆ, ವಿವೇಕವಿದೆ. ಪಶುವಿಗೀ ಜ್ಞಾನವಿಲ್ಲ. ಮಾನವನು ಈ ಜ್ಞಾನದಿಂದಲೇ ಜನ್ಮ ಸಾರ್ಥಕಮಾಡಿಕೊಳ್ಳುವನು. ಆದುದರಿಂದಲೇ "ಉತ್ತಮಂ ಮಾನುಷಂ ಜನ್ಮ ಜಂತೂನಾಂ ನರಜನ್ಮಮುತ್ತಮಂ" ಎಂದು ಶಾಸ್ತ್ರಗಳು ಸಾರುತ್ತಿರುವವು.



# ಸಾಹಿತ್ಯ ಸಮಾಲೋಚನೆ.

**ಶ್ರೀ ತುಲಸೀದಾಸ ರಾಮಾಯಣ:**—ಅನುವಾದಕ: ಶ್ರೀ. ದ. ಕೃ. ಭಾರದ್ವಾಜರು, ''ಆನಂದಾಶ್ರಮ'', ಬಸವನಗುಡಿ, ಬೆಂಗಳೂರು.

**ವಿಷಯ:**—ತುಲಸೀದಾಸ ರಾಮಾಯಣವು ಹಿಂದೀ ಭಾಷೆಯ ಶ್ರೇಷ್ಠತಮ ಗ್ರಂಥಗಳಲ್ಲೊಂದಾಗಿದೆ. ಇದು ಸಾಮಾಜಿಕ ಸುಖಸಾಧನದ ಮಾರ್ಗ ದರ್ಶಕವು. ಮತ್ತು ಸಾಧುಸಂತರ ಪಠ್ಯ ಗ್ರಂಥವು. ಧಾರ್ಮಿಕ ಪವಿತ್ರಾಚರಣೆಗಳು ಮೂಲೆಗೊತ್ತಲ್ಪಟ್ಟು ಬಾಹ್ಯಾಡಂಬರದ ಬೆಡಗು ದಿನೇದಿನೇ ಬೆಳೆಯುತ್ತಿರುವ ಕಾಲದಲ್ಲಿ ರಚಿತವಾದುದರಿಂದ ಈ ಪವಿತ್ರ ಗ್ರಂಥವು ಯಾವತ್ತು ಸಾಮಾಜಿಕ ನೀತಿ ರೀತಿಗಳನ್ನು ಒಳಗೊಂಡಿದೆ. ಜಗದ್ವಂದ್ಯ ಮಹಾತ್ಮಾ ಗಾಂಧಿಯವರನ್ನು ಹಿಂದೂ ಧರ್ಮವನ್ನು ಬಿಟ್ಟು ಅನ್ಯಧರ್ಮಾವಲಂಬಿಗಳಾಗದಂತೆ ಮಾಡಿದ ಪರಮೋತ್ಕೃಷ್ಟ ಗ್ರಂಥವೇ ತುಲಸೀ ರಾಮಾಯಣವು; ಎಂದಮೇಲೆ ಇನ್ನಿದರ ಮಾಹಾತ್ಮ್ಯವನ್ನು ವಾಚಕರೇ ಊಹಿಸಲಿ. ಸಾಹಿತ್ಯದ ವೃಷ್ಟಿಯಿಂದಂತೂ ಇದರ ಉತ್ಕೃಷ್ಟತೆಯು ಅನ್ಯಾನ್ಯ ಭಾಷೆಗಳಲ್ಲಾಗುತ್ತಿರುವ ಇದರ ಭಾಷಾಂತರಗಳಿಂದಲೇ ವ್ಯಕ್ತವಾಗುತ್ತದೆ. ದೇಶೀಯ ಭಾಷೆಗಳಲ್ಲಲ್ಲದೆ ಇಂಗ್ಲೀಷು ಮೊದಲಾದ ಪಾಶ್ಚಾತ್ಯ ಭಾಷೆಗಳಲ್ಲೂ ಇದರ ತರ್ಜುಮೆಯಾಗಿದೆ. ಪ್ರಕೃತ ಕನ್ನಡದಲ್ಲಿಯೂ ಅದರ ಭಾಷಾಂತರವಾದದ್ದು ನೋಡಿದರೆ ನಮ್ಮ ಸಾಹಿತ್ಯದಲ್ಲಿದೊಂದು ಅಭಾವವು ದೂರವಾಯಿತೆಂದು ಧಾರಾಳವಾಗಿ ಹೇಳಬಹುದು. ಕರ್ನಾಟಕ ಸಾಹಿತ್ಯ ನಂದನವನದಲ್ಲಿ ತುಲಸೀರಾಮಾಯಣದ ಭಾಷಾಂತರದಿಂದ ತುಲಸಿಯ ಪರಿಮಳವು ಬೀರಿತೆಂದು ನಮ್ಮ ಅಭಿಮತವು. ಅದರ ಸುಗಂಧವನ್ನು ಸೇವಿಸಿ ಕೃತಾರ್ಥರೆನಿಸುವ ಕನ್ನಡಿಗರ ಸಂಖ್ಯೆಯು ದಿನೇದಿನೇ ಹೆಚ್ಚಲೆಂದು ಹಾರೈಸುವೆವು. ದಯಾಳುಗಳಾದ ನಮ್ಮ ಸರ್ಕಾರದವರು ಕೂಡ ವಿದ್ಯಾಲಯ, ವಾಚನಾಲಯಗಳಿಗೆ ಈ ಗ್ರಂಥವನ್ನು ಶಿಪಾರಸ್ ಮಾಡಿರುವುದು ಪರಮ ಶ್ಲಾಘನೀಯವು. ಇದರಂತೆ ಮುಂಬಯಿ, ಮದರಾಸ್ ವಿದ್ಯಾಖಾತೆಯವರು ಮಾಡಿದರೆ ಒಳ್ಳೆಯದು.

ಸರಸ್ವತಿಯ ಭಕ್ತರೆಲ್ಲರೂ ತುಲಸೀರಾಮಾಯಣದ ಗ್ರಾಹಕರಾಗಬೇಕೆಂಬುದೇ ನಮ್ಮ ಪ್ರಾರ್ಥನೆ.

ವಾರ್ಷಿಕಚಂದಾ—ಸಾಧಾರಣಕಾಗದ ರೂ. ೪-೦-೦

ಉತ್ತಮಕಾಗದ ೫-೦-೦, ಬಿಡಿಸಂಚಿಕೆ ೦-೮-೦

ನೀರಿನಲ್ಲಿ ಜೇನಿನ ಒಂದು ತೊಟ್ಟು ಹಾಕಲು ಅದು ಕರಗದೆ ಇದಕ್ಕಿದ್ದಂತೆ ಇದ್ದರೆ ಉತ್ತಮ ಜೇನುತುಪ್ಪವು; ಕರಗಿದರೆ ಅದು ಬೆರಿಕೆಯೆಂದರ್ಥವು.

೦ ೦ ೦

ಸ್ವಲ್ಪ ಹಾಲಿನಲ್ಲಿ ಮೂರುತೊಟ್ಟು ನೈಟ್ರಿಕ್ ಆಸಿಡ್ ಹಾಕಿದರೆ ಹಾಲು, ನೀರು ಬೇರೆ ಬೇರೆಯಾಗುವುದು. ಇದರಿಂದ ಒಳ್ಳೆಯ ಹಾಲನ್ನು ಗೊತ್ತುಹಚ್ಚಬಹುದು.

೦ ೦ ೦

ಒಂದು ಶೀಶೆಯಲ್ಲಿ ಶುದ್ಧ ಹಾಲನ್ನೂ, ಮತ್ತೊಂದರಲ್ಲಿ ನೀರು ಬೆರಸಿದ ಹಾಲನ್ನೂ ತುಂಬಿಸಿ ತೂಕಮಾಡಿದರೆ ಹಗುರವಾದ ಬಾಗವು ನೀರು ಬೆರೆತ ಹಾಲಿನದೆಂದು ತಿಳಿಯಬೇಕು.

೦ ೦ ೦

ಭಂಗಾರದ ಆಭರಣಗಳ ಮೇಲೆ ಎರಡು ತೊಟ್ಟು ನೈಟ್ರಿಕ್ ಆಸಿಡ್ ಹಾಕಿದ ಕೂಡಲೆ ಅಲ್ಲಿ ಬಿಳೀಕಳೆ ಬಂದರೆ ಅದು ಬೆಟ್ಟೆ ಭಂಗಾರವೆಂದರ್ಥವು.

೦ ೦ ೦

ಬಿಳಿಕಾಗದದಮೇಲೆ ಪನ್ನೀರನ್ನು, ಅತ್ತರನ್ನು ಎರಡು ತೊಟ್ಟು ಚಿಮಿಕಿಸಿ ಅವನ್ನು ಬೆಂಕಿಯ ಏರಿಯಲ್ಲಿ ಹಿಡಿದಾಗ ಕಳೆ ಹಾರಿಹೋದರೆ ಅದು ತಾಜಾ ಅತ್ತರ್

೦ ೦ ೦

ಬೆಂಕಿಯಲ್ಲಿ ಹಾಕುತ್ತಲೇ ಗಮಗಮಿಸುವ, ವಾಸನೆಕೊಡುವ ಹಿಂಗು ಶುದ್ಧವಾದುದು.

---

# ಸುಮನ ಸಂಚಯ.

ವಿವಾಹ ಸಂಬಂಧವಾದ ಕೆಟ್ಟ ಕಟ್ಟಳೆಗಳ ಸುಧಾರಣೆಯಾಗುವುದು ಹೇಗೆ? ವ್ಯಾಖ್ಯಾನಗಳಿಂದ ಎಷ್ಟು ಕಾರ್ಯವಾಗಬಹುದು? ನೀತಿಶಿಕ್ಷಣದಲ್ಲಿ ಈ ತರದ ಸುಧಾರಣೆಯ ಮೂಲವಿದೆ. ನೀತಿಶಿಕ್ಷಣವೆಂದರೆ ಯಾರಿಗೆ ತಿಳುವಳಿಕೆಯಿದೆಯೋ ಅವರು ಅದನ್ನು ಅನುಷ್ಠಾನದಲ್ಲಿ ಕಾರ್ಯರೂಪಕ್ಕೆ ತರುವುದು ಮತ್ತು ಹೀಗೆ ಮಾಡುವುದರಿಂದ ಉಂಟಾಗುವ ಕಷ್ಟಗಳನ್ನು ಸಹಿಸುವುದು.

ವಿಧವಾ ವಿವಾಹವು ಅವಶ್ಯಕವು. ಯುವಕವರ್ಗವು ಶುದ್ಧಿಯಾದಾಗಲೇ ಇದು ಸಾಧ್ಯವಾಗುವುದು. ಆದರೆ ಯುವಕರಲ್ಲಿ ಅಂತಹ ಶುದ್ಧಿಯಿಲ್ಲದೆ? ಅವರು ತಮ್ಮ ಶಿಕ್ಷಣದ ಸದ್ವಿನಿಯೋಗವನ್ನು ಮಾಡುತ್ತಿರುವರೆ?..............ಶಿಕ್ಷಿತರೆನಿಸಿದವರೆಷ್ಟು

ತಮ್ಮಲ್ಲಿಯ ಬಾಲವಿಧವೆಯರ ಜೀವನವನ್ನು ಸುಧಾರಿಸಿರುವರು. ಸ್ತ್ರೀಜಾತಿಯನ್ನು ಮಾತೃ ಹಾಗೂ ಭಗಿನೀವರ್ಗವೆಂದು ತಿಳಿದು, ಅವರ ರಕ್ಷಣೆಯನ್ನು ಎಷ್ಟು ಜನರು ಮಾಡಿರುವರು? ತಮಗೆ ಸತ್ಯವೆಂದು ತಿಳಿದುದನ್ನು ಎಷ್ಟು ಜನರು ಆಚರಿಸಿರುವರು ಯಾರ ಬಳಿಗೆ ಹೋಗಿ ವಿಧವೆಯು ತನ್ನ ಕಷ್ಟನಿಷ್ಠೂರಗಳನ್ನು ವಿವರಿಸಬಲ್ಲಳು ನಾನು ವಿಧವೆಯರ ವಕಾಲತ್ತನ್ನಾದರೂ ಯಾರಮುಂದೆ ವಹಿಸಲಿ? ಯಾರಿ ಪ್ರೋತ್ಸಾಹಕೊಡಲಿ? ಎಷ್ಟು ಮಂದಿ ಬಾಲವಿಧವೆಯರು 'ನವಜೀವನ' ವನ್ನು ಓದುತ್ತಾರೆ? ಓದಿದವರಲ್ಲಿಷ್ಟುಮಂದಿ ಅವರಂತೆ ಆಚರಿಸಿರುವರು? ಆದರೂ ಅವ ಬಿದ್ದಾಗ 'ನವಜೀವನ' ದಲ್ಲಿ ವಿಧವೆಯರ ಆರ್ತನಾದವನ್ನು ಪ್ರಕಟಪಡಿಸುತ್ತೇನೆ (ಆದ್ದರಿಂದ ಹಿಂದೀ ಭಾಷೆಯನ್ನು ಕಲಿತರೆ ಮಹಾತ್ಮರ ದಿವ್ಯವಾಣಿಯನ್ನು ಓದಬಹುದು. ಪ್ರಕೃತ ಸೌಭಾಗ್ಯವಶದಿಂದ ನವಜೀವನದ ಭಾಷಾಂತರವು ಉಡು ಪಿಯ ಸಾಪ್ತಾಹಿಕ 'ಸತ್ಯಾಗ್ರಹಿ' ಯಲ್ಲಿ ಮಾತ್ರ ಪ್ರಕಟವಾಗುತ್ತಿದೆ.) ಸುಸಮಯ ಬಂದರೆ ಇನ್ನೂ ಹಾಗೆ ಮಾಡುವೆನು. ಅದುತನಕ ವೃಥಳೆಯಿಂದ ಇಷ್ಟುಮಾತ್ರ ಹೇಳಲಿಚ್ಛಿಸುತ್ತೇನೆ: ಯಾರ ಆಶ್ರಯದಲ್ಲಿ ಬಾಲವಿಧವೆಯುವರಿರುವರೋ, ಅವರು ಅವರಿಗೆ ವಿವಾಹಮಾಡಿಕೊಡುವುದು ನಿಜಧರ್ಮವೆಂದು ತಿಳಿಯಬೇಕು.

'ಭಾರತ ಭಾಗ್ಯವಿಧಾತಾ' ಮಹಾತ್ಮ ಗಾಂಧಿ

ж ж ж

ಹಿಂದೂ ಜಾತಿಯ ಕೋಶದಲ್ಲಿ ಮೂರು ದೊಡ್ಡದೊಡ್ಡ ಛಿದ್ರಗಳಿವೆ. ಆದರಿಂ ಜೀವನವು ತಡೆಯಿಲ್ಲದೆ ಹೊರಸೂಸುತ್ತದೆ. ಅದು ಖಾಲಿಯಾಗದಂತೆ ಭರ್ತಿಯನ್ನು ಪೂರ್ತಿಮಾಡುವ ಉಪಾಯವೊಂದೂ ಕಾಣುವುದಿಲ್ಲ. ಬರಿದಾಗುವ ಸ್ಥಳವು ಬರಿದಾ ಗಿಯೇ ಉಳಿಯುತ್ತದೆ. ಬರಿದಾಗುವ ಅಂಶವು, ಭರ್ತಿಯಾಗದಂಥಾ ಸ್ಥಿತಿಯ ಯಾವ ಕೋಶಕ್ಕಿದೆಯೋ ಅದು ಇಂದಲ್ಲವಾದರೆ ನಾಳೆ ಬರಿದಾಗಿಯೇ ಹೋಗುತ್ತದೆ ಕಡಿಮೆಯಾಗುತ್ತಲೇ ಇದ್ದರೆ ಕುಬೇರನ ಖಜಾನೆಯೂ ಖಾಲಿಯಾಗುವುದು ನದಿಗಳು ಸಮುದ್ರಕ್ಕೆ ಸೇರದಿದ್ದರೆ ಒಂದು ದಿನ ಅವೂ ಬತ್ತಿಹೋಗಬಹುದು ಸೃಷ್ಟಿಯ ನಿಯಮವು ಹಿಂದೂಜಾತಿಗೊಂದುರೀತಿ ಬೇರೆಯಾಗುವುದಿಲ್ಲ. ಅಸ್ಪೃಶ್ಯ ವಿಧರ್ಮಿಯರ ಹಾವಳಿ ಮತ್ತು ವಿಧವೆಯರ ದುರವಸ್ಥೆ ಇವೇ ಮೇಲೆಕಂಡ ಮೂರು ಛಿದ್ರಗಳು. ಈ ಮೂರು ಮಾತುಗಳ ಕಡೆಗೆ ಧರ್ಮಧುರೀಣರೆನಿಸಿದವರು ಸಮಾಜ ಸುಧಾರಣೆಮಾಡಲು ಮುಂದುವರಿದು ಬರುವ ದಿನವೇ ಸುದಿನ. ಶಾಸ್ತ್ರವೇತ್ತರೆಂಬವರು ಗೊಡ್ಡು ಸಿದ್ಧಾಂತಗಳನ್ನು ಇನ್ನಾದರೂ ಬಿಡಲಿ!

'ಪತಿತಪಾವನ' ಸ್ವಾಮಿ ಶ್ರದ್ಧಾನಂದ